

# ಕ್ರಾಂತಿಕಾರ ಡಾ. ಅಂಬೇಡ್ಕರ್

(ಸಂಕ್ಷಿಪ್ತ ಆವೃತ್ತಿ)



ದೇ. ಜವರೇಗೌಡ



ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

# ಕ್ರಾಂತಿಕಾರ ಡಾ. ಅಂಬೇಡ್ಕರ್

(ಸಂಕ್ಷಿಪ್ತ ಆವೃತ್ತಿ)

ದೇ. ಜವರೇಗೌಡ




ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

KRANTHIKARA Dr. AMBEDKAR (Samkshipta Avruthi) by Prof. D. Javare Gowda, Published by Prasaranga, Bangalore University, Bangalore. Pp. 213+viii



ಪ್ರಕಾಶಕರು
ಕೆ. ಸಿ. ಶಿವಪ್ಪ
ನಿರ್ದೇಶಕರು (ಕಾರ್ಯನಿರ್ವಾಹಕ), ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು 560 056

ಪ್ರಕಟಣ ಸಹಾಯಕರು :
ಅಂದನೂರು ಶೋಭಾ

ಬೆಲೆ : [illegible]

ಮುದ್ರಣ
ಬೆಂಗಳೂ[illegible]ವಿದ್ಯಾಲಯ ಮುದ್ರಣಾಲಯ, ಬೆಂಗಳೂರು

## ಪ್ರಕಾಶಕರ ಮಾತು

ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುವ ಉದ್ದೇಶದಿಂದ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಪಠ್ಯ ಹಾಗೂ ಪಠ್ಯೇತರ ಕೃತಿಗಳನ್ನು ಪ್ರಕಟಿಸುವುದರ ಜೊತೆಗೆ ಇತರ ವಿಷಯ ಗಳಲ್ಲಿ ಪ್ರಸಿದ್ಧರಾದ ವಿದ್ವಾಂಸರಿಂದ ಗ್ರಂಥಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಕಾರ್ಯವನ್ನು ನಿರ್ವಹಿಸುತ್ತಿದೆ. ಆಧುನಿಕ ಕನ್ನಡ ಸಾಹಿತ್ಯದ ಆವರಣಕ್ಕೆ ಅಗತ್ಯವಾದ ಹಾಗೂ ಜನಸಾಮಾನ್ಯರಿಗೆ ಜ್ಞಾನವನ್ನು ನೀಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ವಶಾಸ್ತ್ರ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ, ಜಾನಪದ, ಸಾಮಾಜಿಕ ಹಾಗೂ ಮಾನಸಿಕಶಾಸ್ತ್ರ ಮುಂತಾದ ವಿಷಯಗಳನ್ನು ಕುರಿತ ಅನೇಕ ಹೊತ್ತಿಗೆಗಳನ್ನು ಈಗಾಗಲೇ ಪ್ರಸಾರಾಂಗ ಪ್ರಕಟಿಸಿದೆ. ಮುಂದೆಯೂ ಇಂಥ ಹಲವಾರು ವಿಷಯಗಳ ಮೇಲೆ ಅನೇಕ ಕೃತಿಗಳನ್ನು ಪ್ರಕಟಿಸುವ ಉದ್ದೇಶವನ್ನು ಪ್ರಸಾರಾಂಗ ಹೊಂದಿದೆ.

ಪ್ರೊ. ದೇ. ಜವರೇಗೌಡ ಅವರು ಬರೆದ "ಕ್ರಾಂತಿಕಾರ ಡಾ. ಅಂಬೇಡ್ಕರ್" ಕೃತಿಯನ್ನು ಪ್ರಸಾರಾಂಗ 1978ರಲ್ಲಿ ಪ್ರಕಟಿಸಿತ್ತು. ಈ ಕೃತಿ ಸಂಕ್ಷಿಪ್ತ ರೂಪದಲ್ಲಿ ಈ ವರ್ಷ (1982-83) ಬೆಂಗಳೂರು ವಿಶ್ವವಿದ್ಯಾಲಯದ ಮೊದಲ ಬಿ.ಎ., ಬಿ.ಎಸ್‌ಸಿ., ಮತ್ತು ಬಿ.ಕಾಂ., ತರಗತಿಗಳ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿ ನಿಯಮಿತವಾಗಿದೆ. ಅದಕ್ಕನುಗುಣವಾಗಿ ಮೂಲಕ್ಕೆ ನ್ಯೂನತೆ ಯಿಲ್ಲದೆ, ಕೃತಿಯನ್ನು ಸಂಗ್ರಹಿಸಿಕೊಡುವಂತೆ ಪ್ರಾಧ್ಯಾಪಕ ದೇ. ಜವರೇಗೌಡ ಅವರನ್ನು ಕೇಳಿಕೊಂಡೆವು. ಲೇಖಕರು ತುಂಬು ಮನಸ್ಸಿನಿಂದ ಕೃತಿಯನ್ನು ಅಚ್ಚುಕಟ್ಟಾಗಿ ಸಂಗ್ರಹಿಸಿ ಕೊಟ್ಟಿದ್ದಾರೆ. ಅದರ ಸಂಕ್ಷಿಪ್ತ ಆವೃತ್ತಿ ಈ ಪುಸ್ತಕ.

ಡಾ. ಅಂಬೇಡ್ಕರ್ ಅವರ ವ್ಯಕ್ತಿತ್ವ-ಚಿಂತನೆ, ಸಾಧನೆ-ಸಿದ್ಧಿ ಯುವಪೀಳಿಗೆಗೊಂದು ಆದರ್ಶಮಯವಾದದ್ದು. ಅಂಬೇಡ್ಕರರ ವಿಚಾರಗಳು ಅವರ ಅನೇಕ ಕೃತಿಗಳಲ್ಲಿ ಪ್ರಕಟಗೊಂಡಿದ್ದರೆ, ಅವರ ಹೋರಾಟದ ಬದುಕು ಇತರರ ಕೃತಿಗಳ ರಚನೆಗೆ ವಸ್ತುವಾಗಿದೆ. ಸಮಾಜದಲ್ಲಿ ನೋವನುಂಡು ಬಳಲಿದ ಜನಾಂಗಕ್ಕೆ ಜಾಗೃತಿ, ಆತ್ಮವಿಶ್ವಾಸವನ್ನು ಮೂಡಿಸಿದ ಹಿರಿಯ ವ್ಯಕ್ತಿ ಡಾ. ಅಂಬೇಡ್ಕರ್.

ಅಂಬೇಡ್ಕರ್ ಅವರ ಬದುಕು, ಬರಹ, ಜೀವನ ಸಿದ್ಧಾಂತವನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿ, ಓದುಗರ ಮೆಚ್ಚುಗೆಗೆ ಪಾತ್ರರಾದ ಪ್ರೊ. ದೇಜಗೌ ಅವರು ಸಂಕ್ಷಿಪ್ತ ರೂಪದಲ್ಲಿ ಹೊತ್ತಿಗೆಯನ್ನು ಪ್ರಕಟಿಸಲು ನೆರವಾಗಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ಪರವಾಗಿ ಅವರಿಗೆ ನನ್ನ ಅನಂತ ವಂದನೆಗಳು. ಪಠ್ಯಪುಸ್ತಕವನ್ನಾಗಿ ನಿಯಮಿಸಿದ ಕನ್ನಡ ಪಠ್ಯಪುಸ್ತಕ ನಿಯಾಮಕ ಮಂಡಲಿಗೂ, ಅದರ ಅಧ್ಯಕ್ಷರಾದ ಡಾ. ಜಿ. ಎಸ್. ಶಿವರುದ್ರಪ್ಪನವರಿಗೂ ನಾನು ತುಂಬ ಆಭಾರಿ. ಈ ಕೃತಿಯನ್ನು ಸಕಾಲದಲ್ಲಿ ಮುದ್ರಿಸಿದ ವಿಶ್ವವಿದ್ಯಾಲಯದ ಸಿಬ್ಬಂದಿವರ್ಗ ಅಭಿನಂದನೆಗೆ ಪಾತ್ರರು.

**ಕೆ. ಸಿ. ಶಿವಪ್ಪ**

ಜೂನ್ 24, 1982

ನಿರ್ದೇಶಕ (ಕಾರ್ಯನಿರ್ವಾಹಕ)

ಪ್ರಸಾರಾಂಗ

## ಲೇಖಕರ ಮಾತು

1978 ನೆಯ ಇಸವಿಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದ ವತಿಯಿಂದ 'ಕ್ರಾಂತಿಕಾರ ಡಾ. ಅಂಬೇಡ್ಕರ್' ಎಂಬ ನನ್ನ ಗ್ರಂಥ ಪ್ರಕಟಗೊಂಡಿತ್ತು. ಆಗ ಅದರ ಪ್ರಕಟಣೆಗೆ ನೆರವಾದವರು ಅಂದಿನ ನಿರ್ದೇಶಕರಾದ ಶ್ರೀ ಹೆಚ್. ಆರ್. ದಾಸೇಗೌಡರು. ಆ ಗ್ರಂಥದ ಸಂಕ್ಷಿಪ್ತರೂಪವನ್ನೀಗ ಅದೇ ಪ್ರಸಾರಾಂಗ ಪ್ರಕಟಿಸುತ್ತಿದೆ.

1982-83ನೆಯ ಸಾಲಿನ ಬೆಂಗಳೂರು ವಿಶ್ವವಿದ್ಯಾಲಯದ ಪದವಿ ಪರೀಕ್ಷೆಗೆ ಪಠ್ಯಪುಸ್ತಕವನ್ನಾಗಿ ಗೊತ್ತುಮಾಡಿದ್ದರಿಂದ ಸಂಕ್ಷಿಪ್ತ ರೂಪದ ಈ ಕೃತಿಯನ್ನು ಪ್ರಕಟಿಸುವ ಅವಕಾಶ ದೊರೆಯಿತು. ಇಂಥ ಅವಕಾಶಕ್ಕೆ ಕಾರಣರಾದವರು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರೂ, ಕನ್ನಡ ಪ್ರಾಧ್ಯಾಪಕರೂ, ವರಕವಿಗಳೂ ಆದ ಡಾ. ಜಿ. ಎಸ್. ಶಿವರುದ್ರಪ್ಪನವರು, ಹಾಗೂ ಅಧ್ಯಯನ ಮಂಡಲಿ. ಅವರಿಗೂ ಮಂಡಲಿಯ ಸದಸ್ಯರಿಗೂ ನನ್ನ ವಂದನೆ ಗಳು ಸಲ್ಲುತ್ತವೆ.

ಇದನ್ನು ಶೀಘ್ರವಾಗಿ ಮುದ್ರಿಸಿ, ಪ್ರಕಟಿಸಲು ನೆರವಾದ ಪ್ರಸಾರಾಂಗದ ಮುಖ್ಯಸ್ಥರಾದ ಶ್ರೀ ಕೆ. ಸಿ. ಶಿವಪ್ಪನವರಿಗೂ, ಅವರ ಸಿಬ್ಬಂದಿ ವರ್ಗಕ್ಕೂ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

24-6-1982
ಮೈಸೂರು-12

ದೇಜಗೌ

## ಪರಿವಿಡಿ


| | |
|---|---|
| ಪರಿಸರ | 1 |
| ಅರುಣೋದಯ | 11 |
| ವಿಕಾಸ | 36 |
| ಸಾಧನೆ | 52 |
| ಯಶೋವೈಭವ | 74 |
| ಅಗ್ನಿದಿವ್ಯ | 102 |
| ರಾಷ್ಟ್ರನಾಯಕ | 122 |
| ರಾಜ್ಯಾಂಗವಿಧಾತ | 146 |
| ಬುದ್ಧಂ ಶರಣಂ ಗಚ್ಛಾಮಿ | 175 |

# ಪರಿಸರ

ಆದಿ ಮಾನವನ ಕಾಲದಿಂದ ಮತ ಮಾನವ ಜೀವನವನ್ನು ಒಂದಲ್ಲ ಒಂದು ರೀತಿಯಿಂದ ರೂಪಿಸುತ್ತಿದೆಯಲ್ಲದೆ, ಲೋಕದಲ್ಲಿ ಅದನ್ನು ಮೀರಿಸಿದ ಶಕ್ತಿ ಮತ್ತೊಂದಿಲ್ಲವೆಂದೇ ಹೇಳಬಹುದು. ಅದು ಮನುಷ್ಯರನ್ನೊಟ್ಟು ಗೂಡಿಸಿ, ಸಾಮಾಜಿಕ ಭದ್ರತೆಯನ್ನು ಕಾಪಾಡಿರುವುದುಂಟು, ಆಧ್ಯಾತ್ಮಿಕ ಸಾಧನೆಗೆ ನೆರವಾಗಿರುವುದುಂಟು. ಅದು ಮನುಕುಲದ ವಿಭಜನೆಗೆ ಕಾರಣ ವಾಗಿರುವಂತೆ, ಅದರ ಹೆಸರಿನಲ್ಲಿ ಯುದ್ಧಗಳು ನಡೆದು, ಭೂಮಿಯೆಲ್ಲ ರಕ್ತ ದಿಂದ ತೊಯ್ದಿರುವುದೂ ಉಂಟು. ತಂತಮ್ಮ ಧರ್ಮವೇ ಸರ್ವಶ್ರೇಷ್ಠ ವೆಂದೂ, ಅದನ್ನು ನಂಬಿದವರಿಗೆ ಸ್ವರ್ಗಸುಖ ಖಾತರಿಯೆಂದೂ ವಿವಿಧ ಧರ್ಮಬೋಧಕರು ಬೆಳಗಿನಿಂದ ಸಂಜೆಯವರೆಗೆ ಪ್ರಚಾರ ಮಾಡುವುದುಂಟು. ಹಿಂದೂ ಧರ್ಮ ಅಪೌರುಷೇಯವಾದುದೆಂದೂ, ವಿಶ್ವವಿಶಾಲವಾದುದೆಂದೂ, ಸರ್ವಗ್ರಾಹಿಯೆಂದೂ, ಅನ್ಯ ಧರ್ಮಗಳಲ್ಲಿರುವ ಮತ್ತು ಇಲ್ಲದಿರುವ ವಿಶೇಷ ಗುಣಗಳು ಇದರಲ್ಲುಂಟೆಂದೂ ಆಚಾರ್ಯರು ಹೆಮ್ಮೆ ಪಡುವುದುಂಟು. ಅದು ಏಕಾಖಂಡವಾದ ವ್ಯವಸ್ಥೆಯಾಗಿರದೆ, ಬಹು ಸಂಸ್ಕೃತಿಗಳ ಸಮ್ಮಿಶ್ರವಾಗಿದೆ ಯೆಂಬ, ಅನೇಕ ವಿಸಂಗತಿ ವಿರೋಧಾಭಾಸಗಳ ಉಗ್ರಾಣವಾಗಿದೆಯೆಂಬ, ತಾರತಮ್ಯ ಸಿದ್ಧಾಂತದ ಮತ್ತು ನಾನಾ ಭೇದ ಪ್ರಭೇದಗಳ ಮೂಲಕ ಅದು ಹಲವಾರು ದುರ್ಗಮ ದ್ವೀಪಗಳ ಸಮಾಜವಾಗಿದೆಯೆಂಬ, ಅದರ ಜೀವಾಳ ವೆನ್ನುವಂತಿರುವ ಸನಾತನ ಸಂಪ್ರದಾಯಾಚರಣೆಗಳು ಮತ್ತು ಜೀವನ ಸಿದ್ಧಾಂತಗಳು ಪ್ರಜಾಸತ್ತೆಯ ತತ್ತ್ವತ್ರಯಗಳಾದ ಸ್ವಾತಂತ್ರ್ಯ, ಸಮಾನತೆ,

ಸೋದರತ್ವಗಳಿಗೆ ಪೂರ್ಣ ವಿರೋಧವಾಗಿದೆಯೆಂಬ ಆಧುನಿಕ ವೈಜ್ಞಾನಿಕ ದೃಷ್ಟಿಯ ಅಭಿಪ್ರಾಯಕ್ಕೂ ಈಚೀಚೆಗೆ ಮನ್ನಣೆ ದೊರೆಯುತ್ತಿದೆ.

ಸಾಮಾಜಿಕ ವಿಭಜನೆ, ತಾರತಮ್ಯಶ್ರೇಣಿ, ಪೌರ ಮತ್ತು ಧಾರ್ಮಿಕ ಅಧಿಕಾರ ಅನಧಿಕಾರಗಳು, ವೃತ್ತಿವರಣ ನಿಷೇಧ–ಇವು ಹಿಂದೂ ಸಮಾಜದ ಮೂಲಭೂತ ತತ್ತ್ವಗಳಾಗಿವೆ. ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಈ ಎಲ್ಲ ತತ್ತ್ವಗಳು ಅಡಕವಾಗಿವೆ. ಮನುವಿನ ಪ್ರಕಾರ ವೃತ್ತಿವಿಭಜನೆ ಮತ್ತು ಸಾಮಾಜಿಕಾರ್ಥಿಕ ಸ್ಥಾನಮಾನಗಳು ಹುಟ್ಟನ್ನವಲಂಬಿಸುತ್ತವೆ. ಬಡಗಿಯ ಮಗ ಮೊಮ್ಮಗ ಮುಮ್ಮಗ ಮರಿಮಗ ಎಲ್ಲರೂ ಬಡಗಿಯಾಗುಳಿಯುತ್ತಾರೆ. ನಿಯಮೋಲ್ಲಂಘನೆ ಮಾಡಿದ ಜನ ಸಮಾಜದಿಂದ ಬಹಿಷ್ಕೃತರಾಗಿ ಅ-ಹಿಂದು ವಾಗುತ್ತಾರೆ. ಪ್ರತಿಭೆ ಮನೋಧರ್ಮಗಳಿಗನುಗುಣವಾಗಿ ಯಾರೂ ಹೊಸ ವೃತ್ತಿ ಹಿಡಿಯುವಂತಿಲ್ಲ. ಶೂದ್ರ ಮಕ್ಕಳಿಗೆ ವಿದ್ಯೆ ಕಲಿಸುವಂತಿಲ್ಲ, ಅವರು ಕತ್ತಿ ಹಿಡಿಯುವಂತಿಲ್ಲ; ಆಸ್ತಿ ಮಾಡುವಂತಿಲ್ಲ ; ಸೇವಾವೃತ್ತಿಯೊಂದೇ ಅವರ ಜೀವನ ಧರ್ಮ. ಬ್ರಾಹ್ಮಣರು ಭೂಸುರರಾದ್ದರಿಂದ ದೊರೆಗಳು ಸಹ ಅವರ ಆಸ್ತಿಯನ್ನು ಮುಟ್ಟುವಂತಿಲ್ಲ ; ಅವರು ಶೂದ್ರರ ಆಸ್ತಿಯನ್ನ ಪಹರಿಸಿಕೊಂಡದ್ದಾದರೆ ಅಪರಾಧವಾಗುವುದಿಲ್ಲ. ಬ್ರಾಹ್ಮಣ ತರುಣಿಯಲ್ಲನುರಕ್ತ ನಾದ ಶೂದ್ರ ಮರಣದಂಡನೆಗೆ ಗುರಿಯಾಗುತ್ತಾನೆ ; ಶೂದ್ರ ತರುಣಿಯನ್ನು ಮೋಹಿಸಿದ ಬ್ರಾಹ್ಮಣ ಕುಲದಿಂದ ಬಹಿಷ್ಕೃತನಾಗುತ್ತಾನೆ; ಇಲ್ಲವೆ ಪ್ರಾಯ ಶ್ಚಿತ್ತ ಅಥವಾ ಶುದ್ಧಿಯ ಮೂಲಕ ಪುನರ್ಜನ್ಮ ಪಡೆಯುತ್ತಾನೆ. ಶೂದ್ರನನ್ನು ಕೊಂದ ಉತ್ತಮ ಕುಲದವರಿಗೆ ಶಿಕ್ಷೆಯಿಲ್ಲ ; ಉತ್ತಮ ಕುಲದವರನ್ನು ಕೊಂದ ಶೂದ್ರರಿಗೆ ಮರಣದಂಡನೆಯೇ ಕನಿಷ್ಠ ಶಿಕ್ಷೆ.

ಶೂದ್ರರಲ್ಲದೆ ಅತಿಶೂದ್ರರೆಂದೂ, ಅವರ್ಣೀಯರೆಂದೂ, ಅಸ್ಪೃಶ್ಯ ರೆಂದೂ, ಅಂತ್ಯಜರೆಂದೂ ಹೆಸರಾಂತ ಜನ ಹಿಂದೂ ಸಮಾಜದ ಅಂಗ ವಾಗಿದ್ದೂ ಪಶುಗಳಿಗಿಂತ ಕಡೆಯಾಗಿ ಬಾಳು ಸಾಗಿಸುತ್ತಿದ್ದುದುಂಟು. ಪರಿ ಚಾರಿಕೆಯ ವೃತ್ತಿಯನ್ನು ಎರಡು ಭಾಗವಾಗಿ ವಿಂಗಡಿಸಿ, ಕೀಳ್ತರದ ಸೇವೆಗೆ ಅಂತ್ಯಜರನ್ನು ಹಚ್ಚುತ್ತಿದ್ದುದುಂಟು. ಶೂದ್ರಗಿತ್ತಿ ಬ್ರಾಹ್ಮಣರ ಮನೆಯೊಳಗೆ ಓಡಾಡಿಕೊಂಡು ಕಸಮುಸುರೆ ತೊಳೆಯಬಹುದು, ಪಾತ್ರೆ ಪರಡಿ ಬೆಳಗ ಬಹುದು ; ಅವಳು ಕರೆದ ಹಸುವಿನ ಹಾಲನ್ನು ಕುಡಿಯಬಹುದು, ಕಾಯಿಸಿದ ತುಪ್ಪ ತಿನ್ನಬಹುದು ; ಆದರೂ ಅವಳನ್ನು ಮುಟ್ಟಿಸಿಕೊಳ್ಳುವಂತಿಲ್ಲ. ಅಸ್ಪೃಶ್ಯ

ರಂತು ಬ್ರಾಹ್ಮಣರ ಮನೆಯೊಳಗಿರಲಿ, ಅವರ ಕೇರಿಯಲ್ಲಿಯೇ ಸುಳಿಯು ವಂತಿಲ್ಲ. ಅವರು ಪ್ರಾಣಿಗಳನ್ನು ಸಾಕುವಂತಿಲ್ಲ; ಲೋಹ ಅದರಲ್ಲಿಯೂ ಚಿನ್ನದ ಆಭರಣಗಳನ್ನು ಧರಿಸುವಂತಿಲ್ಲ. ಅವರು ಬೀದಿಯಲ್ಲಿ ತಿರುಗಾಡು ವಾಗ ಕೊರಳಿಗೊಂದು ಮಡಕೆ ಕಟ್ಟಿಕೊಂಡಿರಬೇಕು; ಎಂಜಲು ತೊಂಟೆ ಗಳನ್ನು ಅದರಲ್ಲಿಯೇ ಉಗುಳಬೇಕು. ಅವರು ಸಾರ್ವಜನಿಕ ಕೆರೆಕಟ್ಟೆ ಬಾವಿ ಗಳ ನೀರು ಬಳಸುವಂತಿಲ್ಲ; ಗುಡಿಗಳಿಗೆ ಹೋಗುವಂತಿಲ್ಲ; ಶೋಕಿಯು ಬಟ್ಟೆ ಉಡುವಂತಿಲ್ಲ; ಅವರ ವಾಸ ಊರ ಹೊರಗೆ.

ವೇದಗಳ ಕಾಲದಲ್ಲಿ ಜಾತೀಯತೆಯಿರಲಿಲ್ಲ: ಆವರವರ ಮನೋಧರ್ಮ ಶಕ್ತಿ ಸಾಮರ್ಥ್ಯಗಳಿಗೆ ತಕ್ಕಂತೆ ವೃತ್ತಿಗಳು ಬೇರ್ಪಟ್ಟಾಗ ವರ್ಣಗಳೂ, ಅವುಗಳ ಹಿಂದೆ ಜಾತಿಗಳೂ ಹುಟ್ಟಿಕೊಂಡವು. ಮೊದಮೊದಲು ಅವು ಪರಸ್ಪರ ಪ್ರತ್ಯೇಕವಾಗಿರಲಿಲ್ಲ; ಭಿನ್ನ ಭಿನ್ನ ಕೋಷ್ಠಗಳಾಗಿರಲಿಲ್ಲ. ವೃತ್ತಿ ಯಿಂದ ವರ್ಣ ಸೂಚಿತವಾಗುತ್ತಿತ್ತು; ಬ್ರಾಹ್ಮಣ ಕ್ಷತ್ರಿಯನಾಗಬಹುದಿತ್ತು, ಕ್ಷತ್ರಿಯ ಬ್ರಾಹ್ಮಣನಾಗಬಹುದಿತ್ತು. ಕಾಲಕ್ರಮೇಣ ಈ ಅದಲುಬದಲು ನಿಂತು, ಹುಟ್ಟೇ ವರ್ಣಜಾತಿಗಳಿಗೆ ಆಧಾರವಾಯಿತು. ಇತಿಹಾಸ ಪುರಾಣ ಗಳ ಕಾಲದಲ್ಲಿ ಈ ಪ್ರತ್ಯೇಕತೆ ಪ್ರಾರಂಭವಾಗಿ, ಒಂದೊಂದು ಜಾತಿಯೂ ಒಂದೊಂದು ದ್ವೀಪವಾಗಿ ಹಿಂದೂ ಸಮಾಜ ಛಿದ್ರವಿಚ್ಛಿದ್ರವಾಯಿತು. ವರ್ಣ ಜಾತಿ ವಿರಹಿತವಾದ ವೈದಿಕಧರ್ಮ ಬ್ರಾಹ್ಮಣರ ಪ್ರಾಬಲ್ಯದಿಂದ ಬ್ರಾಹ್ಮಣ ಧರ್ಮವಾಗಿ, ಸ್ಮೃತಿಕಾರರ ಕಾಲದಲ್ಲಿ ಭಿನ್ನವಿಭಿನ್ನ ಕೋಷ್ಠ ಗಳಿಂದ ಕೂಡಿದ ಹಿಂದೂ ಧರ್ಮವಾಗಿ ಪರಿಣಮಿಸಿತು. ಬ್ರಾಹ್ಮಣಧರ್ಮಕ್ಕೆ ವಿರುದ್ಧವಾಗಿ ಬುದ್ಧಧರ್ಮ ತಲೆಯೆತ್ತಿತೆಂದೂ, ಬೌದ್ಧಧರ್ಮದ ಅನು ಯಾಯಿಗಳು ಹಿಂದೂಧರ್ಮ ತಲೆಯೆತ್ತಿದಾಗ ಅಸ್ಪೃಶ್ಯರಾದರೆಂದೂ ಒಂದು ವಾದವುಂಟು. ಅಸ್ಪೃಶ್ಯತಾ ನಿರ್ಮೂಲನಕ್ಕೆ ರಾಮಾನುಜರಂಥ ಒಬ್ಬಿಬ್ಬರು ಸಾಧುಸಂತರು ಪ್ರಯತ್ನ ಮಾಡಿದ್ದುಂಟು. ಆದರೆ ಸಮಗ್ರಕ್ರಾಂತಿಯ ಪ್ರವರ್ತಕರಾದ ಬಸವಣ್ಣನವರು ಮಾತ್ರ ಈ ದಿಶೆಯಲ್ಲಿ ಯಶಸ್ಸುಗಳಿಸುತ್ತಿ ದ್ದಂತೆಯೇ ತಾವು ಪ್ರಾರಂಭಿಸಿದ ಕ್ರಾಂತಿಗಾಹುತಿಯಾದರು.

ಶೂದ್ರಾತಿಶೂದ್ರರನ್ನು ಹಿಂದೂ ಸಮಾಜದಲ್ಲಿ ಸಮಾವೇಶಗೊಳಿಸು ವುದರ ಔಚಿತ್ಯದ ಸಮರ್ಥನೆ ಕಷ್ಟವಾಗುತ್ತದೆ. ಹಿಂದೂ ಪದದ ನಿಷ್ಪತ್ತಿ ವಿಚಾರ ಸದ್ಯಕ್ಕೆ ಅನಗತ್ಯ. ವೇದಾದಿ ಪವಿತ್ರಗ್ರಂಥಗಳನ್ನು ನಂಬಿದವನು

ಮತ್ತು ಸ್ಮೃತಿಗಳಲ್ಲಿ ಉಕ್ತವಾಗಿರುವ ಸಂಸ್ಕಾರ ವಿಧಿಗಳನ್ನಾಚರಿಸುವವನು ಹಿಂದುವೆನಿಸಿಕೊಳ್ಳುತ್ತಾನಷ್ಟೆ. ಹಿಂದುವಾದವನು ನಲವತ್ತೆರಡು ಸಂಸ್ಕಾರಗಳನ್ನಾಚರಿಸಬೇಕೆಂದು ಗೌತಮಧರ್ಮಸೂತ್ರ ವಿಧಿಸುತ್ತದೆ. ಗರ್ಭದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ ಉಪನಯನ, ವಿವಾಹ, ಪಂಚಮಹಾಯಜ್ಞ—ಇವು ಅವುಗಳಲ್ಲಿನ ಕೆಲವು. ಕೆಲವು ಸ್ಮೃತಿಕಾರರು ಹದಿನಾರೇ ಸಾಕೆನ್ನುತ್ತಾರೆ. ಅವುಗಳಲ್ಲಿ ಉಪನಯನ ಮುಖ್ಯವಾದದ್ದು. ಉಪನಯನಾರ್ಹತೆಯಿಲ್ಲದ ಶೂದ್ರಾತಿಶೂದ್ರರೆಂತು ಹಿಂದುಗಳಾಗುತ್ತಾರೆ ಎಂಬ ಪ್ರಶ್ನೆ ತಲೆಯೆತ್ತದಿಲ್ಲ. ವೇದವೋದಿದ ಶೂದ್ರನ ನಾಲಗೆಯನ್ನು ಕತ್ತರಿಸಬೇಕೆಂದು ಸ್ಮೃತಿಕಾರರು ಆಜ್ಞಾಪಿಸುವಾಗ, ವೇದಗಳನ್ನು ಅವರು ನಂಬುವಂತೆಯೇ ಇಲ್ಲ. ಪುಂಸವನ ಸೀಮಂತಾದಿ ಸಂಸ್ಕಾರಗಳಿಗೂ ಶೂದ್ರರಿಗೂ ಧ್ರುವಾಂತರದಷ್ಟು ದೂರ. ವಿವಾಹ ಸಂಸ್ಕಾರ ಆದಿಮಾನವನ ಕಾಲದಿಂದ ಬಂದದ್ದು. ಶೂದ್ರರ ವಿವಾಹ ಪದ್ಧತಿಯಲ್ಲಿ ಸಪ್ತಪದಿಯ ಹೆಸರೇ ಇಲ್ಲ. ಸ್ಮೃತಿಕಾರರು ಕಂಡರಿಯದ ವಿಧಿನಿಷೇಧ ಸಂಪ್ರದಾಯಾಚರಣೆಗಳು ಶೂದ್ರಾತಿಶೂದ್ರವರ್ಗಗಳಲ್ಲಿ ಅನೂಚಾನವಾಗಿ ನಡೆದುಬಂದಿವೆ. ಇಂಥ ಪರಿಸ್ಥಿತಿಯಲ್ಲಿ ಶೂದ್ರಾತಿಶೂದ್ರರನ್ನು ಹಿಂದೂ ಸಮಾಜದ ಒಂದು ಭಾಗವೆಂದು ಪರಿಗಣಿಸುವುದೇ ಕಷ್ಟವಾಗುತ್ತದೆ. ಈ ದೃಷ್ಟಿಯಿಂದ ಅಂಬೇಡ್ಕರರು ಬೌದ್ಧಮತಾವಲಂಬಿಯಾದರೇ ಹೊರತು, ಮತಾಂತರ ಹೊಂದಿದರೆಂದು ಹೇಳಲಾಗದು. ಮುಸ್ಲಿಮಾಂಗ್ಲರೇ ಮೊದಲಾದ ವಿದೇಶೀಯರು, ನ್ಯಾಯಮೂರ್ತಿಗಳು ಮತ್ತು ಸಮಾಜ ವಿಜ್ಞಾನಿಗಳು ಶೂದ್ರಾತಿಶೂದ್ರರನ್ನು ಹಿಂದೂ ಮತದಲ್ಲಿ ಸೇರಿಸಿದ್ದೇ ಪರಮಾಶ್ಚರ್ಯವೆನ್ನಬೇಕಾಗಿದೆ.

ಭರತಖಂಡದಲ್ಲಿದ್ದ ರಾಜಮಹಾರಾಜರೆಲ್ಲ ಕ್ಷತ್ರಿಯರಲ್ಲ. ಅವರಲ್ಲಿ ಹಲವರಂತು ಶೂದ್ರರೇ ಆಗಿದ್ದರು. ಕುಂಬಾರರು, ಒಕ್ಕಲಿಗರು, ಬೇಡರು, ಪರಿವಾರರು ಪಾಳೆಯುಗಾರರಾಗಿ, ಸಾಮಂತರಾಗಿ, ರಾಜರಾಗಿ, ಬ್ರಾಹ್ಮಣರಿಂದ ಕ್ಷತ್ರಿಯರೆಂದು ಹೊಗಳಿಸಿಕೊಂಡು ರಾಜ್ಯವಾಳಿದ್ದುಂಟು. ಕರ್ನಾಟಕದ ಅನೇಕ ರಾಜಮನೆತನಗಳು ಇಂಥವು. ಉಪನಯನವಿಲ್ಲದೆ ಪಟ್ಟಾಭಿಷೇಕ ನಡೆಯುವಂತಿರಲಿಲ್ಲವಾದ್ದರಿಂದ, ಉಪನಯನ ಮಾಡಿಸಲು ಬ್ರಾಹ್ಮಣರು ಸಿದ್ಧರಾಗಿರಲಿಲ್ಲವಾದ್ದರಿಂದ ಶಿವಾಜಿ ಎಷ್ಟು ಪಾಡು ಪಡಬೇಕಾಯಿತೆಂಬುದು ಚರಿತ್ರೆಯ ವಿಷಯವಾಗಿದೆ. ದುರ್ದೈವದ ಸಂಗತಿಯೆಂದರೆ, ಶೂದ್ರರು

ಕ್ಷತ್ರಿಯತ್ವಕ್ಕೇರಿದಾಗ ಶೂದ್ರಾತಿಶೂದ್ರರನ್ನು ಮರೆತದ್ದು, ಬ್ರಾಹ್ಮಣರ ಕೈಗೂಸುಗಳಾಗಿ ಅವರು ಕುಣಿಸಿದಂತೆ ಕುಣಿದದ್ದು.

ಮುಸ್ಲಿಮ್ ದೊರೆಗಳು ಸಹ ಹಿಂದೂ ರಾಜರ ಜಾಡನ್ನೇ ತುಳಿದದ್ದು ಸೋಜಿಗದ ಸಂಗತಿಯಾಗಿದೆ. ಹಿಂದೂ ಸಮಾಜದ ಎಲ್ಲ ವರ್ಗಗಳ ಜನರನ್ನು ಮುಸ್ಲಿಮಾಂತರಗೊಳಿಸಿ, ಅವರಿಗೆ ಸಮಾನತೆಯನ್ನು ಕಲ್ಪಿಸಿದ ಜನರೇ ಹಿಂದೂ ಸಮಾಜದ ವರ್ಗಭೇದಗಳನ್ನು ಮಾನ್ಯ ಮಾಡಿದ್ದುಂಟು. ಶೂದ್ರಾತಿ ಶೂದ್ರರಿಗೆ ಶಿಕ್ಷಣಸೌಲಭ್ಯವನ್ನು ಕಲ್ಪಿಸಲಿಲ್ಲ ; ಅದರಲ್ಲಿಯೂ ಅಸ್ಪೃಶ್ಯರಿಗೆ ಪೌರಹಕ್ಕುಗಳನ್ನು ನೀಡಲಿಲ್ಲ. ಪ್ರಾಯಶಃ ಸವರ್ಣೀಯರ, ಅದರಲ್ಲಿಯೂ ಬ್ರಾಹ್ಮಣರ ಭಯದಿಂದಾಗಿ ವರ್ಣಭೇದವನ್ನು ಮುಂದುವರಿಸಿರಬೇಕು. ಜತೆಗೆ ಸವರ್ಣೀಯರ ಕೈಯಲ್ಲಿ ಕಿರುಕುಳವನ್ನನುಭವಿಸುವ ಜನರನ್ನು ಸುಲಭವಾಗಿ ತಮ್ಮ ಮತಕ್ಕೆ ಸೇರಿಸಿಕೊಳ್ಳಬಹುದೆನ್ನುವ ಉದ್ದೇಶವೂ ಅವರ ನಿರ್ಲಕ್ಷ್ಯಕ್ಕೆ ಕಾರಣವಾಗಿರಬಹುದು.

ವ್ಯಾಪಾರೀ ಮನೋಭಾವದಿಂದ ಇಂಡಿಯಾಕ್ಕೆ ಬಂದ ಆಂಗ್ಲರು ಕಾಲಕ್ರಮೇಣ ಸಾರ್ವಭೌಮರಾಗಿ ಇಲ್ಲಿಯೇ ತಳವೂರಿದರು. ಕೆಲವೇ ಕೆಲವು ಜನ ಕೋಟ್ಯನುಕೋಟಿ ಜನರಿರುವ ದೂರದ ದೇಶದಲ್ಲಿ ಸಾಮ್ರಾಜ್ಯಸ್ಥಾಪನೆ ಮಾಡಿದ ಸಂಗತಿ ಅವರ ಸಾಹಸಧೈರ್ಯ ಚಾಣಕ್ಯತನಗಳಿಗೆ ಸಾಕ್ಷಿಯಾಗಿರುವಂತೆಯೇ, ದೇಶೀಯರ ಅನೈಕ್ಯಕ್ಕೆ, ಇಲ್ಲಿಯ ಶೋಚನೀಯ ಸಾಮಾಜಿಕ ಪರಿಸ್ಥಿತಿಗೆ ನಿದರ್ಶನವಾಗಿದೆ. ಭಾರತೀಯರ ಸೋಲಿಗೆ ಆಂಗ್ಲರ ಯುಕ್ತಿ ಸಾಹಸಗಳಿಗಿಂತ ಮಿಗಿಲಾಗಿ ಅವರ ಅಂತಃಕಲಹಗಳೂ ಜಾತಿವರ್ಣವ್ಯವಸ್ಥೆಯೂ ಕಾರಣವಾಗಿವೆ. ಸುಲಿಗೆ ಮತ್ತು ಅಧಿಕಾರ ಸಂರಕ್ಷಣೆಯ ಹಿನ್ನೆಲೆಯಲ್ಲಿ ಅವರ ಸಾಮಾಜಿಕಾರ್ಥಿಕ ರಾಜಕೀಯ ನೀತಿಗಳು ರೂಪುಗೊಂಡವು. ಅದರಿಂದಾಗಿ ಇಲ್ಲಿಯ ಕೈಗಾರಿಕೆಗಳು ನಾಶವಾದುವು, ಊಳಿಗಮಾನ್ಯಪದ್ಧತಿ ರದ್ದಾಗಿ ಬಂಡವಾಳಶಾಹಿ ಅಸ್ತಿತ್ವಕ್ಕೆ ಬಂತು ; ವಿಕೇಂದ್ರೀಕರಣ ಕೊನೆಗೊಂಡು ಕೇಂದ್ರೀಕರಣ ಅನಿವಾರ್ಯವಾಯಿತು. ತಮ್ಮ ಉಳಿವಿಗೆ ಬ್ರಾಹ್ಮಣರ ಸ್ನೇಹ ಸಹಕಾರಗಳು ಅತ್ಯಗತ್ಯವೆಂದು ತಿಳಿಯಲು ಅವರಿಗೆ ಬಹಳ ದಿನ ಬೇಕಾಗಿರಲಿಲ್ಲ. ಪಶುಗಳಂತಿದ್ದ ಶೂದ್ರಾತಿಶೂದ್ರರು ಅವರಿಗೆ ಲೆಕ್ಕವೆನಿಸಿರಲಿಲ್ಲ. ಅದರಿಂದಾಗಿ ಅವರು ಬ್ರಾಹ್ಮಣರಿಗೆ ಆಂಗ್ಲಭಾಷೆ ಕಲಿಸಿದರು, ಆಂಗ್ಲವಿದ್ಯೆ ಬೋಧಿಸಿದರು, ಅವರನ್ನು ತಮ್ಮಲ್ಲಿ ಊಳಿಗದಲ್ಲಿರಿಸಿಕೊಂಡರು. ಬ್ರಾಹ್ಮಣರು ಸಹ ತಮ್ಮ

ಸ್ಥಾನ ಭದ್ರಪಡಿಸಿಕೊಳ್ಳಲು ಬೇಕಾದ ಮಸಲತ್ತುಗಳನ್ನು ಹೆಣೆದರು, ಹಡೆದರು. ಜಾತೀಯತೆಯ ಮೂಲಕ ಸಮಾಜವನ್ನು ಛಿದ್ರವಿಚ್ಛಿದ್ರಗೊಳಿಸಿ, ನಾಡನ್ನು ಪರರ ಸುಲಿಗೆಗೆ ಗುರಿಮಾಡಿದ ಜನರೇ ಪರಕೀಯರಿಗೆ ಸಾಮಿಲಾಗಿ ಕಂದಾಚಾರದ ಪದ್ಧತಿಗಳನ್ನು ಮುಂದುವರಿಸುವಲ್ಲಿ ಯಶಸ್ವಿಯಾದರು. ಶೂದ್ರರು ಓದುಕಲಿಯದಂತೆ, ಅವರಿಗೆ ಸಂಸ್ಕೃತ ದಕ್ಕದಂತೆ ಎಚ್ಚರಿಕೆ ವಹಿಸಿದರು. ಅವರಿಗೆ ಹೆದರಿಕೊಂಡಿದ್ದ ಸತಾರೆಯ ಮಹಾರಾಜ ಮಧ್ಯರಾತ್ರಿಯ ಸಮಯದಲ್ಲಿ ಪಾಠ ಹೇಳಿಸಿಕೊಳ್ಳುತ್ತಿದ್ದನಂತೆ. 1821ರಲ್ಲಿ ಸರ್ಕಾರ ಪೂನಾದಲ್ಲಿ ಸಂಸ್ಕೃತ ಶಾಲೆಯನ್ನು ಪ್ರಾರಂಭಿಸಿದಾಗ ಬ್ರಾಹ್ಮಣರು ಪ್ರತಿಭಟಿಸಿದ್ದು ಮಾತ್ರವಲ್ಲ, ಶಾಲೆಯ ತಮ್ಮ ಹುದ್ದೆಗಳಿಗೆ ರಾಜೀನಾಮೆ ನೀಡಿದರಂತೆ. 1857ರ ಸಿಪಾಯಿದಂಗೆಗೆ ಬ್ರಾಹ್ಮಣರ ಮತ್ತು ರಜಪೂತ ಸೈನಿಕರೆ ಕಾರಣವೆಂದರಿತ ಆಂಗ್ಲರು ಕಾಲಕ್ರಮೇಣ ಅವರ ಸಂಖ್ಯೆಯನ್ನು ತಗ್ಗಿಸಿದ್ದು ಮಾತ್ರವಲ್ಲ, ಬ್ರಾಹ್ಮಣೇತರರನ್ನು ಮೇಲೆತ್ತಲು ಪ್ರಯತ್ನಿಸಿದರು ; ಮುಸ್ಲಿಮರ ಬೆನ್ನು ತಟ್ಟಲಾರಂಭಿಸಿದರು. ಸ್ವಸ್ಥಾನ ಭದ್ರತೆಗಾಗಿ ಜಾತಿಗಳ ಮೇಲಾಟವನ್ನು ಸೃಷ್ಟಿಸಿದರೇ ವಿನಾ ಜಾತೀಯತೆಯ ನಿರ್ಮೂಲನಕ್ಕಾಗಲೀ ಅಸ್ಪೃಶ್ಯತೆಯ ಮೂಲೋತ್ಪಾಟನೆಗಾಗಲೀ ಅವರು ಪ್ರಾಮಾಣಿಕವಾಗಿ ಪ್ರಯತ್ನಿಸಲಿಲ್ಲ.

ಕನಿಷ್ಠ ದರ್ಜೆಯ ಹುದ್ದೆಗಳನ್ನು ತುಂಬುವ ಮತ್ತು ಪಾಶ್ಚಾತ್ಯ ಸಂಸ್ಕೃತಿಯನ್ನು ಹರಡುವ ಮೂಲಕ ಭಾರತೀಯ ಸಂಸ್ಕೃತಿಯನ್ನು ಮೂಲೋತ್ಪಾಟನ ಮಾಡುವ ಸಲುವಾಗಿ ಮೆಕಾಲೆಯಂಥ ಪ್ರಭೃತಿಗಳು ಪಾಶ್ಚಾತ್ಯ ಮಾದರಿಯ ಶಾಲಾಕಾಲೇಜು ವಿಶ್ವವಿದ್ಯಾನಿಲಯಗಳನ್ನು ಸಂಸ್ಥಾಪಿಸಿದರು. ರಕ್ತವರ್ಣಗಳು ಭಾರತೀಯವಾದರೂ ಅವರ ಮನೋಧರ್ಮ ಆಶೆ ಆಕಾಂಕ್ಷೆಗಳು ಅಭಿರುಚಿ ಆಸಕ್ತಿಗಳು ನಡೆನುಡಿಗಳು ವೇಷಭೂಷಣಗಳು ನೈತಿಕ ಮತ್ತು ಬೌದ್ಧಿಕ ಜೀವನಗಳು ಆಂಗ್ಲೀಯವಾಗಿರಬೇಕೆಂಬುದು ಮೆಕಾಲೆಯ ಮಹದಾಕಾಂಕ್ಷೆಯಾಗಿತ್ತು. ಕೊನೆಗೆ ಅವನಿಚ್ಛಿಸಿದ್ದೊಂದಾದರೆ ಪರಿಣಾಮ ಮತ್ತೊಂದಾಯಿತು. ಆಂಗ್ಲರ ಆಳ್ವಿಕೆಯಿಂದಾಗಿ ರಾಜಕೀಯಾರ್ಥಿಕ ಕ್ಷೇತ್ರಗಳಲ್ಲಿ ಪ್ರಾರಂಭದ ನಷ್ಟ ಏನೇ ಇರಲಿ, ಅಂತ್ಯ ಪರಿಣಾಮ ಭಾರತಕ್ಕೆ ಒಳ್ಳೆಯದಾಯಿತೆಂದೇ ಹೇಳಬೇಕು. ಆಂಗ್ಲಭಾಷೆಯ ಮೂಲಕ ಭಾರತೀಯರಿಗೆ ಇಡೀ ವಿಶ್ವದ ಸಂಪರ್ಕವುಂಟಾಯಿತು. ಪಾಶ್ಚಾತ್ಯ ಸಾಹಿತ್ಯಾಧ್ಯಯನದ ಫಲವಾಗಿ ಭಾರತೀಯ ಸಾಹಿತ್ಯದ ನರನಾಡಿಗಳಲ್ಲಿ ವಿದ್ಯುತ್ ಸಂಚಾರ

ಪಾದಂತಾಯಿತು. ಭಾರತೀಯರ ಮನೋಧರ್ಮ ಜೀವನ ದೃಷ್ಟಿಗಳು ಲೋಕ ವಿಶಾಲವಾದುವು. ಜ್ಞಾನನಿಧಿಯ ಬೀಗದ ಕೈ ಅವರಿಗೆ ದೊರೆತಂತಾಯಿತು. ಅವರಿಗೆ ವೈಜ್ಞಾನಿಕ ಶಿಕ್ಷಣ ದೊರೆತುದಲ್ಲದೆ, ವೈಜ್ಞಾನಿಕದೃಷ್ಟಿ ಬೌದ್ಧಿಕ ಸಾಮಾಜಿಕ ಕ್ರಾಂತಿಗಳಿಗೆ ಕಾರಣವಾಯಿತು. ಕೈಗಾರಿಕಾ ಕ್ರಾಂತಿಯ ಪ್ರಭಾವ ದಿಂದ ಜನಜೀವನ ಪಾರಾಗುವಂತಿರಲಿಲ್ಲ. ಪಾಶ್ಚಾತ್ಯ ವಿದ್ಯೆ ಕಲಿತವರಿಗೆ ಮಾತ್ರ ವಲ್ಲ, ಕಲಿಯದವರಿಗೂ ಕಾಮಧೇನುವಾಯಿತು. ದಲಿತ ಮತ್ತು ಹಿಂದುಳಿದ ವರ್ಗಗಳ ವಿದ್ಯಾವಂತ ತರುಣರ ಸೋಂಕಿನಿಂದ ಅವಿದ್ಯಾವಂತರಲ್ಲಿಯೂ ಜಾಗೃತಿಯುಂಟಾಯಿತು. ಕೋರ್ಟು ಕಚೇರಿಗಳ ಸ್ಥಾಪನೆಯಿಂದಾಗಿ ನ್ಯಾಯ ವಿತರಣೆ ಸುಲಭ ಸಾಧ್ಯವಾಯಿತು. ಕಾನೂನುಗಳ ಪ್ರಯೋಗದಿಂದಾಗಿ ಶಾಂತಿ ನೆಲಸುವಂತಾಯಿತು. ಪ್ರತಿಯೊಬ್ಬ ಭಾರತೀಯನೂ ತನ್ನ ಹಕ್ಕುಬಾಧ್ಯತೆ ಗಳನ್ನರಿಯುವಂತಾಯಿತು. ಅವರಲ್ಲಿ ರಾಜಕೀಯ ಸಾಮಾಜಿಕಪ್ರಜ್ಞೆ ಮೂಡು ವ.ತಾಗಿ ಓಬೀರಾಯನ ಕಾಲದ ಗೆದ್ದಲು ಹಿಡಿದ ಸಂಪ್ರದಾಯಗಳು ಮಣ್ಣು ಗೂಡಿದುವು. ಸ್ವಾತಂತ್ರ್ಯ ಸಮಾನತೆಗಳ ಅರಿವಿನ ಜತೆಗೆ ಅಖಂಡ ಭಾರತ ಪ್ರಜ್ಞೆ ಮತ್ತು ದೇಶಾಭಿಮಾನಗಳು ಕೊನರಿದುವು. ಪುರಾತನ ಮೌಲ್ಯಗಳೆಲ್ಲ ಅನೂರ್ಜಿತವಾಗಿ, ಹಿಂದೂಸಂಸ್ಕೃತಿ ಕಠಿಣ ಪರೀಕ್ಷೆಗೀಡಾಯಿತು. ಸಂಪ್ರದಾಯ ವಾದಿಗಳಿಗೆ ಹೃತ್ಕಂಪನವಾಯಿತು. ಆಧುನಿಕ ನಾಗರಿಕತೆಯ ಸೌಲಭ್ಯಗಳಿಂದಾಗಿ, ಸಂಪರ್ಕ ಸೌಕರ್ಯಗಳಿಂದಾಗಿ ಜನಮನವೊಂದಾಗಿ, ರಾಷ್ಟ್ರೈಕ್ಯ ಸಾಧನೆ ಸಾಧ್ಯವಾಯಿತು. ಒಟ್ಟಿನಲ್ಲಿ ಆಂಗ್ಲರ ಆಡಳಿತದ ಫಲವಾಗಿ ನಷ್ಟಕ್ಕಿಂತ ಲಾಭವೇ ಅಧಿಕವಾಗಿದೆಯೆನ ಬಹುದು. ಆಂಗ್ಲರ ಆಕ್ರಮಣ ಭಾರತಕ್ಕೊಂದು ವರವೆಂದೇ ಹೇಳಬಹುದು. ಅವರು ಈ ನಾಡಿಗೆ ಕಾಲಿಡದಿದ್ದಲ್ಲಿ ಸ್ಮೃತಿಗಳ ಪಾರಮ್ಯ ಮತ್ತು ವರ್ಣವ್ಯವಸ್ಥೆಯ ಪ್ರಾಬಲ್ಯ ನಾಡನ್ನು ಸಂಪೂರ್ಣವಾಗಿ ಮುಳುಗಿಸು ತ್ತಿತ್ತೆನ್ನುವುದರಲ್ಲಿ ಅನುಮಾನವಿಲ್ಲ.

ಪಾಶ್ಚಾತ್ಯ ಸಂಸ್ಕೃತಿಯ ಪರಿಣಾಮವಾಗಿ ಮೂರು ವಿಚಾರ ಪಂಥಗಳು ನಾಡಿನಲ್ಲಿ ತಲೆದೋರಿದುವು. ಒಂದು ಪಾಶ್ಚಾತ್ಯ ವೈಚಾರಿಕತೆಯ ಪಂಥ. ಹಳೆಯುದರ ಗೋರಿಯ ಮೇಲೆ ನೂತನ ಭವನ ನಿರ್ಮಾಣ ಮಾಡಬೇಕೆನ್ನು ವುದು ಈ ಪಂಥದ ಗುರಿ. ಎರಡು, ಸುಧಾರಕ ಪಂಥ. ಮೂಲಭೂತ ತತ್ತ್ವ ಗಳನ್ನು ಬಲಿಗೊಡದೆ, ವೈಜ್ಞಾನಿಕ ದೃಷ್ಟಿಯ ಬೆಳಕಿನಲ್ಲಿ ಹಿಂದೂ ಮತವನ್ನು ಪರಿಷ್ಕರಿಸುವುದೇ ಈ ಪಂಥದವರ ಉದ್ದೇಶ. ಸ್ವಾಮಿವಿವೇಕಾನಂದ,

ರಾಜಾರಾಮಮೋಹನ ರಾಯ, ಗೋಖಲೆ, ರಾನಡೆ ಮೊದಲಾದವರೇ ಈ ಪಂಥದ ಪುರಸ್ಕರ್ತರು. ಮೂರನೆಯದೇ ಸಂಪ್ರದಾಯ ಪಂಥ. ನೂತನಾವಿಷ್ಕಾರ, ಹೊಸ ಭಾವನೆ, ಹೊಸ ಚಾಳಿಗಳೆಂದರೆ ಅವರಿಗೆ ಅನುಮಾನ. ಅವರಿಗೆ ಪ್ರಗತಿ ಪರಿವರ್ತನೆಯೆಂದರಾಗದು. ಅಪ್ಪ ಹಾಕಿದ ಆಲದ ಮರವೇ ಅವರಿಗೆ ದಿವ್ಯ, ಭವ್ಯ, ರಮ್ಯ. ಪ್ರಾಯಶಃ ಫೂಲೆ, ಅಂಬೇಡ್ಕರರು ಮೊದಲನೆಯ ವರ್ಗಕ್ಕೆ ಸೇರುತ್ತಾರೆ. ಸಂಪ್ರದಾಯವಾದಿಗಳಿಗೆ ಸಂಖ್ಯೆ ಉಪೇಕ್ಷಣೀಯವಾದರೂ ರಕ್ತಕ್ಕಂಟಿಕೊಂಡು ಬಂದಿರುವ ಯುಕ್ತಿ ಚಮತ್ಕಾರ ಕುಟಿಲೋಪಾಯಗಳ ಮೂಲಕ ಅವರು ಕೆಲಕಾಲ ಪ್ರಗತಿಗೆ ಕಂಟಕವೊಡ್ಡುವುದುಂಟು. ಕೊನೆಗೆ ಬಹುಸಂಖ್ಯಾತ ದಲಿತರು ಎಚ್ಚೆತ್ತಾಗ ಪ್ರಪಂಚದ ಎಂಥ ಪ್ರಬಲ ಶಕ್ತಿಯೂ ತಡೆಯಲಾರದು, ಪ್ರಗತಿಗೆ ತಡೆಯೊಡ್ಡಲಾರದು.

ರಾಜಾರಾಮ ಮೋಹನರಾಯರ ಸತತ ಪ್ರಯತ್ನ ಬೋಧನೆಗಳ ಪರಿಣಾಮವೇ ಬ್ರಾಹ್ಮ ಸಮಾಜದ ಉದಯ. ಏಕದೇವತೋಪಾಸನೆಯ ಪ್ರಚಾರ ಆ ಸಮಾಜದ ಗುರಿಗಳಲ್ಲೊಂದು. ಜಾತೀಯತೆಯಿಂದಾಗಿ ಸೋದರತ್ವ ಸಮಾನತೆಗಳಿಗೆ ಭಂಗವುಂಟಾಗಬಾರದೆಂಬುದು ಅದರ ನಿಲವು. ಜಾತಿರಹಿತ ಸಮಾಜವನ್ನು ಸೃಷ್ಟಿಸಬೇಕೆಂಬುದೇ ಪ್ರಾರ್ಥನಾ ಸಮಾಜದ ಮಹೋದ್ದೇಶ. ಸರ್ವಜಾತಿಗಳು ಚತುರ್ವರ್ಣಗಳಲ್ಲಿ ವಿಲಯನಗೊಳ್ಳಬೇಕೆಂಬುದು ಆರ್ಯ ಸಮಾಜದ ಧ್ಯೇಯ. ಸನಾತನ ವೈದಿಕ ಸಮಾಜದ ಪುನರುಜ್ಜೀವನವೇ ಅದರ ಗುರಿ. ಶೂದ್ರಾತಿಶೂದ್ರರಿಗೂ ವೇದಾಧ್ಯಯನದ ಅಧಿಕಾರವುಂಟೆಂದು ಘೋಷಿಸಿದ್ದೇ ಅದು ಭಾರತೀಯ ಸಾಂಸ್ಕೃತಿಕ ಇತಿಹಾಸಕ್ಕೆ ನೀಡಿದ ಕಾಣಿಕೆ. ಇಸ್ಲಾಂ ಮತ್ತು ಕ್ರಿಶ್ಚಿಯನ್ ಮತಗಳ ಮುನ್ನಡೆಯನ್ನು ತಡೆಹಿಡಿಯುವಲ್ಲಿ ಅವುಗಳ ಪಾತ್ರ ಮಹತ್ವಪೂರ್ಣವಾದದ್ದು. ಶ್ರೀರಾಮಕೃಷ್ಣ ಮಠ ಮತ್ತು ಥಿಯಾಸಫಿಕ್ ಸೊಸೈಟಿಗಳೂ ಹಿಂದೂ ಸಮಾಜದ ಪರಿಷ್ಕರಣ ಕಾರ್ಯದಲ್ಲಿ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ನೆರವಾದದ್ದುಂಟು. ಈ ಸಂದರ್ಭದಲ್ಲಿ ಜ್ಯೋತಿಬ ಫೂಲೆಯವರ ಸತ್ಯ ಶೋಧಕ ಸಮಾಜವನ್ನೂ, ಬ್ರಾಹ್ಮಣೇತರರ ಚಳುವಳಿಯನ್ನೂ ಮರೆಯುವಂತಿಲ್ಲ.

ಇಸ್ಲಾಂ ಮತ್ತು ಕ್ರಿಸ್ತ ಧರ್ಮಗಳು ಇಂಡಿಯಾದಲ್ಲಿ ಬಲವಾಗಿ ಪ್ರಬಲಗೊಳ್ಳುವುದಕ್ಕೆ ಆಯಾಯ ಧರ್ಮಬೋಧಕರ ಪ್ರಚಾರ ವೈಖರಿಗಿಂತ ಹಿಂದೂ ಸಮಾಜದ ವೈಪರೀತ್ಯಗಳೇ, ಅಲ್ಲಿಯ ಅನ್ಯಾಯಗಳೇ ಪ್ರಮುಖ

ಕಾರಣವೆನ್ನಲಡ್ಡಿಯಿಲ್ಲ. ಸಾಮಾಜಿಕ ಅಸಮಾನತೆ ಮತ್ತು ಆರ್ಥಿಕ ರಿಕ್ತತೆಗಳು ಅನೇಕ ಹಿಂದುಗಳನ್ನು ಇಸ್ಲಾಂ ಕ್ರಿಸ್ತ ಸಮಾಜಗಳ ಕಡೆಗೆ ನೂಕಿದವು. ಬೆದರಿಕೆಯ ಮೂಲಕ ಅನೇಕ ಹಿಂದುಗಳು ಮುಸ್ಲಿಮರಾದದ್ದುಂಟು. ಕ್ರಿಸ್ತ ಮತ ಪ್ರಚಾರಕರು ಪ್ರೇಮ ಸಮಾಜ ಸೇವೆಗಳ ಮೂಲಕ ಹಿಂದುಗಳನ್ನೊಲಿಸಿ ಕೊಂಡರು. ಅವರು ಶಾಲೆಗಳನ್ನು ಸ್ಥಾಪಿಸಿ, ಅಸ್ಪೃಶ್ಯರನ್ನು ಸಹ ವಿದ್ಯಾವಂತ ರನ್ನಾಗಿ ಮಾಡಿದರು ; ಅವರ ಮಕ್ಕಳನ್ನು ತೊಡೆಯ ಮೇಲೇರಿಸಿಕೊಂಡರು ; ಅವರ ಕೈಮೈ ತೊಳೆದು ಶುಭ್ರಗೊಳಿಸಿದರು. ನಿಮ್ನ ಜನರ ಮನೆಗಳಿಗೆ ಹೋಗಿ ಅವರ ತಲೆಯನ್ನು ನೇವರಿಸಿದರು, ಅವರ ಕಣ್ಣೀರೊರಸಿದರು ; ಅವರ ಜೊತೆ ಕುಳಿತು ಊಟ ಮಾಡಿದರು. ರೋಗಿಗಳನ್ನು ಮುಟ್ಟಿ ವೈಸವರಿ, ವೈದ್ಯೋಪ ಚಾರ ಮಾಡಿದರು. ಅತಿರಿಕ್ತರಿಗೂ ಕೊಳಕರಿಗೂ ದೀಕ್ಷಾಸ್ನಾನ ಮಾಡಿಸಿ, ಅವರನ್ನು ತಮ್ಮ ಜೊತೆಯಲ್ಲಿಯೇ ಚರ್ಚುಗಳಿಗೆ ಕರೆದೊಯ್ದರು. ತಮ್ಮ ಸಮಾಜದಲ್ಲಿ ತಮಗಾಗುತಿದ್ದ ಹಿಂಸೆ ಕಿರುಕುಳಗಳನ್ನು ಸಹಿಸಲಾರದೆ ಹಿಂದು ಗಳು ಹಿಂಡು ಹಿಂಡಾಗಿ ಇಸ್ಲಾಂ ಕ್ರಿಸ್ತ ಧರ್ಮಗಳನ್ನಪ್ಪಿಕೊಂಡರು. ನಾಯಿಗಿಂತ ಕಡೆಯಾಗಿದ್ದ ನಿಮ್ನವರ್ಗದ ಮಾದ ಕ್ರಿಸ್ತೀಯನಾಗಿ ಮ್ಯಾಥನ್ ಎಂಬ ಹೆಸರು ಪಡೆದ ಕೂಡಲೇ ಹಿಂದೂ ಸಮಾಜದಲ್ಲಿಯೂ ಮಾನ್ಯವಾಗುತ್ತಿದ್ದುದುಂಟು. ಶ್ರೀಮಂತರು ಅವನಿಗೆ ನಡೆಮುಡಿ ಹಾಸುತ್ತಿದ್ದುದುಂಟು. ಇಷ್ಟಾದರೂ ಮೌಲ್ವಿ ಪಾದ್ರಿಗಳು ದಲಿತರ ಸಮಸ್ಯೆಯನ್ನು ಸಂಪೂರ್ಣವಾಗಿ ಪರಿಹರಿಸಲಾಗಲಿಲ್ಲ. ಅವರ ಮತಾಂತರ ಕ್ರಿಯೆಯಿಂದಾಗಿ ಜಾತೀಯತೆಯ ಸಮಸ್ಯೆಗಳು ಜಟಿಲ ಗೊಂಡು, ಸಮಾಜ ಮತ್ತಷ್ಟು ಛಿದ್ರವಾಗಿ, ಅನೈಕ್ಯ ಉಲ್ಬಣಗೊಂಡಿತು. ರಾಜಕೀಯ ಕ್ಷೇತ್ರದಲ್ಲಿ ಅಲ್ಪ ಸಂಖ್ಯಾತ ಸಮಸ್ಯೆ ಬಿಗಡಾಯಿಸಿ, ಸ್ವಾತಂತ್ರ್ಯಾಂ ದೋಲನ ಕಾವು ಕಳೆದುಕೊಂಡಿತು. ಆದರೆ ಮತಪ್ರಚಾರಕರ ಚಟುವಟಿಕೆಗಳು ಕೆಲವು ಹಿಂದೂ ನಾಯಕರ ಕಣ್ಣು ತೆರೆಯಿಸಿದುವಲ್ಲದೆ, ಹಿಂದೂ ಸಮಾಜಕ್ಕೆ ಎಚ್ಚರಿಕೆ ವೆರಳಾಗಿ ಪರಿಣಮಿಸಿದುವೆನ್ನುವಲ್ಲಿ ಸ್ವಲ್ಪವೂ ಸಂದೇಹವಿಲ್ಲ.

ಅಸ್ಪೃಶ್ಯತಾ ನಿರ್ಮೂಲನಕ್ಕಾಗಿ ಆಂಗ್ಲ ಸರ್ಕಾರ ಪರೋಕ್ಷವಾಗಿ ನಡೆಸಿದ ಪ್ರಯತ್ನಗಳನ್ನು ಮರೆಯುವಂತಿಲ್ಲ. ಬಸ್ಸು ರೈಲು ಮೊದಲಾದ ಸಂಚಾರ ಸೌಕರ್ಯಗಳು ಅಸ್ಪೃಶ್ಯತೆಯ ತೀಕ್ಷ್ಣತೆಯನ್ನು ತುಸುಮಟ್ಟಿಗೆ ಕಡಿಮೆ ಮಾಡಿ ದ್ದುಂಟು. ಹೋಟಲು ಸಿನಿಮಾ ಮಂದಿರಗಳು ಸ್ಪೃಶ್ಯಾಸ್ಪೃಶ್ಯರನ್ನು ಒಂದೆಡೆ ಕಲೆಹಾಕಿದ್ದುಂಟು. ಜಾತಿ ಭೇದವಿಲ್ಲದೆ ಸರ್ಕಾರಿ ಶಾಲೆಗಳಲ್ಲಿ ಸರ್ವರಿಗೂ

ಪ್ರವೇಶಾವಕಾಶವಿರಬೇಕೆಂಬ ನಿಯಮವನ್ನು ಜಾರಿಗೆ ತಂದದ್ದರಿಂದ ಕೆಲವರು ಅಸ್ಪೃಶ್ಯ ಯುವಕರು ಕಷ್ಟದಿಂದಾದರೂ ವಿದ್ಯೆ ಕಲಿಯುವಂತಾಯಿತು. ರಾಜಕೀಯ ಸುಧಾರಣೆಗಳಿಂದಾಗಿ ಸ್ಥಳೀಯ ಸಂಸ್ಥೆ ಮತ್ತು ಶಾಸನ ಸಭೆಗಳಲ್ಲಿ ನಿರ್ದಿಷ್ಟ ಸಂಖ್ಯೆಯ ಸ್ಥಾನಗಳು ಅವರಿಗೆ ಮೀಸಲಾದುವು. ಬ್ರಿಟಿಷ್ ಸೈನ್ಯದಲ್ಲಿದ್ದ ಮಹರ್ ತುಕಡಿಯೂ ನಿಮ್ನ ವರ್ಗೀಯರ ಜಾಗೃತಿಗೆ ಪ್ರಚೋದನೆ ನೀಡಿತು. 1906ರಲ್ಲಿ ನ್ಯಾಯಮೂರ್ತಿ ಚಂದ್ರಾವರ್ಕರ್ ಅವರ ನೇತೃತ್ವದಲ್ಲಿ ಸಂಸ್ಥಾಪಿತವಾದ ಭಾರತೀಯ ನಿಮ್ನವರ್ಗಾಭ್ಯುದಯ ಸಂಘ ಮನವಿ ಬಿನ್ನವತ್ತಳೆ ಕೇಳಿಕೆಗಳ ಮೂಲಕ ನಿಮ್ನವರ್ಗೀಯರ ಕಲ್ಯಾಣಾರ್ಥವಾಗಿ ಸರ್ಕಾರದ ಮೇಲೆ ಒತ್ತಾಯ ತಂದಿತು. ಬರೋಡೆಯ ಮಹಾರಾಜರಂತು ನಿಮ್ನ ವರ್ಗೀಯ ವಿದ್ಯಾರ್ಥಿಗಳ ವ್ಯಾಸಂಗಕ್ಕಾಗಿ ನಾನಾ ಸೌಲಭ್ಯಗಳನ್ನು ಕಲ್ಪಿಸಿದರು. ನಾಡಿನ ಹಲವಾರು ನಗರಗಳಲ್ಲಿ ಅಸ್ಪೃಶ್ಯ ಕಲ್ಯಾಣ ಸಂಘಗಳು ಸ್ಥಾಪನೆಗೊಂಡು, ನಿಮ ವರ್ಗದ ಮಕ್ಕಳಿಗೆ ಉಚಿತ ಶಿಕ್ಷಣ ಸೌಲಭ್ಯ ಕಲ್ಪಿಸುವ ಮತ್ತು ನಿಮ್ನ ವರ್ಗೀಯರಲ್ಲಿ ಜಾಗೃತಿ ಮೂಡಿಸುವ ಪ್ರಯತ್ನಗಳಲ್ಲಿ ನಿರತವಾದುವು. ಅನ್ಯಾಯ ಅಸಮಾನತೆ ಹಿಂಸೆ ದಬ್ಬಾಳಿಕೆಗಳನ್ನು ಪ್ರತಿಭಟಿಸುವ ಸಲುವಾಗಿ ಅಲ್ಲಲ್ಲಿ ನಿಮ ಜನರು ಸತ್ಯಾಗ್ರಹ ಹೂಡಿದ್ದೂ ಉಂಟು. ಕೇಂದ್ರ ರಾಜ್ಯ ಶಾಸನಸಭೆಗಳಲ್ಲಿಯೂ ತಮ್ಮ ಹಕ್ಕುಗಳ ಬಗ್ಗೆ, ಅಸ್ಪೃಶ್ಯತೆಯ ವಿರುದ್ಧವಾಗಿ, ಪಟ್ಟಭದ್ರಹಿತಾಸಕ್ತಿಗೆದುರಾಗಿ ಕೂಗು ಕೇಳಿ ಬರುವಂತಾಯಿತು. ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯ ಮತ್ತೊಂದು ರೂಪವೇ ನಿಮ್ನ ಜನರ ಹೋರಾಟವೆಂದೂ, ಸಾಮಾಜಿಕ ಕ್ರಾಂತಿಯ ಉಗಮವೆಂದೂ ಬಗೆಯಬಹುದಾಗಿದೆ. ಆ ಮಹಾಕ್ರಾಂತಿಯ ಸಂಕೇತವಾಗಿ, ದಲಿತ ಜನರ ಆಶಾಕಿರಣವಾಗಿ ಸ್ವಾತಂತ್ರ್ಯ ಮಂತ್ರ ದ್ರಷ್ಟಾರರಾಗಿ, ಸಂಪ್ರದಾಯ ಶರಣರಿಗೆ ಸಿಡಿಲಾಗಿ, ಪ್ರಜಾತಂತ್ರದ ಪ್ರವರ್ತಕರಾಗಿ, ಅಭಿನವ ಬುದ್ಧರಾಗಿ ಭೀಮರಾವ್ ರಾಮ್‌ಜೀ ಅಂಬೇಡ್ಕರರು ಜನ್ಮಧಾರಣೆ ಮಾಡಿದರು.

# ೧. ಅರುಣೋದಯ

ಶ್ರಾವಣಮಾಸದ ಸುಪ್ರಭಾತ ಸಮಯದ ಸದ್ಗುರು ಪ್ರಾರ್ಥನೆ ಸುತ್ತ ಮುತ್ತಣ ನಿಶ್ಶಬ್ದ ವಾತಾವರಣವನ್ನು ಪುಳಕಗೊಳಿಸುತ್ತ, ತರುಲತಾಗುಲ್ಮ ಗಳನ್ನು ಪ್ರಫುಲ್ಲಗೊಳಿಸುತ್ತ ಭಗವಾನ್ ಬುದ್ಧದೇವನ ಕೃಪಾವಲೋಕನದಂತೆ ಪಸರಿಸುತ್ತಿದ್ದ ಅರುಣಾರುಣ ದೀಪ್ತಿಯಲ್ಲಿ ಲಯಹೊಂದುತ್ತಿತ್ತು. ಸಚ ರಾಚರ ವಸ್ತುಗಳಲ್ಲಿಯೂ ಚೈತನ್ಯವನ್ನು ಹರಿಸುತ್ತ, ಜೀವಜಗತ್ತನ್ನು ಸುಷುಪ್ತಿ ಯಿಂದೆಚ್ಚರಿಸುತ್ತ. ಪ್ರಾರ್ಥನೆಯ ಸಂದೇಶವನ್ನು ದಿಗಂತದಾಚೆಗೂ ಕೊಂಡೊ ಯ್ಯುತ್ತಿದ್ದ ಮಂದಾನಿಲ ನದಿಯ ಜೀವನದ ತೆರೆಗಳನ್ನು ಕುಣಿಸುತ್ತಿತ್ತು. ನದಿಯಲ್ಲಿ ಬಟ್ಟೆಯೊಗೆಯುತ್ತಿದ್ದ, ನೀರು ಮೊಗೆಯುತ್ತಿದ್ದ, ತಲೆಯಮೇಲೆ ಹರವಿ ಹೊತ್ತು ಮಲಿನ ವಸ್ತ್ರಗಳ ಕುಕ್ಕೆಯನ್ನು ಕಂಕುಳಲ್ಲಿರುಕಿಕೊಂಡು ನದಿಯ ದಂಡೆಯಲ್ಲಿ ಸಾಗುತ್ತಿದ್ದ, ಚಿಂದಿಯುಟ್ಟ ಅವಕುಂಠನವತಿಯರು ಪ್ರಾರ್ಥನಾಮೃತಪಾನದಿಂದ ಪ್ರಮತ್ತರಾಗಿ, ತಂತಮ್ಮ ಕರ್ತವ್ಯಗಳನ್ನು ಮರೆತು, ಇದ್ದಿದ್ದಲ್ಲಿಯೇ ಮರವಟ್ಟಂತೆ ಚಿತ್ರಾರ್ಪಿತರಾದಂತೆ ನಿಂತರು. ಪ್ರಾರ್ಥನೆ ಮುಗಿದನಂತರ ಭಾವಪರವಶತೆಯಿಂದ ವಿಮುಖರಾದ ಮಹಿಳೆ ಯರಲ್ಲಿ ಕೆಲವರು ತಂತಮ್ಮ ಸಾಮಾನುಗಳನ್ನು ದೂರವಿರಿಸಿ, ಕೈಮುಗಿದು ಕಣ್ಮುಚ್ಚಿಕೊಂಡು 'ಪತಿತಪಾವನನೆಂದು ಬಿರುದುಹೊತ್ತ ಭಗವಂತ ದೀನ ದಲಿತೋದ್ಧಾರಕ್ಕಾಗಿ ಬುದ್ಧ ಕಬೀರರ ರೂಪದಲ್ಲಿ ಜನ್ಮಧಾರಣೆ ಮಾಡಿದಂತೆ ಮತ್ತೆ ಅವತರಿಸಬಾರದೆ?' ಎಂದು ಮೊರೆಯಿಡುತ್ತ ಮೂಡಣ ದಿಕ್ಕಿಗೆದುರಾಗಿ ನಿಂತಿದ್ದ ಕಾಷಾಯ ವಸ್ತ್ರಧಾರಿಗಳಾದ ಸಾಧುಗಳೆಡೆಗೆ ತೆರಳಿ, ಅಗ್ರಸ್ಥಾನದಲ್ಲಿದ

ತೇಜಸ್ವಿಯ ಪಾದಗಳಿಗೆ ಮಣಿದರು. ಕಾಂತಿಯೇ ಕಣ್ತೆರೆದಂತೆ, ಕರುಣೆಯೇ ಬಾಯ್ತೆರೆದಂತೆ ಸಾಧುವರೇಣ್ಯರು ಅವರ ಮೇಲೆ ಕೃಪಾವಲೋಕನ ಬೀರಿ, ಹರಸಿದರು.

ಆ ಮಹಿಳೆಯರಲ್ಲೊಬ್ಬಳು ಕುತೂಹಲದಿಂದ ಸಾಧು ಮುಖಂಡರ ಮುಖದಲ್ಲಿಯೇ ದೃಷ್ಟಿ ನೆಟ್ಟವಳಾಗಿ ನಿಂತಳು. ಪಕ್ಕದವರು ಭುಜ ಹಿಡಿದು ಅಲುಗಿಸಿದರೂ ಅವಳು ಜಗ್ಗಲಿಲ್ಲ. ಯಾವುದೋ ಹಳೆಯ ಬಾಂಧವ್ಯ ಮರು ಕೊಳಿಸಿದಂತಾಗಿ "ತಮ್ಮನ್ನೆಲ್ಲಿಯೋ ಕಂಡಂತಿದೆ, ಪ್ರಭು, ಹೀಗೆ ಕೇಳಿದೆನೆಂದು ಕೋಪಿಸಿಕೊಳ್ಳಬೇಡಿ. ಮನಸ್ಸು ಹಿಡಿಯಲಾರದೆ ಬಾಯಿಬಿಟ್ಟೆ, ಕ್ಷಮಿಸಿ" ಎಂದು ವಿನಯವಿನಮ್ರಳಾಗಿ ಅವರಿಗೆ ಮತ್ತೆ ನಮಸ್ಕರಿಸಿದಳು. ಸಾಧುಗಳಿಗೂ ಅವಳ ಗುರುತು ಸಿಕ್ಕಿದಂತಾಗಿ—

"ನಿಜ. ನಾನೂ ನಿನ್ನನ್ನೆಲ್ಲಿಯೋ ನೋಡಿದಂತಿದೆ. ನಿನಗೇನಾದರೂ ಅಂಬಾವಾಡೆಯ ಕುಟುಂಬದೊಡನೆ ಸಂಬಂಧವಿದೆಯೆ? ರಾಮ್‌ಜಿ ನಿನಗೆ ಗೊತ್ತೆ?"

ಅವರು ತಮ್ಮ ಬಂಧುವೇ ಆಗಿರಬೇಕೆಂಬ ಹೆಮ್ಮೆಯಿಂದ ಹರ್ಷಪುಳಕಿತ ಳಾಗಿ ಅವಳು "ಹೌದು ಸ್ವಾಮಿ, ರಾಮ್‌ಜಿ ನನಗೆ ಭಾವನಾಗಬೇಕು. ನೀವವರ ಚಿಕ್ಕಪ್ಪಂದಿರಲ್ಲವೆ? ಈಗ ತಿಳಿಯಿತು. ಬಂದೆ" ಎಂಬುದಾಗಿ ನುಡಿದು, ಗಾಳಿಗೆ ರೆಕ್ಕೆ ಬಂದಂತಾಗಿ, ಊರಿನ ಕಡೆಗೆ ಓಡಿದಳು. ತುಸು ಹೊತ್ತಿನಲ್ಲಿಯೇ ರಾಮ್‌ಜಿ ಸಕ್ಪಾಲ ಕೆಲವರು ಗೆಳೆಯರೊಡನೆ ಓಡೋಡಿ ಬಂದು, ನಿಟ್ಟುಸಿರು ಬಿಡುತ್ತ, ಸಾಧುಗಳ ಚರಣತಲದಲ್ಲಿ ಸಾಷ್ಟಾಂಗ ನಮಸ್ಕಾರ ಮಾಡಿದನು. ಸಾಧುಗಳು ಅವನ ತಲೆಹಿಡಿದೆತ್ತಿ, ಎಬ್ಬಿಸಿ "ಮೋಹಿಗೆ ಬಂದು ಎಷ್ಟು ದಿನಗಳಾದುವು, ರಾಮ್? ಮನೆಯಲ್ಲೆಲ್ಲರೂ ಸೌಖ್ಯವೆ?" ಎಂದವನ ತಲೆ ನೇವರಿಸಿದರು.

ರಾಮ್‌ಜಿ ಬಳಿಯಿದ್ದ ಸತಿ ಭೀಮಾಬಾಯಿಯನ್ನು ಪರಿಚಯ ಮಾಡಿ ಕೊಟ್ಟು "ಈ ಊರಿಗೆ ಬಂದು ನಾಲ್ಕಾರು ವರ್ಷಗಳೆ ಆದುವು, ಕಕ್ಕ. ದೇವರು ಮನೆತುಂಬ ಮಕ್ಕಳು ಕೊಟ್ಟಿದ್ದಾನೆ. ಆದರೆ ನನಗೆ ಬರುವ ಸಂಬಳದಲ್ಲಿ ಅವರನ್ನು ಸಾಕುವುದು ಕಷ್ಟವಾಗಿದೆ."

"ಎಲ್ಲವೂ ಈಶ್ವರೇಚ್ಛೆ. ಚಿಂತೆ ಮಾಡಬೇಡ, ಮಗು. ಈಶ್ವರನನ್ನು ನಂಬಿದವರ ಮುಂದೆ ಗುಡ್ಡದಂತೆ ಅಡ್ಡಬಂದ ಕಷ್ಟಗಳು ಬೆಣೆಯಂತೆ ಕರಗಿ

ಹೋಗುತ್ತವೆಂದು ಕಬೀರ್ ಗುರುಗಳು ಹೇಳಿದ್ದಾರೆ" ಎಂದು ಸಾಧುಗಳು ಅವನನ್ನು ಸಮಾಧಾನಪಡಿಸಿದರು.

"ನಿಮ್ಮ ದರ್ಶನಲಭವಾದದ್ದು ನನ್ನ ಪೂರ್ವಜನ್ಮದ ಪುಣ್ಯ. ನಿಮ್ಮಿಂದ ನಮ್ಮ ವಂಶವೇ ಪಾವನವಾದಂತಾಗಿದೆ. ನಿಮ್ಮ ಚರಣಧೂಳಿಯಿಂದ ನನ್ನ ಮನೆಯನ್ನು ಪವಿತ್ರಗೊಳಿಸಬೇಕೆಂಬುದೊಂದೇ ನನ್ನ ಆಸೆ."

"ಈಗ ಬೇಡ ಮಗು."

"ತಾನಾಗಿಯೇ ಮನೆಯ ಬಾಗಿಲಿಗೆ ಬಂದಿರುವ ಪುಣ್ಯವನ್ನು ಹೊರ ಗಿರಿಸಲಾದೀತೆ, ಸ್ವಾಮಿ? ಹಲವು ವರ್ಷಗಳನಂತರ ತಮ್ಮನ್ನು ನೋಡುವ ಭಾಗ್ಯ ಲಭಿಸಿದೆ. ಮನೆಗೆ ಆಗಮಿಸಿ, ನಮ್ಮ ವಂಶದ ಕುಡಿಗಳನ್ನು ಆಶೀರ್ವದಿಸಿ."

"ನಾನು ನಗರಪ್ರವೇಶ ಮಾಡಬಾರದು, ರಾಮ್. ಅದು ಸನ್ಯಾಸ ಧರ್ಮಕ್ಕೆ ವಿರೋಧ. ಆ ಬಗ್ಗೆ ಚಿಂತಿಸಬೇಡ. ನೀನೂ ನಿನ್ನ ಹೆಂಡತಿಯೂ ಪುಣ್ಯಶಾಲಿಗಳು. ಮಹಾಪುರುಷನೊಬ್ಬ ನಿಮಗೆ ಮಗನಾಗಿ ಜನಿಸುತ್ತಾನೆ. ನಿನ್ನ ವಂಶಕ್ಕವನು ಬೆಳಕಾಗುತ್ತಾನೆ; ರಾಷ್ಟ್ರದ ಜ್ಯೋತಿಯಾಗುತ್ತಾನೆ; ದೀನದಲಿತರಿಗೆ ತಾರಕ ಶಕ್ತಿಯಾಗುತ್ತಾನೆ. ಜಗತ್ತಿನಲ್ಲೆಲ್ಲ ಅವನ ಕೀರ್ತಿ ಪಸರಿಸುತ್ತದೆ".

ಮೊದಲೇ ಹದಿಮೂರು ಮಕ್ಕಳನ್ನು ಪಡೆದಿದ್ದ ಭೀಮಾಬಾಯಿಯ ಕರುಳು ಕಂಪನಗೊಂಡಿತು. ಬಡತನದ ಭಾರದಿಂದ ಕಂಗಾಲಾಗಿದ್ದ ರಾಮ್‌ಜಿಯ ಮೈ ನಡುಗಿತು. "ಈಶ್ವರೇಚ್ಛೆಯನ್ನು ಮೀರಲಾದೀತೆ? ಆದದ್ದಾಗಲಿ. ಸ್ವಾಮಿಗಳ ಆಶೀರ್ವಾದ ಎಲ್ಲರಿಗೂ ಸುಲಭವಾಗಿ ದೊರಕುವಂಥದ್ದಲ್ಲ" ಎಂದು ಮನದಲ್ಲಿ ನಿಶ್ಚಯಿಸಿಕೊಂಡರು. "ಜಗತ್ತಿನಲ್ಲೆಲ್ಲ ಅವನ ಕೀರ್ತಿ ಪಸರಿಸುತ್ತದೆ" ಎಂಬ ಸ್ವಾಮಿಗಳ ಭವಿಷ್ಯವಾಣಿಯಿಂದ ದಂಪತಿಗಳು ಸಂತೋಷಭರಿತರಾದರು. ಅನಂತರ ಅವರು ಸ್ವಾಮಿಗಳಿಂದ ಬೀಳ್ಕೊಂಡು, ಮನೆಗೆ ಹಿಂದಿರುಗಿ, ಎಂದಿನಂತೆ ಪೂಜೆಪ್ರಾರ್ಥನೆಗಳಲ್ಲಿ ನಿರತರಾದರು. ಕೆಲವು ದಿನಗಳನಂತರ ಸ್ವಾಮಿಗಳ ಹರಕೆಯೇ ಸಫಲಗೊಂಡಂತೆ ಭೀಮಾಬಾಯಿ ಗರ್ಭವತಿಯರಾದರು.

ಅಂಬೇಡ್ಕರ್ ವಂಶೀಯರು ರತ್ನಗಿರಿ ಜಿಲ್ಲೆಯ ಅಂಬಾವಾಡಿ ಹಳ್ಳಿಯವರು ; ನಿಮ್ನವರ್ಗಕ್ಕೆ ಸೇರಿದ ಮಹರ್ ಜಾತಿಯವರು. ಬುದ್ಧಿವಂತರೂ ಬಲಿಷ್ಠರೂ ಸಾಹಸಪ್ರಿಯರೂ ಆದ ಆ ಜನಾಂಗದ ಜನರಲ್ಲಿ ಹಲವರು ಸೈನ್ಯಖಾತೆಯನ್ನು ಸೇರಿ, ಧೀರಯೋಧರೆಂದು ಪ್ರಸಿದ್ಧಿ ಪಡೆದಿದ್ದರು.

ಅಂಬೇಡ್ಕರ್ ಅವರ ಅಜ್ಜ ಮಾಲೋಜಿ ಸಕ್ಪಾಲ್ ಇಂಥ ಸೈನಿಕರಲ್ಲೊಬ್ಬನಾಗಿದ್ದನು. ಅಂಬಾವಾಡಿಯಲ್ಲಿ ಮಾತ್ರವಲ್ಲ, ಸುತ್ತಮುತ್ತಣ ಹಳ್ಳಿಗಳಲ್ಲೆಲ್ಲ ಸಕ್ಪಾಲ್ ಮನೆತನ ದೈವಭಕ್ತಿಗೆ, ಪ್ರಾಮಾಣಿಕತನಕ್ಕೆ ಮತ್ತು ಪರೋಪಕಾರಕ್ಕೆ ಪ್ರಸಿದ್ಧಿಯಾಗಿತ್ತು. ಜಾತೀಯತೆಯನ್ನು ನಿಷೇಧಿಸಿದ್ದ ಕಬೀರರ ಭಕ್ತಿಪಂಥ ಅವರ ಮನಸನ್ನು ಸೂರೆಗೊಂಡಿತ್ತು. ಕರುಣೆ, ಮೈತ್ರಿ, ಭೂತದಯೆ ಇವೇ ಮೊದಲಾದ ಸದ್ಭಾವಗಳು ಆ ಪಂಥದ ಬೀಜಮಂತ್ರವಾಗಿದ್ದುವು. ಕುಲಜ ಅಕುಲಜರೆನ್ನದೆ ಯಾರು ಬೇಕಾದರೂ ಆ ಪಂಥವನ್ನು ಸೇರಬಹುದಿತ್ತು. ಸಕ್ಪಾಲರ ಮಾರ್ಗದರ್ಶನದಲ್ಲಿ ಸುತ್ತಮುತ್ತಣ ಹಳ್ಳಿಗರು ಕಬೀರ ಪಂಥಾವಲಂಬಿಗಳಾಗಿದ್ದರು. ಆ ಮನೆತನದ ಹಿಂದಿನವರಲ್ಲಿ ಕೆಲವರು ಭಕ್ತಿಯ ಮಹಾಪೂರದಲ್ಲಿ ಸಿಕ್ಕಿ, ಮನೆಮಠಗಳನ್ನು ತೊರೆದು ಸಾಧು ಸಂಘವನ್ನು ಸೇರಿದ್ದರು. ಅಂಥವರಲ್ಲಿ ರಾಮ್‌ಜೀಯವರಿಗೆ ನದಿಯ ದಡದಲ್ಲಿ ಸಂದರ್ಶನವಿತ್ತು, ಆಶೀರ್ವದಿಸಿದ್ದ ಮಾಲೋಜಿಯ ತಮ್ಮನೂ ಒಬ್ಬ. ಮಾಲೋಜಿ ಸೈನ್ಯದಿಂದ ನಿವೃತ್ತನಾದಾಗ, ಹುಟ್ಟಿ ಬದುಕಿದ್ದ ಮಕ್ಕಳಲ್ಲಿ ಒಬ್ಬ ಮಗ ರಾಮ್‌ಜೀ, ಮತ್ತೊಬ್ಬಳು ಮಗಳು ಮೀರಾ.

ರಾಮ್‌ಜೀ ಸಕ್ಪಾಲರೂ ತಂದೆಯಂತೆಯೇ ಭಗವದ್ಭಕ್ತರು ; ಅವರಂತೆಯೇ ಸೈನ್ಯದಲ್ಲಿ ಸಿಪಾಯಿಯಾಗಿದ್ದು, ವರ್ಗವಾದಾಗ ಊರಿಂದೂರಿಗೆ ಹೋಗುತ್ತ, ಕೆಲವು ವರ್ಷಗಳಿಂದ ಮಧ್ಯಪ್ರದೇಶದ ಮೋಹಿಯಲ್ಲಿ ನೆಲಸಿದ್ದರು. ಅವರ ಪತ್ನಿ ಭೀಮಾಬಾಯಿ ಥಾಣ ಜಿಲ್ಲೆಗೆ ಸೇರಿದ ಮುರ್ಬಾದ್ ಗ್ರಾಮದ ಮುರ್ಬಾದ್‌ಕರ್ ಎಂಬ ಗೌರವಾನ್ವಿತ ಕುಟುಂಬಕ್ಕೆ ಸೇರಿದವರು. ಅವರ ತಂದೆ ಮತ್ತು ಚಿಕ್ಕಪ್ಪಂದಿರು ಸಹ ಸೈನ್ಯದಲ್ಲಿ ಸುಭೇದಾರರಾಗಿದ್ದರು. ಇವರು ಸಹ ಕಬೀರ್ ಪಂಥಾನುಯಾಯಿಯಾಗಿದ್ದರು. ಗೌರವರ್ಣದ, ವಿಶಾಲ ಫಾಲದ, ಗುಂಗುರುಕೂದಲಿನ, ಮಿಂಚುತ್ತಿದ್ದ ಬಟ್ಟಗಣ್ಣುಗಳ, ಮಾಟವಾದ ಮೂಗಿನ ಭೀಮಾಬಾಯಿ ಹುಟ್ಟಿದ ಮತ್ತು ಕೊಟ್ಟ ಮನೆಗಳ ಕಣ್ಮಣಿಯಾಗಿದ್ದರು. ದೈವಭಕ್ತಿಯಿಂದ, ಗುಣಸಂಪತ್ತಿಯಿಂದ, ಕಷ್ಟಸಹಿಷ್ಣುತೆಯಿಂದ,

ಇಂಗಿತಜ್ಞತೆಯಿಂದ ಅವರು ಪತಿಗನುರೂಪೆಯಾದ ಸತಿಯಾಗಿದ್ದರು. ಗಂಡನಿಗೆ ಬರುತ್ತಿದ್ದ ಅಲ್ಪಾದಾಯದಿಂದ ಸಂಸಾರ ಭಾರವನ್ನು ನಿರ್ವಹಿಸುತ್ತ ಅವರ ಹೊಣೆಯನ್ನು ಹಗುರಗೊಳಿಸಿದ್ದರು. ಹದಿಮೂರು ಮಕ್ಕಳಾದರೂ ಅವರು ಧೃತಿಗೆಡದೆ, ತವಕಗೊಳ್ಳದೆ, ಶಾಂತಿ ಸಹನೆಗಳಿಂದ ಸಂಸಾರವನ್ನು ಅಚ್ಚುಕಟ್ಟಾಗಿ ನಡೆಸುತ್ತಿದ್ದರು.

ಸನ್ಯಾಸಿ ಬಂಧುವಿನ ಸಂದರ್ಶನಾನಂತರ ಭೀಮಾಬಾಯಿಯವರು ಎಂದಿಗಿಂತ ಮಿಗಿಲಾಗಿ ಭಜನೆ ಪ್ರಾರ್ಥನೆಗಳಲ್ಲಿ ಮಗ್ನರಾಗುತ್ತಿದ್ದರು. ಕುಳಿತಾಗ ನಿಂತಾಗಲೆಲ್ಲ ಆ ಸನ್ಯಾಸಿಯ ನೆನಪೆ ಮೈಮನಸಗಳನ್ನೆಲ್ಲ ತುಂಬಿಕೊಳ್ಳುತ್ತಿತ್ತು ; ಅವರ ಆಶೀರ್ವಾದವಾಣಿ ಭೀಮಾಬಾಯಿಯವರ ಆಶಾದೀಪವನ್ನು ಪ್ರಖರಗೊಳಿಸುತ್ತಿತ್ತು. ವಿಜ್ಞಾನಿಯ ಧೀಗರ್ಭದಲ್ಲಿ ಅಣುಶಕ್ತಿಯ ಕಲ್ಪನೆ ವಿಕಾಸಗೊಳ್ಳುತ್ತಿರುವಂತೆ, ಅವರ ಹೊಟ್ಟೆಯಲ್ಲಿ ಭರತಖಂಡದ ಪುಣ್ಯವೇ ಪುಂಜಗೊಂಡಂತೆ ವಿಕಾಸಗೊಳ್ಳುತ್ತಿದ್ದ ಭ್ರೂಣ ಬುದ್ಧ ಬಸವೇಶ್ವರರ ಕನಸನ್ನು ಕಾಣುತ್ತಿತ್ತು. ಜನಮನದ ಅಭೀಪ್ಸೆಯೇ ಸಾಕಾರಗೊಂಡಂತೆ 1891ನೆಯ ಏಪ್ರಿಲ್ 14ರಂದು ಮಗು ತಾಯಿಯ ಗರ್ಭದಿಂದಿಳಿದು ಭೂಸ್ಪರ್ಶಮಾಡಿತು. ಭೂಲೋಕದ ಅನ್ಯಾಯ ಪರಂಪರೆಗಳನ್ನು ಕಂಡಂತಾಗಿಯೋ, ಲೋಕದ ಗೋಳೆಲ್ಲ ಹಠಾತ್ತನೆ ತನ್ನ ಕೊರಳಿನಲ್ಲಿ ನುಗ್ಗಿದಂತಾಗಿಯೋ ಆ ಮಗು ಕಿಟಾರನೆ ಕೂಗಿದ ಸದ್ದು ಹೊರಗಿದ್ದವರನ್ನು ಎಚ್ಚರಗೊಳಿಸಿತು. ತಾಯಿಯಂತೆ ದಷ್ಟಪುಷ್ಟವಾಗಿದ್ದ ಮಗುವಿಗೆ ಭೀಮನೆಂಬ ಅಭಿಧಾನ ಸಾರ್ಥಕವಾಯಿತು. ಅದರ ಜತೆಗೆ, ಅವನ ತಂದೆಯ, ಹಿರಿಯರ ಮತ್ತು ಹುಟ್ಟೂರಿನ ನೆನಪಿಗಾಗಿ ರಾಮ್‌ಜೀ ಅಂಬೇಡ್ಕರ್ ಎಂಬ ಪ್ರತಿನಾಮಗಳೂ ಸೇರಿಕೊಂಡವು. ದೊಡ್ಡ ಸಂಸಾರದಲ್ಲಿ ಬಾಣಂತಿಯರಿಗೆ ವಿಶ್ರಾಂತಿಯ ಸುಖ ಕ್ಷಣಿಕ. ಎಳೆಯ ಮಗುವಿನ ಆರೈಕೆಯನ್ನು ನಾದಿನಿ ಮೀರಾಳ ಪಾಲಿಗೊಪ್ಪಿಸಿ, ಭೀಮಾಬಾಯಿ ಬಹುಬೇಗ ಸಂಸಾರದ ಯಂತ್ರಕ್ಕೆ ಕೈಕೊಡಬೇಕಾಯಿತು.

ಮೀರಾ ಹೆಸರಿಗೆ ತಕ್ಕಂತೆ ಭಕ್ತಿಯ ಬೀಡು, ಕರುಣೆಯ ಕರು, ತನ್ನ ಪಾಲಿಗೆ ಬಂದ ಕೆಲಸ ಎಷ್ಟೇ ನಿಕೃಷ್ಟವಾದುದಾಗಿರಲಿ, ಕಡುನಿಷ್ಠೆಯಿಂದ ನೆರವೇರಿಸುತ್ತಿದ್ದಳು. ಕಣ್ಣಿಗೆ ನಿದ್ದೆ ಹತ್ತಿದಾಗ ಹೊರತು ಬೇರೆ ಸಮಯದಲ್ಲಿ ಅವಳಿಗೆ ಬಿಡುವೇ ಇರುತ್ತಿರಲಿಲ್ಲ. ಗೂನುಬೆನ್ನಿನಿಂದಾಗಿ ಅವಳು ಸಂಸಾರ ಸುಖದಿಂದ ವಂಚಿತೆಯಾಗಿದ್ದಳು. ಅಣ್ಣನ ಮಕ್ಕಳನ್ನು ತನ್ನ ಮಕ್ಕಳೆಂದೇ

ಭಾವಿಸಿ, ಅವರ ಲಾಲನೆ ಪಾಲನೆಗಳಲ್ಲಿ ಸರ್ವಸುಖವನ್ನು ಕಂಡುಕೊಂಡಳು. ದಾರಿದ್ರ್ಯ ರೋಗರುಜಿನಗಳ ಹಾವಳಿಯಿಂದಾಗಿ ಅಣ್ಣನ ಹದಿನಾಲ್ಕು ಮಂದಿ ಮಕ್ಕಳಲ್ಲಿ ಉಳಿದವರು ಐವರು. ಭೀಮನಿಗೆ ಹಿರಿಯವರಾಗಿ ಬಲರಾಮ್, ಆನಂದರಾವ್ ಎಂಬಿಬ್ಬರು ಗಂಡು ಮಕ್ಕಳು, ಮಂಜುಳ ಮತ್ತು ತುಲಸಿ ಎಂಬಿಬ್ಬರು ಹೆಣ್ಣುಮಕ್ಕಳು. ಅವರಿಗೆಲ್ಲ ಮೀರಾಳೆ ನಿಜವಾದ ತಾಯಿ. ಭೀಮನಂತು ಅವಳನ್ನು ಬಿಟ್ಟಲುಗುತ್ತಿರಲಿಲ್ಲ. ಅತ್ತಾಗ ಅವಳೇ ಎತ್ತಿಕೊಳ್ಳಬೇಕು, ಅವಳೇ ಕೈತುತ್ತು ಕೊಡಬೇಕು, ಅವಳೇ ಸ್ನಾನ ಮಾಡಿಸಬೇಕು, ರಾತ್ರಿ ಅವಳ ಬಳಿಯೇ ಮಲಗಬೇಕು.

ಭೀಮ ಹುಟ್ಟಿದ ಎರಡು ವರ್ಷಗಳೊಳಗಾಗಿ ತಂದೆ ಸೈನಿಕ ಶಾಲೆಯ ಮುಖ್ಯೋಪಾಧ್ಯಾಯ ವೃತ್ತಿಯಿಂದ ನಿವೃತ್ತರಾಗಬೇಕಾಯಿತು. ಅನಂತರ ಅವರು ಮೋಹಿಯಿಂದ ಕೊಂಕಣ ಪ್ರದೇಶದ ದಪೋಲಿಗೆ ಸಂಸಾರ ಸಮೇತರಾಗಿ ಬಂದು ತಂಗಿದರು. ಐದು ವರ್ಷ ತುಂಬಿದಾಗ ಭೀಮನನ್ನು ಪ್ರಾಥಮಿಕ ಶಾಲೆಗೆ ಸೇರಿಸಲಾಯಿತು. ತಮಗೆ ಬರುತ್ತಿದ್ದ ಪಿಂಚಣಿಯ ಅಲ್ಪಾದಾಯದಿಂದ ರಾಮ್‌ಜೀಗೆ ಸಂಸಾರ ನಿರ್ವಹಣೆ ಕಷ್ಟವಾಯಿತು. ಎಷ್ಟೋ ದಿನ ಮಕ್ಕಳಿಗೆ ಮನೆಯಲ್ಲಿದ್ದದ್ದನ್ನು ಬಡಿಸಿ, ಗಂಡಹೆಂಡಿರಿಬ್ಬರೂ ಉಪವಾಸವಿರುತ್ತಿದ್ದರು. ಹಸಿವಿನ ಬಳಲಿಕೆಯಿಂದ ನಮೆಯುತ್ತಿದ್ದರೂ ಭೀಮಾಬಾಯಿ ನೆರೆಹೊರೆಯವರಿಗೆ ಗುಟ್ಟು ಬಿಟ್ಟುಕೊಡುತ್ತಿರಲಿಲ್ಲ. ಹೆಜ್ಜೆ ಹೆಜ್ಜೆಗೂ ಆತ್ಮಗೌರವವನ್ನು ಪರೀಕ್ಷಿಸುವ ಸಂದರ್ಭಗಳೊದಗುತ್ತಿದ್ದರೂ ಅವರು ಎದೆಗುಂದುತ್ತಿರಲಿಲ್ಲ. ತಮ್ಮ ಜೀವನದ ದಂದುಗ ಮಕ್ಕಳಿಗೆ ತಿಳಿಯಬಾರದೆಂದು ತುಂಬ ಎಚ್ಚರಿಕೆ ವಹಿಸುತ್ತಿದ್ದರು. ಪಟ್ಟಣ ಸೇರುವುದಾದರೆ ಎಂಥದಾದರೂ ಕೆಲಸ ಗಿಟ್ಟಿಸಿಕೊಳ್ಳಬಹುದೆಂಬ ಭರವಸೆಯಿಂದ ಆ ಸಂಸಾರ ಸತಾರೆಗೆ ತೆರಳಿತು. ಸತಾರೆಯ ಸಾರ್ವಜನಿಕ ಕಾಮಗಾರಿ ಇಲಾಖೆಯಲ್ಲೊಂದು ಸಣ್ಣ ಕೆಲಸ ದೊರಕಿಸಿಕೊಂಡು ರಾಮ್‌ಜಿ ಅಲ್ಲಿಯೇ ಒಂದು ಕೋಳಿಗೂಡಿನಂತಿದ್ದ ಮನೆಯನ್ನು ಬಾಡಿಗೆಗೆ ಹಿಡಿದರು.

ಪಟ್ಟಣ ಸೇರಿದ ನಂತರ ರಾಮ್‌ಜೀಯವರ ಸಂಪಾದನೆ ತುಸು ಹೆಚ್ಚಿದ್ದು, ನಿಜ ; ಅದರೆ ಅಲ್ಲಿಗೆ ತಕ್ಕಂತೆ ಖರ್ಚುಗಳೂ ಹೆಚ್ಚಿದುವು. ನಗರ ಜೀವನ ಹಳ್ಳಿಯ ಬದುಕಿಗಿಂತ ಕಠಿನವಾಯಿತು. ಭೀಮಾಬಾಯಿ ಮಕ್ಕಳ ಕ್ಷೇಮಕ್ಕಾಗಿ ತನ್ನ ಸುಖವನ್ನು ಬಲಿಗೊಡಬೇಕಾಯಿತು. ಸುಖದ ಕಲ್ಪನೆಯೇ

ಅವರಿಗಿರಲಿಲ್ಲ. ಉಟ್ಟ ಬಟ್ಟೆ ಹೊರತಾಗಿ ಬೇರೆ ಬಟ್ಟೆ ಕಂಡರಿಯರು. ಮಕ್ಕಳು ಓದಿ, ನೌಕರಿ ದೊರೆತು, ಸಂಪಾದನೆಮಾಡುವಂತಾದಾಗ, ಹೊಟ್ಟೆತುಂಬ ಹಿಟ್ಟು ತಿಂದು ಮೈತುಂಬ ಬಟ್ಟೆ ಹೊದೆಯಬಹುದೆಂದವರು ಆಶಾಗೋಪುರವನ್ನು ನಿರ್ಮಿಸಿಕೊಂಡಿದ್ದರು. ಆಶೆಯಿಂದ ಹೊಟ್ಟೆತುಂಬುತ್ತದೆಯೆ ? ಹಸಿವಿಗೂ ಮಿತಿಯುಂಟು. ಭವಿಷ್ಯದ ಆಶೆಯಾಗಲೀ, ಭಕ್ತಿಯ ಆವೇಶವಾಗಲೀ ನಿತ್ರಾಣ ಗೊಂಡ ದೇಹವನ್ನು ರಕ್ಷಿಸಲಾಗಲಿಲ್ಲ. ಅವರು ತೀರಿಕೊಂಡಾಗ ಭೀಮನಿಗೆ ಆರು ವರ್ಷ ಮಾತ್ರ. ಸಾವಿನ ಸಂಕಟ ಹಿರಿಯವರ ಮೇಲೆ ಕ್ರೂರ ಪರಿಣಾಮ ಬೀರಿದಂತೆ, ಕಿರಿಯ ಭೀಮನ ಮನಸ್ಸಿನ ಮೇಲೆ ಆಘಾತವುಂಟುಮಾಡಲಿಲ್ಲ. ಸೋದರತ್ತೆಯ ವಾತ್ಸಲ್ಯದ ಮಡಿಲಲ್ಲಿ, ಅಕ್ಕಂದಿರ ತೆಕ್ಕೆಯಲ್ಲಿ ಬೆಳೆದ ಅವನಿಗೆ ಬಡತನದ ಬವಣೆಯಾಗಲೀ ಸಾವಿನ ಕಲ್ಪನೆಯಾಗಲೀ ಭಯಾನಕವಾಗಿ ತೋರ ಲಿಲ್ಲ. ಆ ಮೊದಲೇ ಹೆಣ್ಣುಮಕ್ಕಳು ಮದುವೆಯಾಗಿ ತಂತಮ್ಮ ಗಂಡಂದಿರ ಮನೆಗಳಲ್ಲಿದ್ದುದರಿಂದ ಅವನು ಮನೆಯಿಂದ ಮನೆಗೆ ಓಡಾಡಿಕೊಂಡಿದ್ದನು. ತಾಯಿಲ್ಲದ ಮಗುವೆಂದು ಮೀರಾಳ ಪ್ರೇಮ ದಿನೇ ದಿನೇ ಅವನ ಮೇಲೆ ಉಕ್ಕಂದವಾಗಿ ಹರಿಯತೊಡಗಿತು. ಎಲ್ಲರ ಮುದ್ದಿನಿಂದ ಅವನು ಉಬ್ಬಿ ಹೋಗಲಿಲ್ಲ. ಚೇಷ್ಟೆಯ ಪುಟ್ಟನಾಗಲಿಲ್ಲ. ಓರಗೆಯವರೊಂದಿಗೆ ಆಟಕೂಟ ಗಳಲ್ಲಿಯೂ ಹೆಚ್ಚಾಗಿ ಭಾಗವಹಿಸುತ್ತಿರಲಿಲ್ಲ. ಕೆಲವು ವೇಳೆ ಏಕಾಂತದಲ್ಲಿದ್ದಾಗ ಅವನು ಗಾಢಚಿಂತೆಯಲ್ಲಿದ್ದಂತೆ, ಬಾಹ್ಯಸ್ಥಿತಿಯನ್ನು ಮರೆತಂತೆ ಕುಳಿತಿರು ತ್ತಿದ್ದನು.

ಮಡದಿ ತೀರಿಕೊಂಡನಂತರ ರಾಮ್‌ಜೀ ಸಕ್ಪಾಲರು ಪೂಜೆ ಭಜನೆಗಳಲ್ಲಿ ವಿಶೇಷವಾಗಿ ಕಾಲ ಕಳೆಯಲಾರಂಭಿಸಿದರು. ಹಗಲೆಲ್ಲ ದುಡಿಯುವುದು, ಬಿಡುವಾದಾಗಲೆಲ್ಲ ಓದು ಭಜನೆಗಳಲ್ಲಿ ಕಾಲಕಳೆಯುವುದು ಅವರ ಅನುದಿನದ ಕಾರ್ಯಕ್ರಮವಾಯಿತು. ಗೃಹಕೃತ್ಯದ ಭಾರವೆಲ್ಲ ಪಾದರಸದಂಥ ಬುದ್ಧಿಯ ಮೀರಾಳ ಮೇಲೆ ಬಿತ್ತು. ರಾಮ್‌ಜೀ ಮನೆಯೊಳಗೆ ಕಾಲಿಡುತ್ತಿದ್ದಂತೆಯೇ ಕೈಕಾಲು ಮುಖ ತೊಳೆದುಕೊಂಡು ದೇವರ ಮುಂದೆ ಭಕ್ತಿ ಪರವಶರಾಗಿ ಕಣ್ಮುಚ್ಚಿ ಕುಳಿತು ಬಿಡುತ್ತಿದ್ದರು. ಆಗಾಗ್ಗೆ ಭಕ್ತಿಯೇ ಗಾನಲಹರಿಯಾಗಿ ಅವರ ಬಾಯಿಯಿಂದ ಹೊರಚೆಲ್ಲುತ್ತಿತ್ತು. ಆಗ ಮಕ್ಕಳೆಲ್ಲರೂ ಅವರ ಸುತ್ತ ಕುಳಿತು ಅವರನ್ನೇ ಅನುಕರಿಸುತ್ತಿದ್ದರು. ಸ್ವಯಂ ಶಿಸ್ತಿನ ಸಿಪಾಯಿಯಾಗಿದ್ದ ರಾಮ್‌ಜೀ ಮಕ್ಕಳಿಂದ ಕಟ್ಟುನಿಟ್ಟಿನ ನಡೆನುಡಿಗಳನ್ನು ನಿರೀಕ್ಷಿಸುತ್ತಿದ್ದರು,

ಮಕ್ಕಳು ಆಕಸ್ಮಾತ್ತಾಗಿ ದಾರಿತಪ್ಪಿದಾಗ ಕಣ್ಣು ಕೈಗಳಿಂದ ಬೆದರಿಸುತ್ತಿದ್ದುದೂ ಉಂಟು. ರಾತ್ರಿ ಬಹು ಹೊತ್ತಿನತನಕ ಭಜನೆ ಧಾರಾಕಾರವಾಗಿ ಸಾಗುತ್ತಿತ್ತು. ಕಬೀರರ ಗೀತೆಗಳ ಜತೆಗೆ ಮರಾಠಿ ಸಂತಕವಿಗಳಾದ ಮೋರೋಪಂತ್, ಮುಕ್ತೇಶ್ವರ್ ಮತ್ತು ತುಕಾರಾಮರ ರಚನೆಗಳನ್ನು ಇಂಪಾಗಿ ಹಾಡುತ್ತಿದ್ದರು. ಆಗಾಗ್ಗೆ ರಾಮ್‌ಜೀ ಮಕ್ಕಳನ್ನು ಕೂರಿಸಿಕೊಂಡು ಮರಾಠಿ ರಾಮಾಯಣ ಭಾರತಗಳನ್ನು ಓದಿ ವಿವರಿಸುತ್ತಿದ್ದರು. ಹೀಗಾಗಿ ಅವರ ಭಾಷಾಜ್ಞಾನ ಭದ್ರವಾದ ತಳಹದಿಯಮೇಲೆ ನೆಲೆಯೂರಲನುಕೂಲವಾಯಿತು.

ರಾಮ್‌ಜೀ ಹದಿನಾಲ್ಕು ವರ್ಷಗಳ ಕಾಲ ಸೈನಿಕ ಶಾಲೆಯಲ್ಲಿ ಸುಭೇದಾರ್ ದರ್ಜೆಯ ಮುಖ್ಯೋಪಾಧ್ಯಾಯರಾಗಿ ಮಕ್ಕಳಿಗೆ ಪಾಠ ಹೇಳಿಕೊಟ್ಟು ಶೈಕ್ಷಣಿಕ ತತ್ತ್ವಗಳನ್ನು ರಕ್ತಗತ ಮಾಡಿಕೊಂಡಿದ್ದರು. ಅವರ ಆ ದೀರ್ಘಾನುಭವ ತಮ್ಮ ಮಕ್ಕಳ ತರಬೇತಿಯಲ್ಲಿ ಬಹುವಾಗಿ ನೆರವಾಯಿತು. ಅವರಿಗೆ ಮಕ್ಕಳ ಆಧ್ಯಾತ್ಮಿಕ ಶಿಕ್ಷಣದಲ್ಲೆಷ್ಟು ಆಸಕ್ತಿಯಿತ್ತೋ ಅವರ ಲೌಕಿಕ ಶಿಕ್ಷಣದಲ್ಲಿಯೂ ಅಷ್ಟೇ ಅನುರಕ್ತಿಯಿರುತ್ತಿತ್ತು. ಇಂಗ್ಲಿಷ್, ಗಣಿತ, ವ್ಯಾಕರಣ ಮುಂತಾದ ವಿಷಯಗಳನ್ನು ಅತ್ಯಂತ ಶ್ರದ್ಧೆಯಿಂದ ಕಲಿಸುತ್ತಿದ್ದರು. ತಮ್ಮ ಕಿರಿಯ ಮಗನ ಕುಶಾಗ್ರಮತಿಗೆ ಮಾರುಹೋಗಿ, ಅವನ ಭವಿಷ್ಯದ ಬಗ್ಗೆ ತುಂಬ ನೆಚ್ಚಿಕೆಯಿಟ್ಟುಕೊಂಡಿದ್ದರು. ಅವರು ತಂದೆಯಾಗಿ, ಗುರುವಾಗಿ, ಗೆಳೆಯರಾಗಿ ಮಕ್ಕಳನ್ನು ಸತ್ಪಥದಲ್ಲಿ ಬೆಳೆಸಿದರು.

ಕಬೀರರ ಸಂದೇಶ ಅವರ ಮನೋವಿಕಾಸಕ್ಕೆ ಕಾರಣವಾದಂತೆ ಮಹಾತ್ಮ ಫೂಲೆಯವರ ಜೀವನ ಮಾರ್ಗ ಅವರ ಬಾಳನ್ನು ರೂಪಿಸಿತು. ಅವರು ಮಾಂಸಾಹಾರ ಮಾದಕ ಪಾನೀಯಾದಿ ತಾಮಸಿಕ ವಸ್ತುಗಳಿಂದ ದೂರವಾಗಿದ್ದರು. ಕೇವಲ ಉದರಂಭರಣ ಮತ್ತು ಸ್ವಾರ್ಥಸಾಧನೆಗಳಿಂದಲೇ ಅವರು ತೃಪ್ತಿಗೊಂಡವರಲ್ಲ. ತಮ್ಮ ಸುತ್ತಮುತ್ತ ತಾಂಡವವಾಡುತ್ತಿದ್ದ ದಾರಿದ್ರ್ಯ, ಶೋಷಣೆ ಮತ್ತು ಅನ್ಯಾಯ ಪರಂಪರೆಗಳಿಂದ ಅವರ ಮನಸ್ಸು ರೋಸಿ ಹೋಗಿತ್ತು. ಸಮಯ ದೊರೆತಾಗಲೆಲ್ಲ ನಿಮ್ನವರ್ಗದ ಜನರ ಸಮಸ್ಯೆಗಳ ಹಾಗೂ ಅವರ ಉದ್ಧಾರದ ಬಗೆಗೆ ಚರ್ಚಿಸುತ್ತಿದ್ದರಲ್ಲದೆ, ಆಗಾಗ್ಗೆ ಅವರ ವಸತಿಗಳಿಗೆ ಹೋಗಿ ಅವರು ಏಳ್ಗೆಯಾಗುವ ವಿಧಾನವನ್ನು ಬೋಧಿಸುತ್ತಿದ್ದರು. ಮಕ್ಕಳಿಗೆ ವಿದ್ಯೆಕಲಿಸುವಂತೆ ಪ್ರೋತ್ಸಾಹಿಸುತ್ತಿದ್ದರು. ಸೈನ್ಯಕ್ಕೆ ಮಹರ್

ಜನರನ್ನು ಸೇರಿಸಿಕೊಳ್ಳಬಾರದೆಂದು 1892ರಲ್ಲಿ ಇಂಡಿಯಾ ಸರ್ಕಾರ ನಿರೂಪ ಹೊರಡಿಸಿದಾಗ, ಆ ಅನ್ಯಾಯದ ವಿರುದ್ಧ ಸೆಟೆದು ನಿಂತು ಪ್ರತಿಭಟಿಸಿದವರಲ್ಲಿ ರಾಮ್‌ಜೀ ಮೊದಲಿಗರು. ಆ ಆಜ್ಞೆಯನ್ನು ಹಿಂದಕ್ಕೆ ತೆಗೆದುಕೊಳ್ಳುವಂತೆ ರಾನಡೆಯವರ ಸಹಾಯದಿಂದ ಅರ್ಜಿಯೊಂದನ್ನು ತಯಾರಿಸಿ ಸರ್ಕಾರಕ್ಕೆ ರವಾನಿಸಿದರು. ನಿಮ್ನವರ್ಗದ ಜನ ಅನುಭವಿಸುತ್ತಿದ್ದ ಕಿರುಕುಳಗಳನ್ನು ಮೇಲಿಂದ ಮೇಲೆ ಸರ್ಕಾರೀ ಅಧಿಕಾರಿಗಳ ಗಮನಕ್ಕೆ ತರುತ್ತಿದ್ದರಲ್ಲದೆ, ಮುಂಬಯಿಯ ರಾಜ್ಯಪಾಲರನ್ನು ಭೇಟಿಮಾಡಿ ಮನವಿಗಳನ್ನು ಸಲ್ಲಿಸುತ್ತಿದ್ದರು. ತಂದೆಯ ಪರೋಪಕಾರ ಬುದ್ಧಿ, ಭೂತದಯೆ, ಸತ್ಯನಿಷ್ಠೆ, ನ್ಯಾಯಪರತೆ ಮತ್ತು ನಿರ್ಭಯತೆಗಳು ಅವನಿಗರಿವಿಲ್ಲದಂತೆಯೇ ಸೂಕ್ಷ್ಮಮತಿ ಭೀಮನ ಎಳೆಯ ಹೃದಯದಲ್ಲಿ ಮುದ್ರಿತಗೊಳ್ಳುತ್ತಿದ್ದುವು, ರಕ್ತಗತವಾಗುತ್ತಿದ್ದುವು.

ಭೀಮ ಸತಾರಾದಲ್ಲಿಯೇ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ, 1900 ರಲ್ಲಿ ಪ್ರೌಢಶಾಲೆ ಪ್ರವೇಶಿಸಿದನು. ಬುದ್ಧಿ ದೇಹಗಳು ಬಲಿಯುತ್ತಿದ್ದಂತೆ ತಾನು ಅಸ್ಪೃಶ್ಯನೆಂಬ ಭಾವನೆ ಮೊಳೆಯ ತೊಡಗಿತು : ಪಿಶಾಚಿ ಸ್ವರೂಪದ ಅಮಾನವೀಯ ಸಾಮಾಜಿಕ ವೈಪರೀತ್ಯಗಳೂ ಅನಾಗರಿಕ ದಾನವೀಯ ದೌರ್ಜನ್ಯಗಳೂ ಮುಗ್ಧಬಾಲಕನ ಮುಂದೆ ಹಲ್ಗಿರಿದು ವಿಕಟನರ್ತನದಲ್ಲಿ ತೊಡಗಿದುವು. ಸವರ್ಣೀಯ ಮಕ್ಕಳು ತನ್ನನ್ನೇಕೆ ಮುಟ್ಟಿಸಿಕೊಳ್ಳುತ್ತಿಲ್ಲವೆಂಬ ಗುಟ್ಟು ಕ್ರಮೇಣ ಅವನಿಗರಿವಾಯಿತು. ಓದು ಬರಹಗಳಲ್ಲಿ, ನಡೆನುಡಿಗಳಲ್ಲಿ, ಉಡುಗೆತೊಡುಗೆಗಳಲ್ಲಿ ಇತರರಿಗಿಂತ ತಾನು ಕಡೆಯಲ್ಲವಾದರೂ, ತನ್ನ ಬಗೆಗಿದ್ದ ಇತರರ ಮಡಿವಮೈಲಿಗೆ ಭಾವನೆ ಅವನನ್ನು ಚಿಂತೆಗೀಡು ಮಾಡಿತು. ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗಲೇ ನಡೆದ ಅಸಹ್ಯ ಘಟನೆಯೊಂದು ಅವನ ಮನಸ್ಸಿನಮೇಲೆ ಎಂದೆಂದೂ ಮಾಯದ ಬರೆಗಳನ್ನೆಳೆಯಿತು.

ಅದೊಂದು ಬೇಸಗೆಯ ದಿನ. ನೆಲ ಕೊಂಡವಾಗಿತ್ತು. ಗಾಳಿ ಸೆಕೆಯಿಂದ ಬಳಲಿತ್ತು. ಸಹಪಾಠಿ ದಾಯಾದಿಯೊಬ್ಬನ ತಂದೆ ಗೋರೆಗಾಂವ್ ಊರಿನಲ್ಲಿ ನೌಕರಿಮಾಡುತ್ತಿದ್ದನು. ತನ್ನ ತಂದೆಯನ್ನು ನೋಡಿಬರುವ ಸಲುವಾಗಿ ದಾಯಾದಿ ಭೀಮನನ್ನೂ ಅವನಣ್ಣನನ್ನೂ ಜತೆಗೆ ಕರೆದನು. ಅವರು ಮೂವರೂ ಪಡಲಿ ನಿಲ್ದಾಣದಲ್ಲಿ ರೈಲು ಹಿಡಿದು ಮಸೂರಿಯಲ್ಲಿಳಿದರು.

ಅಲ್ಲಿಂದ ಮುಂದಿನ ದಾರಿ ಅವರಿಗೆ ತಿಳಿದಿರಲಿಲ್ಲ. ತಮ್ಮ ಆಗಮನ ವಾರ್ತೆಯನ್ನು ಮಗ ತಂದೆಗೆ ತಿಳಿಸಿರಲಿಲ್ಲವಾಗಿ ಅವನು ನಿಲ್ದಾಣಕ್ಕೆ ಬಂದಿರಲಿಲ್ಲ. ಆ ಕಡೆ ಹೋಗುವವರು ಯಾರೂ ಸಿಗಲಿಲ್ಲ. ನಿಲ್ಮನೆಯಲ್ಲಿ ಅವರಿವರನ್ನು ಮಾತಾಡಿಸಿದರು. ಸುತ್ತಮುತ್ತ ತರಾಯಿಸಿದರು ; ಕೊನೆಗೆ ಸ್ಟೇಷನ್‌ಮಾಸ್ತರ ಬಳಿಹೋಗಿ. ತಾವು ಗೋರೆಗಾಂವ್‌ಗೆ ಹೋಗಬೇಕಾಗಿದೆಯೆಂದೂ, ತಮಗೊಂದು ವಾಹನ ಕಳಿಸಿಕೊಡಬೇಕೆಂದೂ ಕೇಳಿಕೊಂಡರು. ಮಾಸ್ತರು ಎಳೆಯ ಹುಡುಗರನ್ನು ನೋಡಿ ಕನಿಕರಗೊಂಡು, ಗಾಡಿ ಗೊತ್ತು ಮಾಡಿಕೊಟ್ಟನು. ಗಾಡಿಯವ ಸವರ್ಣೀಯ, ಮುದುಕ. ಉಡುಗೆ ತೊಡುಗೆಗಳಿಂದ ಆ ಹುಡುಗರು ಮಹರ್ ಜಾತಿಗೆ ಸೇರಿದವರೆಂದು ಅವನಿಗೆ ಮೊದ ಮೊದಲು ತಿಳಿಯಲಿಲ್ಲ. ಅವರ ಮಾತುಕತೆಗಳಿಂದ ಚಿಂದಿ ಬಟ್ಟೆಯ, ಕೊಳಕು ಮೈಯ ಮುದುಕನಿಗೆ ಸಂದೇಹವಾಗಿ—

"ನೀವು ಯಾರು ? ಎಲ್ಲಿಯೋರು ?" ಎಂದು ಆರ್ಭಟಿಸಿದರು.

"ಅವೆಲ್ಲ ಕಟ್ಟಿಕೊಂಡು ನೀನೇನ್ಮಾಡ್ತೀ, ಅಜ್ಜ. ನಮ್ಮೂರು ಸತಾರೆ. ಅಲ್ಲಿ ಓದ್ತಾ ಇದ್ದೀವಿ" ಎಂದು ಹುಡುಗರ ಪರವಾಗಿ ಭೀಮ ನಿರ್ಭೀತಿಯಿಂದ ಉತ್ತರಿಸಿದನು.

"ಉಡುಪು ನೋಡಿದ್ರೆ ಉತ್ತಮರಂತೆ ಕಾಣ್ತೀರಿ. ಮಾತು ನೋಡಿದ್ರೆ ಮಹರರಂತೆ ತೋರ್ತೀರಿ."

"ನಮ್ಮಾತ್ನಲ್ಲೇನಾದ್ರೂ ಯಾಸೆ ಕಾಣ್ತದಾ ?"

"ಅಷ್ಟೊತ್ನಿಂದ ನೀವು ಹೊಲೆಯರ ವಿಷಯಾನ್ನೆ ಮಾತಾಡ್ತಿದ್ದೀರಿ. ನಿಮ್ಜಾತಿ ಯಾವುದು ?"

"ಜಾತಿ ಕಟ್ಕೊಂಡೇನು ? ನಿನ್ಬಟ್ಟೇಗಿಂತ ನಮ್ಬಟ್ಟೆ ಮಡಿಯಾಗಿಲ್ವ ?"

ಅವರು ಅಸ್ಪೃಶ್ಯರೆಂದು ಆ ಮಾತಿನಿಂದ ಮುದುಕ ನಿರ್ಧರಿಸಿ, ಕೋಪೋದ್ರಿಕ್ತನಾಗಿ "ಲೋ ಬಡ್ಡೀ ಮಕ್ಕಳಾ ನಿಮ್ಗೆಲ್ಲೋ ಅನ್ನ ಹೆಚ್ಚಾಗದೆ. ಕೊಬ್ಬಿ ಹೋಗಿದ್ದೀರಾ, ಮುಂಡೇವ. ನಿಮ್ಗಿಷ್ಟು ಗೊತ್ತಾಗಬಾರದಾ ? ಇನ್ನೂ ಕುಂತಿದ್ದೀರಲ್ಲೋ. ಇಳಿರೋ ನನ್ಗಾಡಿ ಹೊಲಸಾಯ್ತು. ಅದೆಷ್ಟು ನೀರ್ಬೇಕೋ

ತೊಳಿಯೋಕೆ? ನಿಮ್ದರಿದ್ರ ಮುಖ ನೋಡಿದ್ಮೇಲೆ ಈ ದಿನದ ಸಂಪಾದ್ನೇನೂ ಸೊನ್ನೆ" ಎಂದು ಗಾಡಿಯ ಮೂಕಿಯನ್ನು ಮೇಲೆತ್ತಿ, ಗೊಬ್ಬರ ಕೆಡಹುವಂತೆ ಅವರನ್ನು ಕೆಳಗೆ ಉರುಳಿಸಿದನು.

ಮುಂದೇನು ಮಾಡುವುದೆಂದು ಹುಡುಗರಿಗೆ ಯೋಚನೆಗಿಟ್ಟುಕೊಂಡಿತು. ರೇಗಿದರೆ ಕೆಲಸ ಕೆಡುತ್ತದೆಂಬುದನ್ನವರು ಬಲ್ಲರು. "ಏಕಜ್ಜಾ, ಹೀಗೆ ಕೋಪ ಮಾಡ್ಕೊಳ್ತೀರಿ? ನಿಮ್ನೋಡ್ದಾಗ ಕಬೀರರನ್ನೇ ಕಂಡಂಗಾಯ್ತು. ಊರು ಮುಟ್ಟಿಸ್ಬಿಡಿ" ಎಂದು ಭೀಮ ನಯವಾಗಿ ಕೇಳಿಕೊಂಡನು. ಕಬೀರರ ಹೆಸರು ಕೇಳಿದಾಕ್ಷಣ ಮಂತ್ರಮುಗ್ಧನಾದವನಂತೆ ಮುದುಕ "ನೀವು ಹೊಲೆಯರ ಹುಡುಗರು ಅಂತ ನಮ್ಜನಕ್ಕೆ ಗೊತ್ತಾದ್ರೆ, ನನ್ನನ್ನ ಕುಲದಿಂದ ಹೊರಗ್ಹಾಕ್ತಾರೆ. ನಮ್ಗೆ ಬೆಂಕಿ ಬಿಸಿನೀರು ಕೊಡೋಲ್ಲ. ಸದ್ಮಾಡ್ದೆ ಇಳಿದುಹೋಗಿ" ಎಂದು ನುಡಿದನು. "ಹಾಗಾದ್ರೆ ಒಂದ್ಕೆಲ್ಸ ಮಾಡಜ್ಜ. ಗಾಡಿ ನಾವು ಹೊಡೀತೀವಿ. ನೀವು ಹಿಂದೆ ಬನ್ನಿ. ಊರಿನ ಗಡಿಯಲ್ಲಿಯೇ ನಾವಿಳಿದುಬಿಡ್ತೇವೆ. ಕತ್ಲಲ್ಲಿ ನಮ್ಗುರುತು ಯಾರ್ಗೂ ಸಿಗೋಲ್ಲ. ಜತೆಗೆ ನಿಮ್ಗೆ ಎರಡರಷ್ಟು ಬಾಡಿಗೆ ಕೊಡ್ತೇವೆ" ಎಂದು ಹುಡುಗರು ಮುದುಕನನ್ನು ಪುಸಲಾಯಿಸಿ, ಹಣ ಹೊರಗೆ ತೆಗೆದರು. ಅದು ಅವರ ಜೇಬಿನಲ್ಲಿದ್ದರೂ ಹೊಲಸಾಗಿರಲಿಲ್ಲ. ಮುದುಕ ಅದನ್ನೀಸಿಕೊಂಡು. ನಡುವಿನ ಚೀಲದಲ್ಲಿಳಿಬಿಟ್ಟು. ಗಾಡಿಯಿಂದ ಕೆಳಗೆ ದುಮುಕಿದ. ಭೀಮನ ಅಣ್ಣ ತಿಕಡಿಯ ಮೇಲೆ ಕುಳಿತು ಗಾಡಿ ಹೊಡೆಯುತ್ತಿದ್ದನು ; ಮುದುಕ ನಡಗೆಯಲ್ಲಿ ಹಿಂಬಾಲಿಸುತ್ತಿದ್ದನು. ಊರು ತಲುಪುವಾಗ ಮಧ್ಯರಾತ್ರಿಯಾಗಿತ್ತು. ಗಂಟಲೊಣಗಿ, ಮಾತು ಹೊರಡದಂತಾಗಿದ್ದರೂ, ದಾರಿಯಲ್ಲಿ ನೀರು ಸಿಗುವಂತಿರಲಿಲ್ಲ. ಕೆರೆ ಹೊಂಡಗಳು ಬತ್ತಿ ಹೋಗಿದ್ದುವು. ಸವರ್ಣೀಯರು ನೀರು ಕೊಡುವಂತಿರಲಿಲ್ಲ.

ಸೂಕ್ಷ್ಮ ಪ್ರಕೃತಿಯ ಭೀಮನಿಗೆ ಮುಂದೆ ಮೇಲಿಂದ ಮೇಲೆ ಇಂಥ ಅನುಭವಗಳು ಒದಗತೊಡಗಿದವು. ಒಮ್ಮೆ ಮಧ್ಯಾಹ್ನ ಬಿರುಬಿಸಿಲಲ್ಲಿ ಗಂಟಲೊಣಗಿ, ಹಂದಿ ಬಿದ್ದಿದ್ದ ಊರ ಮುಂದಿನ ಕೊಳದಲ್ಲಿ ನೀರು ಕುಡಿಯಲೆಳಸಿದಾಗ, ಊರಿನ ಜನ ಅವನನ್ನು ದರದರನೆ ಎಳೆದು, ರಕ್ತ ನೀಲಿಗಟ್ಟುವವರೆಗೆ ಹೊಡೆದರು. ಬೆಳಗಿನ ಜಾವದಲ್ಲಿಯೇ ತನ್ನ ಜಾತಿಯವರು ಸವರ್ಣೀಯರ ಮನೆಯ ಉಚ್ಚೆಹೇಲುಗಳನ್ನು ತಲೆಯಮೇಲೆ ಹೊತ್ತು ಹೊರಗೆ ಬಿಸಾಡುತ್ತಿದ್ದುದನ್ನೂ, ಹಬ್ಬ ಹರಿದಿನಗಳಲ್ಲಿ ಅವರ ಎಂಜಲುಗೂಳಿಗಾಗಿ ಕಾಯುತ್ತಿದ್ದು

ದನ್ನೂ ಕಂಡು ಅಸಹಾಯಕನಾಗಿ ಅತ್ತುದ್ದುಂಟು. ಅಗಸ ತನ್ನವರ ಬಟ್ಟೆ ಯೊಗೆಯುವಂತಿಲ್ಲ. ಹಜಾಮ ತನ್ನವರ ತಲೆ ಬೋಳಿಸುವಂತಿಲ್ಲ. ಅವನ ಅಕ್ಕಂದಿರೋ ಸೋದರತ್ತೆಯೋ ಮನೆಯಲ್ಲಿ ಗಂಡಸರ ಕೂದಲು ಕತ್ತರಿಸು ತ್ತಿದ್ದರು. ಶಾಲೆಯಲ್ಲಂತು ಕೀಳ್ಜಾತಿಯ ಮಕ್ಕಳು ಸಹಪಾಠಿಗಳ ಸಾಲಿನಲ್ಲಿ ಕುಳಿತುಕೊಳ್ಳುವಂತಿಲ್ಲ. ಬರಿಯ ನೆಲದಮೇಲೆ ಕುಳಿತುಕೊಳ್ಳಬೇಕಾಗಿತ್ತು. ಬೇಕಾದರೆ ಮನೆಯಿಂದ ಗೋಣಿಚೀಲ ತಂದು ಹಾಸಿಕೊಳ್ಳಬಹುದಿತ್ತು. ಆದರೆ ಶಾಲೆ ಮುಗಿದನಂತರ ಅದನ್ನು ಮನೆಗೊಯ್ಯಬೇಕಾಗಿತ್ತು. ಮಾಸ್ತರು ಅವರ ಪುಸ್ತಕಗಳನ್ನು ಮುಟ್ಟುತ್ತಿರಲಿಲ್ಲ. ಕಾಪಿ ಅಥವಾ ಲೆಕ್ಕದ ನೋಟು ಬುಕ್ಕು ಗಳನ್ನು ಹುಡುಗರು ದೂರ ಹಿಡಿಯಬೇಕು. ಅವರು ಕಣ್ಣರಳಿಸಿ ನೋಡಿ ತಲೆಯಲ್ಲಾಡಿಸಬೇಕು. ಕೆಲವರಂತು ಮಾತು ಮೈಲಿಗೆಯಾದೀತೆಂಬ ಶಂಕೆ ಯಿಂದ ಸನ್ನೆಗಳಿಂದಲೇ ಹುಡುಗರನ್ನು ಮಾತಾಡಿಸುತ್ತಿದ್ದರು. ಬಾಯಾರಿಕೆ ಯಾದರೆ ಮನೆಗೆ ಹಿಂದಿರುಗುವ ತನಕ ಹುಡುಗರು ಸಹಿಸಿಕೊಂಡಿರಬೇಕು : ನೀರು ಕುಡಿಯುವುದು ಅನಿವಾರ್ಯವಾದರೆ, ಮಹರ್ ಮಕ್ಕಳು ಬಾಯಿಗೆ ಕೈಯೊಡ್ಡಿಕೊಳ್ಳಬೇಕು, ಸವರ್ಣೀಯರ ಮಕ್ಕಳು ಎರಡು ಮೂರು ಅಡಿ ಎತ್ತರದಿಂದ ಲೋಟದ ನೀರು ಸುರಿಯಬೇಕು. ಇಂಥ ಹಲವಾರು ಕ್ರೂರ ಹಿಂಸೆಗಳು ಮತ್ತು ಅವಹೇಳನಕರವಾದ ಅಕೃತ್ಯಗಳು ಬಾಲ ಭೀಮನ ಮನಸ್ಸನ್ನು ಕೊರೆಯುತ್ತಿದ್ದುದಲ್ಲದೆ. ಕೋಪದ್ವೇಷಗಳ ಜ್ವಾಲೆಯನ್ನು ಭುಗಿಲುಗೊಳಿಸುತ್ತಿದ್ದವು ; ಧೈರ್ಯೋತ್ಸಾಹಗಳನ್ನು ಪುಟಗೊಳಿಸುತ್ತಿದ್ದುವು. ಬಡವನ ಕೋಪ ದವಡೆಗೆ ಮೃತ್ಯುವೆಂಬುದನ್ನರಿತಿದ್ದುದರಿಂದ ಅವನು ತತ್ಕಾಲ ದಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸದೆ, ಪ್ರತಿಭಟನೆ ತೋರಿಸದೆ ತೆಪ್ಪಗಿರಬೇಕಿತ್ತು. ಅವನು ದೊಡ್ಡವನಾಗುತ್ತಿದ್ದಂತೆಲ್ಲ ಸವರ್ಣೀಯರ ವಿರುದ್ಧವಾಗಿ ಕ್ರೌರ್ಯ ಶಾಠ್ಯಗಳು ಹೆಡೆಯೆತ್ತುತ್ತಿದ್ದುವೆ. ಅದಕ್ಕೆ ಸಮಾಜ ಹೊಣೆಯೇ ಹೊರತು, ಅವನಲ್ಲ.

ಅವನು ಬಳಗದಿಂದ ಹೊರಗೆ ತನ್ನ ಮತ್ತು ತನ್ನಂಥ ಮಕ್ಕಳ ಬಗೆಗೆ ಮರುಕ ಕರುಣೆಗಳನ್ನೇ ಕಾಣದವನಾದನು. ಇಂಥ ಸನ್ನಿವೇಶದಲ್ಲಿ ತನ್ನ ಬಗೆಗೆ ಸಹಾನುಭೂತಿಯನ್ನು ತೋರುತ್ತಿದ್ದ ಅಪರೂಪ ವ್ಯಕ್ತಿಗಳನ್ನು ಕಂಡಾಗ ಹೃದಯ ಕೃತಜ್ಞತೆಯಿಂದ ತುಂಬಿ ತುಳುಕುತ್ತಿದ್ದುದರಲ್ಲಿ ಆಶ್ಚರ್ಯವಿಲ್ಲ.

ಈ ಸಂದರ್ಭದಲ್ಲಿ ಬ್ರಾಹ್ಮಣ ಮಾಸ್ತರನೊಬ್ಬನ ಔದಾರ್ಯ ಉಲ್ಲೇಖ ನೀಯವಾದದ್ದು. ಅಂಬೇಡ್ಕರ್ ಅವನ ಹೆಸರು. ಅಂಬಾವಾಡೆಕರ್ ಎಂಬ

ಭೀಮನ ಪ್ರತಿನಾಮವನ್ನು ಅಂಬೇಡ್ಕರ್ ಎಂದು ಶಾಲೆಯ ದಾಖಲೆಗಳಲ್ಲಿ ತಿದ್ದಿದವನೂ ಅವನೇ. ಅವನು ಭೀಮನನ್ನು ಮನಸಾರೆ ಪ್ರೀತಿಸುತ್ತಿದ್ದನು. ಅವನು ತರುತ್ತಿದ್ದ ತಿಂಡಿಯಲ್ಲೊಂದು ಪಾಲು ಭೀಮನಿಗೆ ಸಲ್ಲುತ್ತಿತ್ತು. ಉದಾರಶೀಲನಾದ ಆ ಮಾಸ್ತರನಲ್ಲೊಂದು ದೌರ್ಬಲ್ಯವಿತ್ತು. ಶಾಲೆಯ ಸನಿಹದಲ್ಲಿದ್ದ ಹೊಗೆಸೊಪ್ಪಿನಂಗಡಿಯಲ್ಲಿ ಅವನು ಒಪ್ಪೊತ್ತಿನ ಕಾರಕೂನನಾಗಿ ಕೆಲಸ ಮಾಡುತ್ತಿದ್ದನು. ಶಾಲೆಯ ವೇಳೆಯಲ್ಲಿಯೇ ತರಗತಿಯ ನಿರ್ವಹಣೆಯನ್ನು ಬೆಳೆದ ಹುಡುಗನೊಬ್ಬನಿಗೊಪ್ಪಿಸಿ ಅಂಗಡಿಗೆ ಜಾರಿಕೊಳ್ಳುತ್ತಿದ್ದನು. ಆದರೆ ಅವನು ಮಾಡಿದಷ್ಟು ಪಾಠ ಅಚ್ಚುಕಟ್ಟಾಗಿರುತ್ತಿತ್ತು.

ಹೀಗೆ ಜೀವನದ ಕಟುವಾಸ್ತವತೆಯು ಅನುಭವವಾದಂತೆಲ್ಲ ಅವನ ಮನಸ್ಸು ಕಲಕಿ ಹೋಗುತ್ತಿತ್ತು: ಅವುಗಳನ್ನು ನೆನೆಯುತ್ತ ನೆನೆಯುತ್ತ ಅವನು ಅಂತರ್ಮುಖಿಯಾಗುತ್ತಿದ್ದನು. ಓದು ಬರಹಗಳ ಕಡೆಗಾಗಲೀ, ಆಟಪಾಟಗಳ ಕಡೆಗಾಗಲೀ ಅವನ ಗಮನ ಹರಿಯುತ್ತಿರಲಿಲ್ಲ. ತೋಟಗಾರಿಕೆಯಲ್ಲಾಗಲೀ, ದನಕುರಿ ಸಾಕಣಿಕೆಯಲ್ಲಾಗಲೀ ಅವನು ತೋರಿಸುತ್ತಿದ್ದ ಆಸಕ್ತಿ ಪಾಠದಲ್ಲಿರಲಿಲ್ಲ. ಅವನ ಈ ವರ್ತನೆಯಿಂದಾಗಿ ಸೋದರತ್ತೆ ತುಂಬ ವ್ಯಥೆಗೊಳ್ಳುತ್ತಿದ್ದಳು. ಮೊದಲೇ ಗಾಯಗೊಂಡಿದ್ದ ಮನಸ್ಸಿನ ಮೇಲೆ ಬರೆ ಎಳೆದಂತೆ, ತಂದೆ ಎರಡನೆಯ ಮದುವೆ ಮಾಡಿಕೊಂಡರು. ತನ್ನ ತಾಯಿಯ ಆಭರಣಗಳನ್ನು ತೊಟ್ಟುಕೊಂಡ ಮಲತಾಯಿಯನ್ನು ಕಂಡಾಗ ಭೀಮನ ಕರುಳಿರಿದಂತಾಗುತ್ತಿತ್ತು. ಬುದ್ಧಿ ತಲೆಕೆಳಗಾದಂತೆ ತೋರುತ್ತಿತ್ತು. ತನ್ನ ತಾಯಿಯನ್ನು ಬಹುವಾಗಿ ಪ್ರೀತಿಸುತ್ತಿದ್ದ, ಭಕ್ತಿಯೇ ಸಾಕಾರಗೊಂಡಂತಿದ್ದ, ಸಜ್ಜನನೆಂದು ಕರೆಯಿಸಿಕೊಳ್ಳುತ್ತಿದ್ದ ತಂದೆಯ ವರ್ತನೆ ಅವನನ್ನು ಬಾಧಿಸತೊಡಗಿತು. ಶಕ್ತಿಗುಂದುತ್ತಿದ್ದ ತಂಗಿಯಿಂದ ಸಂಸಾರ ನಿರ್ವಹಣೆ ಕಷ್ಟವೆಂದು ಕಂಡುಬಂದದ್ದರಿಂದ, ಅವಳಿಗೆ ನೆರವು ನೀಡುವ ಸಲುವಾಗಿ ತಾನು ಮತ್ತೆ ಮದುವೆಯಾದದ್ದೆಂದು ತಂದೆ ನೆಪ ಹೇಳುತ್ತಿದ್ದರು. ಇನ್ನುಮೇಲೆ ಸ್ವತಂತ್ರವಾಗಿ ಸಂಪಾದಿಸಿ ಸ್ವಾವಲಂಬಿಯಾಗಿ ಬಾಳಬೇಕೆಂಬ ಚಿಂತೆ ಭೀಮನನ್ನು ಕಾಡಲಾರಂಭಿಸಿತು. ಅವನಾಗ ಪ್ರೌಢಶಾಲೆಯ ಎರಡನೆಯ ತರಗತಿಯಲ್ಲಿದ್ದನು. ಮುಂಬಯಿಯ ಮಿಲ್ಲುಗಳಲ್ಲಿ ಸಲೀಸಾಗಿ ನೌಕರಿ ಸಿಗುತ್ತದೆಂಬ ಸಂಗತಿಯನ್ನು ಸೋದರಿಯರ ಮತ್ತು ಗೆಳೆಯರ ಬಾಯಿಂದ ಕೇಳಿ ತಿಳಿದಿದ್ದನು. ಅವನ ಬಾಳಿನಲ್ಲಿ ಹೊಸ ಆಸೆಯೊಂದು ಪಲ್ಲವಿಸಿತು. ಕೇಳಿದರೆ ತಂದೆಯಾಗಲೀ, ಸೋದರತ್ತೆಯಾಗಲೀ ಅನುಮತಿ

ನೀಡುವುದಿಲ್ಲವೆಂಬ ವಿಷಯ ಅವನಿಗೆ ತಿಳಿದಿತ್ತು. ಹೇಳದೆ ಕೇಳದೆ ಓಡಿ ಹೋಗುವುದೆಂದರೆ ದಾರಿ ಖರ್ಚಿಗೆ ದುಡ್ಡುಬೇಕು. ಸಾಮಾನ್ಯವಾಗಿ ಆ ವಯಸ್ಸಿನ ಎಲ್ಲ ಮಕ್ಕಳಿಗೂ ಹೊಳೆಯುವ ಹುನಾರು ಅವನಿಗೂ ಹೊಳೆಯಿತು. ತನ್ನ ಸೋದರತ್ತೆಯ ಚೀಲದಲ್ಲಿ ಸಾಕಷ್ಟು ಹಣವಿರಬೇಕೆಂಬ ಗುಮಾನಿ ಅವನ ಮನಸ್ಸಿನಲ್ಲಿ ಮೊಳೆಯಿತು. ಉಡಿಗೆ ಸಿಕ್ಕಿಸಿಕೊಂಡಿದ್ದ ಅವಳ ಚೀಲ ಕದಿಯಲು ಎರಡು ಮೂರು ರಾತ್ರಿ ಅವನು ಪ್ರಯತ್ನಿಸಿದ. ನಾಲ್ಕನೆಯ ರಾತ್ರಿ ಕದಿಯುವುದರಲ್ಲಿ ಸಫಲನಾಗಿ, ಅದರೊಳಗೆ ಅರ್ಧಾಣೆ ಮಾತ್ರ ಕೈಗೆ ಸಿಗಲಾಗಿ, ನಿರಾಶೆಯಿಂದ ಸಂತಪ್ತನಾದ. ಅಂಥ ಹೇಯ ಕಾರ್ಯಕ್ಕೆ ಮನಸ ಮೊಲಿದದ್ದಕ್ಕಾಗಿ ಅವನು ವ್ಯಾಕುಲ ಚಿತ್ತನಾದ. ಅನಂತರ ಹಗಲು ಗನಸು ತೊರೆದು, ವ್ಯಾಸಂಗದಲ್ಲಿ ತಲ್ಲೀನನಾದ.

ತಾವು ದುಡಿಯುತ್ತಿದ್ದ ಉದ್ಯೋಗ ಕೊನೆಗೊಂಡದ್ದರಿಂದ ರಾಮ್‌ಜಿ ಸಕ್ಪಾಲರು ಸತಾರೆಯಿಂದ ಮುಂಬಯಿಗೆ ಸಂಸಾರ ಸಮೇತ ವಲಸೆ ಹೋಗಬೇಕಾಯಿತು. ಮುಂಬಯಿ ನಗರದ ಜೀವನ ಕಷ್ಟಕರವಾದರೂ ತಮ್ಮ ಮಕ್ಕಳ ವ್ಯಾಸಂಗ ನಿರ್ವಿಘ್ನವಾಗಿ ಮುಂದುವರಿಯುವುದೆಂಬ ಆಸೆಯೇ ಅವರನ್ನಲ್ಲಿಗೆ ಎಳೆದುತಂದಿತ್ತು. ಕೆಳ ಪರೇಲಿನ ದಬಕ್ ಚಾಲಿನಲ್ಲೊಂದು ಸಣ್ಣ ಕೋಣೆಯನ್ನು ಬಾಡಿಗೆಗೆ ಹಿಡಿದು, ಸಂಸಾರ ಹೂಡಿದರು. ಅದೊಂದು ಕೋಣೆಯೇ ಅವರಿಗೆ ಎಲ್ಲವಾಗಿತ್ತು. ಯಾವಾಗಲೂ ಎಲ್ಲ ಸಾಮಾನುಗಳಿಗೂ ಹೊಗೆಯ ಮಸಿ ಕಟ್ಟಿಕೊಂಡಿರುತ್ತಿತ್ತು. ಸಾಮಾನುಗಳು ಇಡಿಕಿರಿದಿದ್ದುದರಿಂದ ವರ್ಷ ಗಟ್ಟಳೆ ದುಂಬು ಹೊಡೆಯುವಂತಿರಲಿಲ್ಲ. ಈ ಇಕ್ಕಟ್ಟಿನಲ್ಲಿ ಭೀಮ ಓದಿಕೊಳ್ಳುವುದೆಂತು? ತಮ್ಮ ಮಕ್ಕಳಲ್ಲೆಲ್ಲ ಭೀಮ ಮೇಧಾವಿಯೆಂಬ, ಹಾಗೂ ಕಷ್ಟಸಹಿಷ್ಣುವೆಂಬ ಭಾವನೆ ರಾಮ್‌ಜೀಯವರ ಅನುಭವಕ್ಕೆ ಬಂದಿತ್ತು. ಅವನ ವ್ಯಾಸಂಗಾನುರಕ್ತಿ ತಂದೆಯ ಮನಸ್ಸನ್ನು ಪ್ರಸನ್ನಗೊಳಿಸಿತ್ತು. ಅವನ ಅಧ್ಯಯನಕ್ಕಾಗಿ ವರಿಷ್ಠ ಸೌಲಭ್ಯಗಳನ್ನೊದಗಿಸುವಲ್ಲಿ ಅವರು ಎಂಥ ತ್ಯಾಗಕ್ಕಾದರೂ ಸಿದ್ಧರಾಗಿದ್ದರು. ಆದರೂ ಸ್ಥಿತಿವಂತರ ಮನೆಯ ಸೌಲಭ್ಯಗಳು ದೊರಕುವುದು ಸಾಧ್ಯವೆ? ರಾತ್ರಿಯವೇಳೆ ಮಗ ಬಹುಬೇಗನೆ ಮಲಗಿಬಿಡುತ್ತಿದ್ದ. ಅವನ ತಲೆದೆಸೆಯಲ್ಲಿ ಬೀಸುವ ಕಲ್ಲೊಂದನ್ನು ಗೋಡೆಗೊರಗಿಸಿಡಲಾಗುತ್ತಿತ್ತು. ಕಾಲ್ದೆಸೆಯಲ್ಲೊಂದು ಆಡು ಕೆಡೆದಿರುತ್ತಿತ್ತು. ತಂದೆ ಎರಡು ಗಂಟೆಯ ತನಕ ಕುಳಿತಿದ್ದು, ಮಗನನ್ನೆಬ್ಬಿಸಿ ಮಲಗುತ್ತಿದ್ದರು. ಭೀಮ ಸೀಮೆಯೆಣ್ಣೆಯ ಬುಡ್ಡಿಯ ಮುಂದೆ ಕುಳಿತು ಬೆಳಗಾಗುವ ತನಕ ಓದು

ತ್ತಿದ್ದನು. ಬೆಳಕು ಹರಿದನಂತರ ತುಸುಹೊತ್ತು ಹಾಸುಗೆಯ ಮೇಲೆ ಹೊರಳಿಕೊಂಡಿದ್ದು, ಎದ್ದು, ಪ್ರಾತಃಕರ್ಮಗಳನ್ನು ಮುಗಿಸಿ ಶಾಲೆಯ ಕಡೆಗೆ ಓಡುತ್ತಿದ್ದನು. ಸಂಜೆಯೋ ಹೊತ್ತಾರೆಯೋ ತುಸು ಹೊತ್ತು ತಂದೆ ಅವನಿಗೆ ಇಂಗ್ಲಿಷ್ ಹೇಳಿಕೊಡುತ್ತಿದ್ದರು. ಭಾಷಾಂತರ ಪಾಠಗಳನ್ನು ಅಭ್ಯಾಸಮಾಡಿಸು ತ್ತಿದ್ದರು. ಇದರಿಂದಾಗಿ ಭಾಷಾ ಸಾಮರ್ಥ್ಯದಲ್ಲಿ ಭೀಮ ಓರಗೆಯ ವಿದ್ಯಾರ್ಥಿ ಗಳಿಗಿಂತ ಬಹು ಮುಂದಿದ್ದನು. ಅವನ ಶಬ್ದ ಸಂಪತ್ತು ಅಪಾರವಾಗಿತ್ತು.

ಮುಂಬಯಿ ಸೇರಿದ ಕೂಡಲೆ ಅವನು ಪ್ರವೇಶ ದೊರಕಿಸಿಕೊಂಡದ್ದು ಮನೆಗೆ ಹತ್ತಿರವಾಗಿದ್ದ ಮರಾಠಾ ಪ್ರೌಢಶಾಲೆಯಲ್ಲಿ. ಬಹು ಬೇಗನೆ ಆ ಶಾಲೆಯ ಬಗ್ಗೆ ಅವನಿಗೆ ಜುಗುಪ್ಸೆ ಮೂಡಿತು. ನಗರದ ಮಧ್ಯೆಯಿದ್ದ ಆ ಶಾಲೆಯಲ್ಲಿಯೂ ಹಳ್ಳಿಯ ಸಂಕುಚಿತ ಕ್ರೂರ ವಾತಾವರಣವೇ ಸಂಚು ಹೂಡಿದಂತೆ ತೋರುತ್ತಿತ್ತು. ಬೇರೆ ಭಾಷೆಗಳಲ್ಲಿಲ್ಲದ ಸಂಪತ್ತು ಸಂಸ್ಕೃತ ದಲ್ಲುಂಟೆಂದೂ, ಸಂಸ್ಕೃತ ಕಲಿತದ್ದಾದರೆ ವೇದಾಧ್ಯಯನ ಸಾಧ್ಯವೆಂದೂ ತಂದೆ ಯಿಂದ ಕೇಳಿ ತಿಳಿದುಕೊಂಡಿದ್ದ. ಅದನ್ನು ದ್ವಿತೀಯ ಭಾಷೆಯನ್ನಾಗಿ ಆರಿಸಿ ಕೊಂಡು ಓದಲೆಳಸಿದ. "ಹೊಲೆ ಮುಂಡೆಗಂಡರಿಗೆ ವ್ಯಾಸಂಗಕ್ಕವಕಾಶ ಮಾಡಿ ಕೊಟ್ಟದ್ದೇ ಹೆಚ್ಚು. ಇವಕ್ಕೆ ಸಂಸ್ಕೃತ ಬೇರೆ ಬೇಕಂತೆ" ಎಂದು ಶಾಲು ಪಂಡಿತ ತಿರಸ್ಕಾರದಿಂದ ಭೀಮನ ಮುಖದ ಮೇಲೆ ಬಡಿದಂತೆ ಬಯ್ಗುಳದ ಮಳೆಗರೆದ. ಸಂಜೆ ಮನೆಗೆ ಬಂದ ಭೀಮ ತಂದೆಯಮುಂದೆ ಬಿಕ್ಕಿ ಬಿಕ್ಕಿ ಅತ್ತುಬಿಟ್ಟ. ತಂದೆ ನಿದಾನವಾಗಿ ಅವನನ್ನು ಸಾಂತ್ವನಗೈದು ದುಃಖದ ಕಾರಣ ತಿಳಿದರು. ಶಾಲೆ ಯಲ್ಲಿ ತಾನನುಭವಿಸುತ್ತಿದ್ದ ಕಿರುಕುಳಗಳನ್ನು ಮಗ ಪಟ್ಟಿಮಾಡಿದನು.

"ನಮ್ಮವರು ಹೇಳಿದ ಹಾಗೆ ಉತ್ತಮರು ಕುಣೀಬೇಕಾದ ಕಾಲ ಬರ್‍ತದೆ, ತಾಳು" ಎಂದು ತಂದೆ ತಾಳ್ಮೆಯ ಮಂತ್ರ ಜಪಿಸಿದರು.

"ತಾಳು, ತಾಳು, ತಾಳು. ಸಾವಿರಾರು ವರ್ಷಗಳಿಂದ ತಾಳಿಯಾಯ್ತು. ಬಂದ ಫಲ ಏನು? ನೋಡಪ್ಪ, ನಿನ್ನೆ ತಾನೆ ಮಾಸ್ತರು ಬೋರ್ಡ್ ಮೇಲೆ ಲೆಕ್ಕ ಮಾಡು ಅಂದ್ರು. ಮೇಲೆದ್ದೆ. ಇದ್ದಕ್ಕಿದ್ದಂತೆ, ಏನೋ ವಿಪತ್ತು ಬಂದಂತೆ ಹುಡುಗರೆಲ್ಲ ಎದ್ದು ಬೋರ್ಡಿನ ಬಳಿ ಓಡಿದರು. ನಾನು ಕಕ್ಕಾಬಿಕ್ಕಿಯಾಗಿ ನಿಂತಲ್ಲೆ ನಿಂತೆ. ಬೋರ್ಡಿನ ಹಿಂದೆ ಅವರು ಊಟ ತಿಂಡಿ ಇಟ್ಟಿದ್ರು. ನನ್ನ ಮೈ ಮೇಲಿನ ಗಾಳಿ ಅದರ ಮೇಲೆ ಬೀಸೀತು ಅಂತಲೋ ಏನೋ ತಂತಮ್ಮ ಪೊಟ್ಟಣ ಪೆಟ್ಟಿಗೆಗಳನ್ನು ತೆಕ್ಕೊಂಡು ಹಿಂದಕ್ಕೆ ಬಂದು ಕೂತರು."

"ಆಮೇಲೆ"?

"ಏನು ಮಾಡೋದು ತಿಳೀದೆ ಸುಮ್ನೆ ನಿಂತಿದ್ದೆ. ಮಾಸ್ತರು 'ಭೀಮ, ಮುಂದೆ ಬಾರೊ' ಅಂತ ಕರೆದರು. ನನ್ನ ಚಿಂತೆ ನನಗೆ. ಅವರ ಚಿಂತೆ ಅವರಿಗೆ. ಆದರೂ ಬೋರ್ಡಿನ ಮುಂದೆ ನಿಂತೆ. ತಲೇಲಿದ್ದದ್ದೆಲ್ಲ ಮರೆತು ಹೋಗಿತ್ತು. ಏನೇನೋ ಬರೆದು. ನನ್ನ ಜಾಗಕ್ಕೆ ಬಂದು ಕೂತೆ."

"ಮಾಸ್ತರು ಏನಂದ್ರು?"

"ಅವರೇನಂತಾರೆ. ನನಗಾದ ಅವಮಾನ ಅವರಿಗೆ ಅರ್ಥವಾಗ್ತದೆಯೆ? ಬಡವರ ಕಷ್ಟ ಸಿರಿವಂತರಿಗೆ ಅರ್ಥವಾಗ್ತದೆಯೆ? ಕಾಗೆಗೇನ್ ಗೊತ್ತು, ಎತ್ತಿನ ಬೆನ್ನ ಮೇಲಿನ ಹುಣ್ಣು : ಕಿತ್ತು ತಿನ್ನೋದು ಗೊತ್ತು. ಗೋವಿನ ರಕ್ತ ಕುಡಿಯೋದೊಂದೇ ಗೊತ್ತು ಹುಲೀಗೆ ! 'ಅಯ್ಯೋ ಬೆಪ್ಪೆ. ಇಷ್ಟು ಸುಲಭದ ಲೆಕ್ಕ ಮರೆತಿದ್ದೀಯಲ್ಲೊ ಎಂದ್ರು?' ನಾನು ತುಟಿ ಬಿಚ್ಚಲಿಲ್ಲ."

"ಈಗ ಯಾರ್ನೂ ಮೇಲ್ಹಾಕೋಬೇಡಪ್ಪ. ಸದ್ದು ಮಾಡದೆ ಪರೀಕ್ಷೆ ಪಾಸು ಮಾಡು. ಮುಂದೆ ಒಳ್ಳೇದಾಗ್ತದೆ."

"ನನಗೆ ಹಾಗನ್ನಿಸೋಲ್ಲ. ಉತ್ತಮರು ನಮ್ಮನ್ನ ಮುಂದಕ್ಕೆ ಬಿಡೋಲ್ಲ. ವೇದ ಓದ್ದೋರೆಲ್ಲ ದೇವರ ಸಮ ಅಂತಾರೆ ತಾನೆ. ನಾವು ಓದ್ಬಾರ್ದಂತೆ. ಸಂಸ್ಕೃತ ಕಲೀಬಾರ್ದಂತೆ. ಹೊಲೆಯನಾಗಿಯೇ. ಚಮ್ಮಾರ ಚಮ್ಮಾರನಾಗಿಯೇ ಸಾಯ್ಬೇಕಂತೆ."

"ಸಂಸ್ಕೃತ ಕಲಿತು ಏನಾಗ್ಬೇಕಾಗಿದೆ. ಬಿಡು ತಮ್ಮ. ಇಂಗ್ಲಿಷ್ ಚೆನ್ನಾಗಿ ಕಲಿತುಕೊ. ಮರಾಠಿ ಕಲಿತುಕೊ. ಬ್ರಾಹ್ಮಣರು ಯಾರಿಗೂ ಸಂಸ್ಕೃತ ಕಲಿಸೋಲ್ಲ. ಇಂಗ್ಲಿಷ್ ಮುಂದೆ ಅದು ಯಾವ ಲೆಕ್ಕ? ಮುಂದೆ ಬೇಕಾದ್ರೆ ಅದನ್ನು ಕಲಿತುಕೊಳ್ಳುವಿಯಂತೆ. ಈಗೆಲ್ಲ ಸೈರಿಸಿಕೊಂಡರೆ ಮುಂದೆ ಒಳ್ಳೇದಾಗ್ತದೆ."

"ಯಾವಾಗ ಒಳ್ಳೇದಾಗ್ತದೋ? ಮುಂದಾದ್ರೂ ಸಂಸ್ಕೃತ ಕಲಿ ಕಲಿಯೋದು ಬಿಡೋಲ್ಲ. ಅದನ್ನು ಕಲಿತು, ಅದರಲ್ಲಿರೋದನ್ನ ಅವರಿಗೆ ಕಲಿಸಿದ್ರೆ ಅವರಿಗಾಗ ಬುದ್ಧಿ ಬರ್ತದೆ. ಆಗ್ಲಪ್ಪ, ನೀ ಹೇಳಿದ ಬುದ್ಧಿ ನಾ ಮರೆಯೋಲ್ಲ."

ಭೀಮ ಸಂಸ್ಕೃತಕ್ಕೆ ಬದಲಾಗಿ ಪರ್ಷಿಯನ್ ಭಾಷೆಯನ್ನಾರಿಸಿಕೊಂಡನು. ಮಗನಲ್ಲಿ ವಾಚನಾಭಿರುಚಿ ಹುಟ್ಟಿಸುವ ಸಲುವಾಗಿ ತಂದೆ ಗ್ರಂಥಾಲಯ

ಗಳಿಂದ ಪುಸ್ತಕ ತಂದುಕೊಟ್ಟು ಓದಿಸುತ್ತಿದ್ದರು. ಮಗ ರಜಾ ದಿನಗಳಲ್ಲಿ ಚಾರ್ನಿರಸ್ತೆಯ ಉದ್ಯಾನಕ್ಕೆ ಹೋಗಿ ಓದುತ್ತಿದ್ದನು. ಕಾಲಕ್ರಮೇಣ ಅವನಲ್ಲಿ ವ್ಯಾಸಂಗಾಸಕ್ತಿಯೂ ಜ್ಞಾನದಾಹವೂ ಅಧಿಕವಾಗತೊಡಗಿದವು, ಅವನಿಗೆ ವ್ಯಾಸಂಗಾವಕಾಶ ದೊರೆತದ್ದು ಬಡತನಕ್ಕೆ ಮೃಷ್ಟಾನ್ನವುಣಬಡಿಸಿದಂತಾಯಿತು. ಓದಿದಷ್ಟೂ ಅವನ ಜ್ಞಾನಬಾಕತನ ತೀವ್ರವಾಗತೊಡಗಿತು. ಪುಸ್ತಕಗಳ ಮರೆಯಲ್ಲಿ ಲೋಕದ ಕಾಠಿನ್ಯವನ್ನು ಮರೆಯುವಂತಾಯಿತು. ನಿಸ್ಸಂಗಿಯಾದವನಿಗೆ ಸಂಗ ದೊರೆತಂತಾಯಿತು : ಬಡವನಿಗೆ ಕಡವರ ಕೈಗೆಟುಕಿದಂತಾಯಿತು. ಅವುಗಳೇ ಅವನ ಜೀವನದ ಸಂಗಾತಿಗಳಾದುವು : ಗುರುವಾದುವು : ರಕ್ಷೆಯಾದುವು. ಸರ್ವಸ್ವವಾದುವು. ಸಮಾಜದಲ್ಲಿ ಕಾಣದ ಸ್ನೇಹ ವಾತ್ಸಲ್ಯಗಳನ್ನಲ್ಲಿ ಕಂಡನು. ಬಾಳಿನ ಅರೆಕೊರೆಗಳನ್ನೆಲ್ಲ ಜ್ಞಾನೋಪಾಸನೆಯ ಮೂಲಕ ತುಂಬಿಕೊಂಡನು. ವ್ಯಾಸಂಗ ಚಿಂತನ ಮಂಥನಗಳೇ ಅವನ ಭವಿಷ್ಯಕ್ಕೆ ತಳಹದಿಯಾದುವು : ಓದಿದಂತೆಲ್ಲ ವರ್ತನೆ ಬದಲಾಗತೊಡಗಿತು. ಮಾತುಕತೆ ಗಂಭೀರವಾಗತೊಡಗಿತು. ಕಣ್ಣುಗಳಲ್ಲಿ ವರ್ಚಸ್ಸು ಮುಕ್ಕುಳಿಸತೊಡಗಿತು. ಏರವಲು ಪುಸ್ತಕಗಳಿಂದ ತೃಪ್ತರಾಗದ ತಂದೆ ಸಾಲತಂದೋ ಹೆಂಡತಿ ಮತ್ತು ಹೆಣ್ಣುಮಕ್ಕಳ ಮೈಮೇಲಿನ ಒಡವೆಗಳನ್ನು ಗಿರವಿಯಿಟ್ಟೋ. ಪುಸ್ತಕಗಳನ್ನು ಕೊಂಡುಕೊಡುತ್ತಿದ್ದರು. ತಮಗೆ ಬರುತ್ತಿದ್ದ ಆದಾಯದಿಂದ ಮನೆಯ ಖರ್ಚೂ ಸಹ ತೂಗುತ್ತಿರಲಿಲ್ಲವಾದ್ದರಿಂದ. ಉಳಿದ ಮಕ್ಕಳನ್ನು ಶಾಲೆ ಬಿಡಿಸಿ. ನೌಕರಿಗೆ ಸೇರಿಸಿದರು.

ಮರಾಠಾ ಪ್ರೌಢಶಾಲೆಯ ಪರಿಸರ ತನಗೊಗ್ಗಲಿಲ್ಲವಾದ್ದರಿಂದ ಜತೆಗೆ ಅಲ್ಲಿ ಯಾವ ವಿಧವಾದ ರಿಯಾಯಿತಿಗಳಾಗಲೀ ವಿದ್ಯಾರ್ಥಿ ವೇತನವಾಗಲೀ ದೊರೆಯುತ್ತಿರಲಿಲ್ಲವಾದ್ದರಿಂದ ಭೀಮ ಸರ್ಕಾರ ನಡೆಸುತ್ತಿದ್ದ ಎಲ್ಫಿನ್‌ಸ್ಟನ್ ಹೈಸ್ಕೂಲು ಸೇರಿದನು. ಶಾಲೆ ಮನೆಯಿಂದ ದೂರವಿತ್ತು. ಅಲ್ಲಿಗೆ ನಡೆದೇ ಹೋಗಬೇಕಿತ್ತು. ಮನೆಯಿಂದಲೇ ರೊಟ್ಟಿ ಒಯ್ದು. ವಿರಾಮ ವೇಳೆಯಲ್ಲಿ ತಿಂದು ನೀರು ಕುಡಿಯುತ್ತಿದ್ದನು. ಸರ್ಕಾರಿ ಶಾಲೆಯಲ್ಲಿ ಜಾತಿಭೂತ ಮುಚ್ಚಿದ್ದು ಕುಣಿಯಲಾರದೆಂದುಕೊಂಡಿದ್ದ ಭೀಮನಿಗೆ ಅಲ್ಲಿಯೂ ನಿರಾಶೆಯಾಯಿತು. ಅವುಗಳನ್ನು ಮನಸ್ಸಿಗಂಟಿಸಿಕೊಳ್ಳಬಾರದೆಂದು ನಿಶ್ಚಯಿಸಿ. ಆಟಪಾಟಗಳಲ್ಲಿ ತಲ್ಲೀನನಾದನು. ಹೊಸ ಶಾಲೆ ಸೇರಿದಂದಿನಿಂದ ಕ್ರಿಕೆಟ್ ಮತ್ತು ಫುಟ್‌ಬಾಲ್ ಆಟಗಳಲ್ಲಿ ಆಸಕ್ತಿ ವಹಿಸಿ. ತಂಡಗಳ ನಾಯಕನಾಗಿ ಆಗಾಗ್ಗೆ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದನು.

ಎಲ್ಲಿಯೂ ಫೇಲಾಗದೆ, ಮೆಟ್ರಿಕ್ಯುಲೇಷನ್ನಿನ ಕೊನೆಯ ಹಂತವನ್ನೇರಿದ ಅವನು 1907ರಲ್ಲಿ ನಡೆದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದನು. ಅವನಿಗೆ ಪ್ರಥಮ ದರ್ಜೆ ಗಿಟ್ಟಲಿಲ್ಲ ; ಅದನ್ನವನು ನಿರೀಕ್ಷಿಸಿಯೂ ಇರಲಿಲ್ಲ. ಅವನನು ಭವಿಸುತ್ತಿದ್ದ ಮಾನಸಿಕ ಯಾತನೆಯಲ್ಲಿ, ಅವನಿಗಿದ್ದ ಪ್ರತಿಕೂಲಗಳಲ್ಲಿ ಪಾಸು ಮಾಡಿದ್ದೇ ಹೆಚ್ಚು. ಈಚೀಚೆಗಂತು ಪಠ್ಯೇತರ ಪುಸ್ತಕಗಳ ಗೀಳು ಬಲವಾದದ್ದ ರಿಂದ, ಪಠ್ಯಪುಸ್ತಗಳ ಕಡೆಗೆ ಗಮನಹರಿಸುತ್ತಿರಲಿಲ್ಲ. ತರಗತಿಯಲ್ಲಿ ಕೇಳಿಸಿ ಕೊಂಡ ಪಾಠವಷ್ಟೇ ಅವನಿಗೆ ಸಾಕಾಗಿತ್ತು. ಮಹರ್ ಜಾತಿಯ ಹುಡುಗ ರಲ್ಲಿ ಆ ಮಟ್ಟದವರೆಗೆ ಓದಿದವರೇ ವಿರಳ. ಆ ವರ್ಷಕ್ಕೆಲ್ಲ ಅವನೊಬ್ಬನೇ. ಅವನ ತೇರ್ಗಡೆಯಿಂದಾಗಿ ಬಂಧುಗಳಿಗೆ ಖುಷಿಯಾಯಿತು ; ಜಾತಿಯವರಿಗೆ ಹೆಮ್ಮೆಯಾಯಿತು. ಆದ್ದರಿಂದ ಅವನನ್ನಭಿನಂದಿಸಿ ಪ್ರೋತ್ಸಾಹಿಸುವ ಸಲು ವಾಗಿ ಸುಪ್ರಸಿದ್ಧ ಸಮಾಜ ಸುಧಾರಕರೂ ಸತ್ಯಶೋಧಕ ಚಳುವಳಿಯ ಮುಖಂಡರೂ ಆದ ಎಸ್. ಕೆ. ಬೋಳೆಯವರ ಅಧ್ಯಕ್ಷತೆಯಲ್ಲಿ ಸಭೆ ಏರ್ಪಡಿಸ ಲಾಯಿತು. ಮರಾಠಿ ಲೇಖಕರೂ ಸಮಾಜ ಸುಧಾರಕರೂ ಆದ ಕೃಷ್ಣರಾವ್ ಅರ್ಜುನ ಕೆಲುಸ್ಕರ್ ಅವರು ಆ ಸಂದರ್ಭದಲ್ಲಿ ಮಾತಾಡಿ, ಭೀಮನ ಶ್ರದ್ಧಾ ನಿಷ್ಠೆಗಳನ್ನು ಕೊಂಡಾಡಿದರು. ನಗರದ ಪ್ರೌಢಶಾಲೆಯೊಂದರಲ್ಲಿ ಅಧ್ಯಾಪಕ ರಾಗಿದ್ದ ಅವರು ಆಗಾಗ್ಗೆ ಸಂಜೆಯವೇಳೆ ಚಾರ್ನಿ ರಸ್ತೆಯ ಉದ್ಯಾನದಲ್ಲಿ ಅವನನ್ನು ಸಂಧಿಸುತ್ತಿದ್ದುದಾಗಿಯೂ ಅವನು ತಮ್ಮಿಂದ ಪುಸ್ತಕಗಳನ್ನು ಎರವಲು ಪಡೆದು ಓದುತ್ತಿದ್ದುದಾಗಿಯೂ ತಿಳಿಸಿದರು. ತಮ್ಮ ಮೆಚ್ಚುಗೆಯ ಸಂಕೇತವಾಗಿ ಗೌತಮ ಬುದ್ಧನ ಜೀವನ ಚರಿತ್ರೆಯನ್ನವನಿಗೆ ಬಹುಮಾನವಾಗಿ ನೀಡಿದರು. ಎಷ್ಟೇ ಕಷ್ಟವಾಗಲಿ. ಅವನನ್ನು ಉನ್ನತ ವ್ಯಾಸಂಗಕ್ಕೆ ಕಳಿಸು ವಂತೆ ಸುಭೇದಾರ್ ರಾಮ್‌ಜೀಯವರಿಗೆ ಸಲಹೆ ಮಾಡಿದರು. ವೇದಿಕೆಯ ಮೇಲೆ ಹಿರಿಯರ ಜತೆ ಮಂಡಿಸಿದ್ದ ಮಗನನ್ನು ನೋಡಿದಾಗ, ಅವನ ಬಗೆಗೆ ಅವರ ಬಾಯಿಂದ ಬರುತ್ತಿದ್ದ ಪ್ರಶಂಸೆಯ ಮಾತುಗಳನ್ನು ಕೇಳಿದಾಗ ರಾಮ್‌ಜೀಯವರ ಗುಳಿಬಿದ್ದ ನೇತ್ರಗಳಿಂದ ಆನಂದ ಬಾಷ್ಪ ಹರಿಯುತ್ತಿತ್ತು. ಕಷ್ಟದಲ್ಲಿಯೇ ಹಣ್ಣಾಗಿದ್ದ ತಮ್ಮ ಬಾಳು ಸಾರ್ಥಕವಾಯಿತೆಂದು ಹಿಗ್ಗಿದರು. ಆ ಸಮಾರಂಭದಿಂದ ಭೀಮನ ದೇಹದಲ್ಲಿ ನವಚೈತನ್ಯ ಸಂಚರಿಸಿದಂತಾಯಿತು. ಮನಸ್ಸಿನಲ್ಲೆಲ್ಲ ಆದಮ್ಯ ಧೈರ್ಯೋತ್ಸಾಹಗಳು ವ್ಯಾಪಿಸಿಕೊಂಡಂತಾಯಿತು : ಸಾಧನೆಯ ಮೂಲಕ ಗಂತವ್ಯವನ್ನು ಮುಟ್ಟಬಹುದೆಂಬ ಭರವಸೆ ಅವನ ಧಮನಿಗಳಲ್ಲಿ ಅನುರಣನಗೊಂಡಂತಾಯಿತು.

ಹಿಂದಿನ ಕಾಲದಲ್ಲಿ ಬಾಲ್ಯ ವಿವಾಹ ಸಾರ್ವತ್ರಿಕ ಸಂಪ್ರದಾಯವಾಗಿತ್ತು. ಹೆಣ್ಣುಗಳನ್ನು ಕಂಕುಳಲ್ಲೆತ್ತಿಕೊಂಡು ಧಾರೆ ಎರೆಯುತ್ತಿದ್ದುದುಂಟು. ಕೆಲವರಂತು ತೊಟ್ಟಿಲಿಗೆ ಮದುವೆ ಮಾಡಿಸುತ್ತಿದ್ದರು. ಪ್ರೌಢ ಶಾಲೆಯನ್ನು ದಾಟಿದಾಗ ಭೀಮರಾವ್ ರಾಮ್‌ಜೀ ಅಂಬೇಡ್ಕರ್ ಅವರಿಗೆ ಹದಿನೇಳು ವರ್ಷ : ಲೆಕ್ಕಾಚಾರದಂತೆ ಮದುವೆಗೆ ಪಕ್ವವಾದ ವಯಸ್ಸು. ತಂದೆಯ ಮೂಲಕ ಮದುವೆಯ ಸುದ್ದಿ ಕಿವಿದೆರೆಯನ್ನು ತಾಕಿದಾಗ ಭೀಮ್‌ಜಿಯ ಮನಸ್ಸು ಇಬ್ಬಗಿಯಾದದ್ದೂ ನಿಜ. ತಾನೇ ನಿರುದ್ಯೋಗಿ : ಜತೆಗೆ ಮತ್ತೊಂದು ಜೀವನದ ಸಂರಕ್ಷಣಾ ಭಾರವನ್ನು ಮುಪ್ಪಿನ ತಂದೆಯ ಹೆಗಲ ಮೇಲೆ ಹೊರಿಸಬಾರದೆಂಬ ಚಿಂತೆ ಅವನನ್ನು ಕಾಡತೊಡಗಿತು. ಅವನ ನೆರೆಹೊರೆಯವರೆಲ್ಲ ಕಾರ್ಮಿಕರು. ಅವರ ಸಂಸಾರದ ಬವಣೆಯನ್ನು ಬಲ್ಲವನಾಗಿದ್ದನು. ಇರುಳು ಕಂಡ ಬಾವಿಗೆ ಹಗಲು ಹಾರುವುದು ತರವೆ ಎಂದು ಬಗೆಬಗೆಯಾಗಿ ಆಲೋಚಿಸಿದ. ಆದರೆ ವಿಚಾರಕ್ಕಿಂತ ನಂಬಿಕೆ. ವ್ಯಕ್ತಿಗಿಂತ ಸಮಾಜ ಪ್ರಬಲವಾದದ್ದೆಂಬ ನಿಜವನ್ನರಿಯಲು ಅವನಿಗೆ ಬಹುದಿನ ಬೇಕಾಗಲಿಲ್ಲ. ತನ್ನ ಅಭ್ಯುದಯಕ್ಕಾಗಿ ಸರ್ವತ್ಯಾಗಗಳಿಗೂ ಸಿದ್ಧರಾಗಿದ್ದ. ಲೋಕದಲ್ಲಿ ಏಕೈಕ ಬಂಧುವಾಗಿದ್ದ ತಂದೆಯ ಮಾತನ್ನವನು ಮೀರುವಂತಿರಲಿಲ್ಲ. ಅವನು ಮುಂದಿನ ವ್ಯಾಸಂಗದ ಪ್ರಸ್ತಾಪವೆತ್ತಿದಾಗ, ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಕಾಗಿಲ್ಲವೆಂದು ತಂದೆ ತಳ್ಳಿ ಹಾಕಿದರು.

ಭೀಮಣ್ಣ ವಿದ್ಯಾವಂತನೆಂದು ಬುದ್ಧಿವಂತನೆಂದು ಜಗಜ್ಜಾಹೀರಾಗಿರುವಾಗ ಹೆಣ್ಣು ಹೆತ್ತವರ ನೂಕುನುಗ್ಗಲು ಕೇಳಬೇಕೆ? ಬಂದವರಿಗೆ ಸಮಾಧಾನ ಹೇಳಿಕಳಿಸುವುದೇ ಕಷ್ಟವಾಯಿತು ರಾಮ್‌ಜೀಯವರಿಗೆ. ಕೆಲವು ಮನೆಗಳಿಗೆ ಹೋಗಿ, ಹೆಣ್ಣು ನೋಡಿ, ಅಸಮ್ಮತಿಯನ್ನು ಸೂಚಿಸಿದ್ದು ಉಂಟು. ಹೆಣ್ಣು ನೋಡುವವರು ಯಾರು? ಗಂಡಲ್ಲ. ಗಂಡಿನ ತಂದೆ ತಾಯಿಯರು. ಅವರೊಪ್ಪಿದ ಹುಡುಗಿಯನ್ನು ಗಂಡು ಮದುವೆಯಾಗುವುದು ಅಂದಿನ ಲೋಕರೂಢಿ. ಒಂದು ಕಡೆ ಒಪ್ಪಿಕೊಂಡು ಬಂದ ಹೆಣ್ಣನ್ನು ಪುನರಾಲೋಚನೆಯ ನಂತರ ಮನಸ್ಸಿಗೆ ಹಿಡಿಸದೆ, ಬಿಡಬೇಕಾಗಿ ಬಂದಾಗ. ಜಾತಿ ಪಂಚಾಯಿತಿ ನಡೆದು ಜುಲ್ಮಾನೆ ಸಹ ತೆರಬೇಕಾಯಿತು.

ಸಿರಿವಂತರ ಮನೆಯ ಮದುವೆ ವೈಭವಪೂರ್ಣವಾಗಿ ಅಲಂಕೃತವಾದ ಚಪ್ಪರದಡಿ ಕೊಂಬು ಕಹಳೆ ಗರ್ನಾಲುಗಳ ಸಂಭ್ರಮದ ನಡುವೆ ಜರುಗುತ್ತದೆ. ಮಹರರ ಮದುವೆಗೆ ಮರದ ನೆರಳೋ ಬಂಡೆಯ ಅಥವಾ ಪಾಳುಗೋಡೆಯ

ಆಸರೆಯೋ ಸಿಕ್ಕಿದರೆ ಸಾಕು. ಬೈಕುಲ ಮೀನು ಮಾರುಕಟ್ಟೆಯ ಮೂಲೆ ಯೊಂದರಲ್ಲಿ ಸಂತೆ ಹರಿದ ಬಳಿಕ ರಾತ್ರಿ ಸುತ್ತ ಮುತ್ತ ಹರಿಯುವ ಕೊಚ್ಚೆಯ ನಡುವೆ ಭೀಮ್‌ಜೀಯ ಮದುವೆ ನೆರವೇರಿತು. ಮೀನು ಮಾರುಕಟ್ಟೆಯೆಂದರೆ ಅಲ್ಲಿಯ ಗಲೀಜು ವಾಸನೆಗಳನ್ನು ವರ್ಣಿಸಬೇಕಾಗಿಲ್ಲ. ಬೆಳಗಾಗುವುದರೊಳಗೆ ಮದುವೆಯ ಶಾಸ್ತ್ರಕರ್ಮಗಳೂ ಊಟೋಪಚಾರಗಳೂ ಮುಗಿದುವು. ಭೀಮರಾವ್ ತಂದೆ ತಾಯಿಯರ ನೆಂಟರಿಷ್ಟರ ಹರಕೆ ಹಾರೈಕೆಗಳೊಡನೆ ರಮಾಬಾಯಿಯ ಕೈ ಹಿಡಿದನು : ಕೈ ಹಿಡಿಯುವಾಗ ತನ್ನ ಜನ್ಮೋದ್ದೇಶ ವನ್ನಾಗಲೀ, ತನ್ನ ದಲಿತಜನಾಂಗವನ್ನಾಗಲೀ ಮರೆಯಲಿಲ್ಲ.

ಮಗಳಿಗೆ ತಂದೆ ತಾಯಿಯರಿಟ್ಟ ಹೆಸರು ರಾಮಿ ; ಸೊಸೆಗೆ ಮಾವ ಕೊಟ್ಟ ಹೆಸರು ರಮಾಬಾಯಿ. ಮದುವೆಯಾದಾಗ ಅವಳು ನವವತ್ಸರಗಳ ಬಾಲೆ. ಮದುವೆ ಸಂಸಾರಗಳ ಬಗ್ಗೆ ಏನೂ ಅರಿಯದ, ಅವು ಕೇವಲ ಆಟ ಗಳೆಂದು ತಿಳಿದಿದ್ದ ಸುಶೀಲೆ, ಕೋಮಲೆ. ದಪೋಲಿಯಲ್ಲಿ ಪೋರ್ಟರ್ ಆಗಿದ್ದ ಭಿಕು ವಾಲಾಂಗ್‌ಕರ್ ಎಂಬ ಬಡವನ ಮಗಳು. ಮದುವೆಯಾದಾಗ ತಂದೆಯೂ ಬದುಕಿರಲಿಲ್ಲ. ಕಣ್ಣು ಮೂಗು ನೇರವಾಗಿದ್ದ ಆ ಮುಗ್ಧೆ ಸದ್ಗುಣ ಸಂಪನ್ನೆಯಾಗಿ, ಗಂಡನ ಭಾಗ್ಯಲಕ್ಷ್ಮಿಯಾಗಿ, ಬಲಗಾಲಿಟ್ಟು ಮಾವನ ಮನೆ ಪ್ರವೇಶಿಸಿದಳು.

ಮದುವೆ ಯಾವ ರೀತಿಯಲ್ಲಿಯೂ ಅಂಬೇಡ್ಕರ್ ಅವರ ಮುಂದಿನ ವ್ಯಾಸಂಗಕ್ಕೆ ಅಡ್ಡಿಯಾಗಲಿಲ್ಲ. ಅವರು ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿ ಇಂಟರ್ ಮೀಡಿಯಟ್ ತರಗತಿಗೆ ದಾಖಲಾದರು. ಕಾಲಕಾಲಕ್ಕೆ ಊಟವಿಲ್ಲದೆ ಕೊಳಚೆಯ ಪ್ರದೇಶದಲ್ಲಿ ವಾಸಮಾಡುತ್ತಿದ್ದುದರಿಂದ ಅವರ ಆರೋಗ್ಯ ಕುಸಿದು, ಒಂದು ವರ್ಷ ಓದು ನಿಲ್ಲಿಸಬೇಕಾಯಿತು. ಮುಂದಿನ ವರ್ಷ ಇಂಟರ್‌ಮೀಡಿಯಟ್ ಪರೀಕ್ಷೆ ಮುಗಿಸುವ ಹೊತ್ತಿಗೆ, ತಂದೆಯ ಕೈ ಬರಿದಾಯಿತೆಂದೇ ಹೇಳ ಬಹುದು. ಮಾರಬಹುದಾದ ಅಥವಾ ಗಿರವಿ ಇಡಬಹುದಾದ ಯಾವ ಸಾಮಾನೂ ಮನೆಯಲ್ಲುಳಿದಿರಲಿಲ್ಲ. ಆಗಾಗ್ಗೆ ಅವರ ಷಾಮಕ್ಷೇಮಗಳನು ವಿಚಾರಿಸಿಕೊಳ್ಳುತ್ತಿದ್ದ ಕೆಲೂಸ್ಕರ್ ಅವರಿಗೆ ರಾಮ್‌ಜೀಯವರ ಅಸಹಾಯ ಕತೆ ಅರಿವಾಯಿತು. ಬರೋಡೆಯ ಮಹಾರಾಜ ಸಯ್ಯಾಜಿರಾವ್ ಗಾಯಕ ವಾಡ ಅವರು ಮುಂಬಯಿಯ ಪುರಸಭೆಯಲ್ಲೊಮ್ಮೆ ಮಾತಾಡುತ್ತ, ಯೋಗ್ಯ ರಾದ ನಿಮ್ಮ ವರ್ಗದ ತರುಣರ ಉನ್ನತ ವ್ಯಾಸಂಗಕ್ಕಾಗಿ ತಾವು ದ್ರವ್ಯ

ಸಹಾಯ ಮಾಡುವುದಾಗಿ ಘೋಷಿಸಿದ್ದ ಪ್ರಕಟನೆ ಅವರ ನೆನಪಿನಲ್ಲಿತ್ತು. ಕೆಲೂಸ್ಕರ್ ಅವರು ಮಹಾರಾಜರೊಡನೆ ಸಂಪರ್ಕ ಬೆಳೆಸಿ, ಅಂಬೇಡ್ಕರ್ ಅವರಿಗೆ ಸಂದರ್ಶನಾನುಕೂಲವನ್ನು ಒದಗಿಸಿಕೊಟ್ಟರು. ಅಂಬೇಡ್ಕರ್ ಮಹಾರಾಜರವರ ಪ್ರಶ್ನೆಗಳಿಗೆ ಸೂಕ್ತವಾಗಿ ಉತ್ತರ ನೀಡಿದರು. ಮಹಾರಾಜರು ಕೂಡಲೇ ಇಪ್ಪತ್ತೈದು ರೂಪಾಯಿ ಮಾಸಿಕ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಿದರು.

ಆ ಮಂಜೂರಾತಿಯಿಂದ ಅಂಬೇಡ್ಕರ್ ಅವರ ಭವಿಷ್ಯ ಸ್ಪಷ್ಟವಾದಂತಾಯಿತು. ಅವರು ದ್ವಿಗುಣಿತೋತ್ಸಾಹದಿಂದ ವ್ಯಾಸಂಗದಲ್ಲಿ ಮಗ್ನರಾದರು. ದಲಿತಜನಾಂಗದ ಹಣೆಬರಹವನ್ನು ತಿದ್ದಲಗತ್ಯವಾದ ಯೋಗ್ಯತಾಸಿದ್ಧಿಗಾಗಿ ಬದ್ಧಕಂಕಣರಾದರು. ಸಾವಿರಾರು ವರ್ಷಗಳಿಂದ ತಮ್ಮ ಜನಾಂಗವನ್ನು ಅಧೋಗತಿಗಿಳಿಸಿರುವ ಬುದ್ಧಿಜೀವಿಗಳ ನಡುವೆ ತಲೆಯೆತ್ತಬೇಕಾದರೆ ಅವರಿಗೆ ತಿರುಮಂತ್ರ ತಿದ್ದಬೇಕಾದರೆ ಅವರಿಗಿಂತ ಬುದ್ಧಿವಂತರಾಗಬೇಕೆಂಬುದನ್ನು ಮನಗಂಡರು. ಅವರ ಈ ಪ್ರಯತ್ನದಲ್ಲಿ ಪ್ರಾಧ್ಯಾಪಕ ಮುಲ್ಲರ್ ಅವರು ಶಕ್ತಿಮೀರಿ ಸಹಾಯ ಮಾಡಿದರು. ಪುಸ್ತಕ ಬಟ್ಟೆಗಳನ್ನು ಕೊಂಡು ಕೊಟ್ಟರು ; ನಾನಾವಿಧವಾಗಿ ಮಾರ್ಗದರ್ಶನ ಮಾಡಿದರು. ಆದರೆ ಭಾರತೀಯ ಪ್ರಾಧ್ಯಾಪಕರ ಮತ್ತು ಸವರ್ಣ ಹಿಂದೂ ತರುಣರ ಸಾಂಪ್ರದಾಯಕ ಸಂಕುಚಿತ ಮನೋಭಾವ ಆಗಾಗ್ಗೆ ತನ್ನ ವಿಕಾಟಾಟ್ಟಹಾಸವನ್ನು ಪ್ರದರ್ಶಿಸುತ್ತಿತ್ತು. ಕಾಲೇಜು ಹೋಟಲಿನ ಮಾಣಿಗಳು ಇವರಿಗೆ ನೀರು ಕಾಫಿ ಸಹ ಕೊಡುತ್ತಿರಲಿಲ್ಲ ; ಅಷ್ಟೇ ಅಲ್ಲ, ಅವರು ಆ ಮಾರ್ಗದಲ್ಲಿ ಸುಳಿದದ್ದಾದರೆ, ಆ ಜನ ಅವರನ್ನು ತಿರಸ್ಕಾರ ದೃಷ್ಟಿಯಿಂದ ನೋಡುತ್ತಿದ್ದರು.

ಮಕ್ಕಳು ದೊಡ್ಡವರಾದ್ದರಿಂದ ಮತ್ತು ಮಗನ ವ್ಯಾಸಂಗಕ್ಕೆ ಹೆಚ್ಚು ಅನುಕೂಲ ಕಲ್ಪಿಸುವ ನಿಮಿತ್ತದಿಂದ ಪರೇಲಿನ ನಗರಾಭಿವೃದ್ಧಿ ಮಂಡಲಿಯ ವಠಾರದಲ್ಲಿ ಎರಡು ಕೋಣೆಗಳನ್ನು ಬಾಡಿಗೆಗೆ ತೆಗೆದುಕೊಂಡು, ರಾಮ್‌ಜೀ ತಮ್ಮ ಸಂಸಾರವನ್ನಲ್ಲಿಗೆ ಸಾಗಿಸಿದರು. ಎದುರುಬದುರಿಗಿದ್ದ ಆ ಕೋಣೆಗಳಲ್ಲೊಂದು ದಿವಾನಖಾನೆ, ಅತಿಥಿಗೃಹ ಮತ್ತು ಅಧ್ಯಯನ ಕಕ್ಷ್ಯಗಳ ಆಗತ್ಯತೆಯನ್ನು ಪೂರೈಸುತ್ತಿತ್ತು. ಅಂಬೇಡ್ಕರ್ ಸೋದರರಿಗೆ ಅದೇ ಮಲಗುವ ಕೋಣೆಯಾಗಿತ್ತು. ಆ ಗೌಜುಗದ್ದಲಗಳ ನಡುವೆಯೂ ಅವರ ಓದು ಅವಿಚ್ಛಿನ್ನವಾಗಿ ಸಾಗಿತು. ಅದೇ ಸಮಯದಲ್ಲಿ ಆಂಗ್ಲಸರ್ಕಾರದ

ಕ್ರೌರ್ಯ ದಬ್ಬಾಳಿಕೆಗಳು ಶಾಸನರೂಪದಲ್ಲಿ ಅಭಿವ್ಯಕ್ತಗೊಂಡು ಭೀಕರ ವಾತಾವರಣವನ್ನು ಸೃಷ್ಟಿಸಿದ್ದುವು. ವಾಕ್-ಪತ್ರಿಕಾ-ಸಭಾಸ್ವಾತಂತ್ರ್ಯಗಳು ಕಣ್ಮರೆಯಾದುವು. ತಿಲಕರನ್ನು ಮಾಂಡಲೆಯಲ್ಲಿಯೂ ಸಾವರ್ಕರ್ ಸೋದರರನ್ನು ಅಂಡಮಾನ್ ದ್ವೀಪದಲ್ಲಿಯೂ ಬಂಧನದಲ್ಲಿಡಲಾಯಿತು. ನಾಡಿನಾದ್ಯಂತ ರಾಜಕೀಯ ಮುಖಂಡರನ್ನೂ ಸಂಪಾದಕರನ್ನೂ ದಸ್ತಗಿರಿ ಮಾಡಲಾಯಿತು. ಸ್ವಾತಂತ್ರ್ಯಾಂದೋಲನವನ್ನು ಹತ್ತಿಕ್ಕಲಾಯಿತು. ಅದನ್ನೆಲ್ಲ ನೋಡಿದಾಗ ಅಂಬೇಡ್ಕರ್ ಅವರ ಮನಸ್ಸು ಭಾವ ತುಮುಲದ ರಣರಂಗವಾಯಿತು. ದೇಶಾಭಿಮಾನದ ಕಾವಿನಿಂದ ಕುದಿಯತೊಡಗಿತು. ಅಮಾನುಷ ಕೃತ್ಯಗಳಿಗಾಗಿ ಬಿಳಿಯರನ್ನು ಶಪಿಸಿತು. ಇಂಥ ಅಸ್ತಿಮಿತ ಉದ್ವಿಗ್ನಸ್ಥಿತಿಯಲ್ಲಿ ಅವರ ಪರೀಕ್ಷೆ ಬಂದು ಹೋಯಿತು. 1912ರಲ್ಲಿ ಅವರು ಬಿ.ಎ. ಪದವೀಧರರಾದರು.

ಮಗನ ವಿದ್ಯೆ ನಿರೀಕ್ಷಿತ ಘಟ್ಟ ಮುಟ್ಟಿದುದರಿಂದ ಮುಪ್ಪಿನ ತಂದೆಗೆ ಅತೀವ ಸಂತೋಷವಾಯಿತು. ಪದವಿ ಪಡೆದ ಸಡಗರದಲ್ಲಿ ಮನಸ್ಸು ಹರ್ಷಗೊಂಡರೂ ಜೀವನ ಪರೀಕ್ಷೆಯ ನಿರೀಕ್ಷೆಯ ಜವಾಬ್ದಾರಿ ಮಗನ ಧೈರ್ಯವನ್ನು ಜಗ್ಗಿಸಿತು. ಜಡತನದ ಮನೆಯಲ್ಲಿ ಸೋಮಾರಿಯಾಗಿ ಕಾಲಕಳೆಯುವುದು ಮಹಾಪಾತಕವೆಂಬ ಭಾವನೆ ಅವರನ್ನು ಕುಳಿತಲ್ಲಿ ನಿಂತಲ್ಲಿ ಕೆಣಕುತ್ತಿತ್ತು. ದಲಿತವರ್ಗದ ತರುಣರಲ್ಲಿ ಪದವೀಧರರು ಸಿಗುವುದೇ ಕಷ್ಟ. ಆದರೂ ಅವರಿಗೆ ಉದ್ಯೋಗ ದೊರಕುವಂತಿಲ್ಲ. ಉದ್ಯೋಗ ದೊರಕಿದರೂ ಉತ್ತಮಕುಲದವರ ಸಂಚು ಪೊಂಚುಗಳ ಬಲೆಯಿಂದ ಪಾರಾಗುವಂತಿಲ್ಲ, ಅವರ ಕೋಟಲೆಗಳ ನಡುವೆ ಬದುಕುವಂತಿಲ್ಲ. ಬರೋಡೆಯ ಮಹಾರಾಜ ನಿಮ್ನಜನ ಪಕ್ಷಪಾತಿಯಾದದ್ದರಿಂದ, ಅಲ್ಲಿ ನೌಕರಿ ಸಿಗುವುದಾದರೆ, ತನ್ನ ಬದುಕು ಸುಗಮವಾಗಬಹುದೆಂದು ಆಲೋಚಿಸಿದರು. ಏಕೋ ಏನೋ ಮಗ ಬರೋಡೆಗೆ ಹೋಗುವ ವಿಷಯ ರಾಮ್‌ಜೀಯವರಿಗೆ ಹಿಡಿಸಲಿಲ್ಲ. ಆದರೂ ಮಗ ಅವರಿಗೆ ಸಮಾಧಾನ ಹೇಳಿ, ಅನುಮತಿ ಪಡೆದುಕೊಂಡು, ಉದ್ಯೋಗಾಪೇಕ್ಷಿಯಾಗಿ ಅರ್ಜಿ ಗುಜರಾಯಿಸಿದರು.

ಕೆಲವು ದಿನಗಳಲ್ಲಿಯೇ ನೇಮಕಾತಿಯ ನಿರೂಪ ಅವರ ಕೈಸೇರಿತು. ಹೆಮ್ಮೆಯ ಮಗನನ್ನು ಬೀಳ್ಕೊಳ್ಳುವಾಗ ಶಿಥಿಲದೇಹದ ತಂದೆಯ ಕಣ್ಣುಗಳಿಂದ ಅಶ್ರುವಾರಿ ಉಕ್ಕಿ ಮೊಸೆಗಡ್ಡಗಳ ಮೂಲಕ ಹರಿದು, ಹೊದ್ದಿದ್ದ ತುಂಡು ಪಂಚೆಯನ್ನು ತೊಯ್ದಿತು. ಮುದ್ದು ಮಗನಿಂದ ಅಗಲಲಾರದ

ಸಂಕಟದಿಂದಾಗಿ ಅವರ ಕರುಳು ಕಿತ್ತು ಬಂದಂತಾಯಿತು. ಒತ್ತಿ ಬರುತ್ತಿದ್ದ ದುಗುಡವನ್ನದುಮಿಕೊಂಡು ಗದ್ಗದಿತರಾಗಿ, ಮಡದಿ ಬಂಧುಮಿತ್ರರಿಂದ ಬೀಳ್ಕೊಂಡು ಅಂಬೇಡ್ಕರ್ ಬರೋಡೆ ಸೇರಿದರು. ಹುಟ್ಟಿದಾಗಿನಿಂದ ತಂದೆ ಸೋದರತ್ತೆಯರನ್ನೂ ಸೋದರ ಸೋದರಿಯರನ್ನೂ ಬಿಟ್ಟಲುಗದಿದ್ದುದರಿಂದ ದಾರಿಯುದ್ದಕ್ಕೂ ಅಗಲಿಕೆಯ ವೇದನೆ ಅವರನ್ನು ಕಾಡುತ್ತಿತ್ತು ; ಸೋದರತ್ತೆಯ ಶುಶ್ರೂಷೆಯ ಸ್ಮೃತಿ ಅವರ ಮನಸ್ಸನ್ನು ಕಲಕುತ್ತಿತ್ತು. ಸೈನ್ಯ ಇಲಾಖೆಯಲ್ಲಿ ಲೆಫ್ಟಿನೆಂಟ್ ಆಗಿ ಉದ್ಯೋಗ ಜೀವನವನ್ನಾರಂಭಿದರು. ಕೆಲಸದ ಸಂದಿಯಲ್ಲಿ ಹಗಲು ಹೊತ್ತು ಹೋಗುವುದಾದರೂ, ಇರುಳು ಕಳೆಯುವುದು ಕಷ್ಟವಾಗುತ್ತಿತ್ತು. ಕಣ್ಣು ಮುಚ್ಚಿದ ಕೂಡಲೇ ತಂದೆ ಮುಂದೆ ಬಂದು ನಿಂತಂತೆ, ಕನಸಿನಲ್ಲಿ ಅವರು ಕೈಬೀಸಿ ಕರೆದಂತೆ ಅವರಿಗೆ ಭಾಸವಾಗುತ್ತಿತ್ತು.

ಸಂಸಾರದ ಭಾರದಿಂದ, ವೃದ್ಧಾಪ್ಯದ ಪ್ರಾಘಾತದಿಂದ ಮೊದಲೇ ಸೊರಗಿಹೋಗಿದ್ದ ರಾಮ್‌ಜೀಯವರ ದೇಹ ಪುತ್ರವಿಯೋಗದಿಂದುಂಟಾದ ಮಾನಸಿಕ ಯಾತನೆಯಿಂದ ತೊಟ್ಟು ಕಳಚಿಬೀಳುವ ಹಣ್ಣಿನಂತಾಗಿತ್ತು. ಅಂದು ಹಾಸಿಗೆ ಹಿಡಿದ ಅವರು ಮೇಲೇಳಲೇ ಇಲ್ಲ. ಎಚ್ಚರವಾಗಿದ್ದಾಗಲೆಲ್ಲ ತಮ್ಮ ಜಾತಿಯ ಜನ ಉತ್ತಮವರ್ಣದವರ ಕೈಯಲ್ಲಿ ಅನುಭವಿಸುತ್ತಿದ್ದ ಅನ್ಯಾಯ ಪರಂಪರೆಯ ಘೋರ ನೆನಪಿನ ಧಾಳಿಯಿಂದಾಗಿ ಮನಸ್ಸು ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತೆ ಅದಿರುತ್ತಿತ್ತು. ಆ ಸ್ಮೃತಿಯ ಬೆನ್ನಿನಲ್ಲಿಯೇ ಮಗನ ಭವಿಷ್ಯದ ಬಗೆಗಿನ ಚಿಂತೆ ಚಿತೆಯಂತೆ ವ್ಯಾಪಿಸಿಕೊಂಡು ದೇಹವನ್ನು ದಹಿಸುತ್ತಿತ್ತು. ಕಣ್ಣು ಮುಚ್ಚಿದಾಗಲೆಲ್ಲ 'ಭೀಮ, ಭೀಮ' ಎಂದು ಕನವರಿಸುತ್ತಿದ್ದರು. ಅವರ ಖಾಯಿಲೆ ವೈದ್ಯೋಪಚಾರಕ್ಕೆ ಬಗ್ಗುವಂತಿರಲಿಲ್ಲ. ಮನೆಯವರು ಗಾಬರಿಗೊಂಡು ಅಂಬೇಡ್ಕರ್ ಅವರಿಗೆ ತಂತಿ ಕಳಿಸಿದರು. ಅಂಬೇಡ್ಕರ್ ಅವರು ಬರೋಡೆ ಸೇರಿ ಕೇವಲ ಹದಿನೈದು ದಿನಗಳಾಗಿದ್ದುವು.ಅವರು ಒಡನೆಯೆ ಮುಂಬಯಿಯ ಕಡೆಯ ರೈಲು ಹಿಡಿದರು. ತಂದೆಗಾಗಿ ಹಣ್ಣು ಹಂಪಲನ್ನೂ ಸಿಹಿತಿಂಡಿಯನ್ನೂ ಕಟ್ಟಿಸಿಕೊಳ್ಳುವ ಸಲುವಾಗಿ ಸೂರತ್ ನಿಲ್ದಾಣದಲ್ಲಿಳಿದು ಅಂಗಡಿಯ ಮುಂದೆ ನಿಂತರು. ಅಂಗಡಿಕಾರ ಪೊಟ್ಟಣ ಕಟ್ಟುವಷ್ಟರಲ್ಲಿ ರೈಲು ಸೀಟಿಯೂದುತ್ತ ಹೊಗೆ ಕಾರುತ್ತ ಓಡಿಹೋಯಿತು. ಗತ್ಯಂತರವಿಲ್ಲದೆ ಅವರು ಮುಂದಿನ ರೈಲು ಹಿಡಿದು,

ಮಾರನೆಯ ಬೆಳಗ್ಗೆ ಮುಂಬಯಿ ತಲುಪಿದರು. ಅವರು ಮನೆ ಸೇರುವಾಗ ತಂದೆಯ ಅಸ್ತಮಯ ಸಮಯ ಸನ್ನಿಹಿತವಾಗಿತ್ತು. ಗಂಟಲಿಂದ ಮಾತು ಹೊರಡುತ್ತಿರಲಿಲ್ಲ. ಒಮ್ಮೊಮ್ಮೆ ಅಗಲಗೊಂಡ ಕಣ್ಣು ಹುಡುಕು ನೋಟ ದಿಂದ ಸುತ್ತಮುತ್ತ ಹರಿಯುತ್ತಿದ್ದುವು. ಮಗ ಅವರಬಳಿ ಕುಳಿತು ತಲೆ ನೇವರಿಸಿದಾಗ ,ಸಮಾಧಾನದ ತೆರೆ ಮುಖದ ಸುಕ್ಕುಗಳಲ್ಲಿ ಅಲೆದಂತಾಯಿತು. ಏನೋ ಹೇಳಬೇಕೆಂದು ತುಟಿಬಿಚ್ಚಿದರು. ಆಗಲಿಲ್ಲ. ಮಗನನ್ನು ಹರಸುವ ಸಲುವಾಗಿಯೋ ಏನೋ ಕೈಯೆತ್ತಲು ಯತ್ನಿಸಿದರು. ಆಗಲಿಲ್ಲ. ಕಣ್ಣು ಹಿಗ್ಗಲಿಸಿ, ತೇಲಿಸಿದರು. ಕೋಣೆಯಲ್ಲೆಲ್ಲ ರೋದನ ಪ್ರತಿಧ್ವನಿಸಿತು. ಅಂಬೇಡ್ಕರ್ ಗರಬಡಿದವರಂತೆ ಕುಳಿತರು. ಉರಿಯುವ ಹಸಿಯ ಸೌದೆ ಯಿಂದ ನೀರೊಸರುವಂತೆ ರವಹೀನವಾಗಿ ಅಶ್ರುಧಾರೆ ಹರಿಯುತ್ತಿತ್ತು. 1913ನೆಯ ಸಂವತ್ಸರದ ಫೆಬ್ರುವರಿ ಎರಡನೆಯ ತಾರೀಖು ಅವರ ಜೀವನ ದಲ್ಲಿ ಅತ್ಯಂತ ದಾರುಣವಾದ ಶೋಕದಿನವಾಗಿತ್ತು. ಪ್ರಪಂಚದಲ್ಲಿ ತನಗಿದ್ದ ಏಕಮಾತ್ರ ಆಸರೆ ಕಾಣದ ಕಡಲಲ್ಲಿ ಮುಳುಗಿ ಮಾಯವಾಗಿತ್ತು.

ತಂದೆಯ ಭೌತಿಕ ದೇಹ ಕಣ್ಮರೆಯಾದರೂ ಅವರ ಸ್ಮೃತಿಸಂದೇಶಗಳು ಮಾತ್ರ ಅಂಬೇಡ್ಕರ್ ಅವರ ಅಂತರಂಗದಲ್ಲಿ ಸದಾ ಜಾಗೃತವಾಗಿದ್ದುವು. ತಂದೆಯ ಪ್ರೋತ್ಸಾಹದಿಂದಾಗಿ ಕೆರಳಿದ್ದ ಜ್ಞಾನತೃಷೆ ದಿನೇ ದಿನೇ ವೃದ್ಧಿ ಯಾಗುತ್ತಿತ್ತು. ಭರತ ಖಂಡದ ಒಂದು ಭಾಗವಾಗಿರುವ ಬರೋಡೆಯಲ್ಲಿಯೂ ಹಿಂದುಳಿದ ಜನಾಂಗದ ಸ್ಥಿತಿಗತಿಗಳು, ಉತ್ತಮ ಕುಲದವರ ಚಾಳಿಪಾಳಿಗಳು ಅನುಕೂಲವಾಗಿರಲಿಲ್ಲವೆಂಬ ಸಂಗತಿ ಹದಿನೈದು ದಿನಗಳ ವಾಸ್ತವ್ಯದಿಂದಲೇ ಅವರಿಗೆ ಮನವರಿಕೆಯಾಗಿತ್ತು. ಅಸ್ಪೃಶ್ಯರೆಂಬ ಕಾರಣದಿಂದ ಅವರ ವಾಸಕ್ಕೆ ಬಾಡಿಗೆ ಮನೆಯೂ ಸಿಕ್ಕಿರಲಿಲ್ಲ. ವಿದೇಶಗಳಿಗೆ ಹೋಗಿ ಜಾತಿ ಮತ ವರ್ಣ ದ್ವೇಷಗಳಿಂದ ಕಲುಷಿತಗೊಳ್ಳದ ಮುಕ್ತವಾತಾವರಣದಲ್ಲಿ, ದುರಾಗ್ರಹ ದೂರರೂ ಸತ್ಯಾನ್ವೇಷಿಗಳೂ ವಿಚಾರಪರರೂ ಆದ ಪ್ರಾಧ್ಯಾಪಕರ ಚರಣ ಸನ್ನಿಧಿಯಲ್ಲಿ ಕುಳಿತು ಜ್ಞಾನೋಪಾಸನೆ ನಡೆಸಿದ್ದಾದರೆ, ವಿಶಾಲ ಲೋಕಾನು ಭವವನ್ನು ಸಂಪಾದಿಸಿದ್ದಾದರೆ, ತಮ್ಮಿಂದ ದಲಿತ ಜನಾಂಗದ ಪುನರ್ನಿರ್ಮಾಣ ಕಾರ್ಯ ಸಾಧ್ಯವಾಗಬಹುದೆಂಬ ಕಾತರತೆ ಕೆಲವು ದಿನಗಳಿಂದ ಅವರ ಅಂತರಂಗ ವನ್ನಾವರಿಸಿಕೊಂಡಿತ್ತು. ಸ್ವಾರ್ಥ ಸಾಧನೆ, ಸ್ವಪ್ರತಿಷ್ಠೆಯ ಪ್ರತಿಷ್ಠಾಪನೆ, ದ್ರವ್ಯ ಸಂಚಯ ಅವರ ಉನ್ನತ ವ್ಯಾಸಂಗದ ಗುರಿಯಾಗಿರಲಿಲ್ಲ. ಯೋಗ್ಯ ಸ್ಥಾನಮಾನ

ಗಳನ್ನು ಸಂಪಾದಿಸದಿದ್ದರೆ ತಮ್ಮ ಪ್ರಯತ್ನ ಮರುಭೂಮಿಯ ಕೃಷಿಯಾಗುತ್ತ ದೆಂದೂಅವರು ಬಗೆದಿದ್ದರು. ಅವರ ಅಭೀಷ್ಟೆಯೇ ಬರೋಡೆಯ ಮಹಾರಾಜರ ಇಚ್ಛೆಯಾಯಿತೆಂಬಂತೆ ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ಉನ್ನತ ವ್ಯಾಸಂಗಕ್ಕಾಗಿ ಹೋಗುವ ವಿದ್ಯಾರ್ಥಿಗಳಿಗೆ ವೇತನ ನೀಡುವುದಾಗಿ ಸರ್ಕಾರಿ ಆಜ್ಞೆಯೊಂದು ಪ್ರಕಟವಾಗಿತ್ತು. ಅಂಬೇಡ್ಕರ್ ಅವರು ಮುಂಬಯಿಯ ಅರಮನೆಯಲ್ಲಿ ಮಹಾರಾಜರನ್ನು ಭೇಟಿಮಾಡಿ, ತಮ್ಮ ಆಶೆಯನ್ನು ತೋಡಿ ಕೊಂಡರು. ಅವರಿಗೆ ವಿದ್ಯಾರ್ಥಿವೇತನ ಕೊಡಿಸಿಕೊಡುವುದಾಗಿ ಮಹಾರಾಜರು ವಾಗ್ದಾನ ಮಾಡಿದರು.

ವಿದ್ಯಾರ್ಥಿವೇತನ ಬೇಷರತ್ತಾಗಿ ದೊರಕುವಂತಿರಲಿಲ್ಲ. ನಿರ್ದಿಷ್ಟ ವಿಷಯದಲ್ಲಿ ವ್ಯಾಸಂಗ ಮುಂದುವರಿಸಬೇಕೆಂದೂ, ಗೊತ್ತಾದ ಅವಧಿಯೊಳ ಗಾಗಿ ವ್ಯಾಸಂಗವನ್ನು ಯಶಸ್ವಿಯಾಗಿ ಮುಕ್ತಾಯಗೊಳಿಸಿ ತಾಯ್ನಾಡಿಗೆ ಮರಳಬೇಕೆಂದೂ, ಹಿಂದಿರುಗಿದನಂತರ ಹತ್ತು ವರ್ಷ ಸರ್ಕಾರದಲ್ಲಿ ಸೇವೆ ಸಲ್ಲಿಸಬೇಕೆಂದೂ ಶರತ್ತುಗಳನ್ನು ವಿಧಿಸಲಾಗಿತ್ತು. 1913ರ ಜೂನ್ 4ರಂದು ಅಂಬೇಡ್ಕರ್ ಬರೋಡೆಗೆ ಹೋಗಿ ಉಪಮಂತ್ರಿಯ ಮುಂದೆ ಮುಚ್ಚಳಿಕೆ ಬರೆದು, ಸಹಿಮಾಡಿಕೊಟ್ಟರು. ವಿದೇಶ ಯಾತ್ರಾಲಾಭ ಆಗಿನ ಕಾಲದ ಅಸ್ಪೃಶ್ಯ ವಿದ್ಯಾರ್ಥಿಯ ಜೀವನದಲ್ಲಿ ಸಾಹಸಮಯ ಮಹದ್ಘಟನೆಯಾಗಿತ್ತು !

ಪ್ರಯಾಣಕ್ಕೆ ಅಣಿ ಮಾಡಿಕೊಳ್ಳುತ್ತಿದ್ದಂತೆಯೇ ಅಂಬೇಡ್ಕರ್ ಅವರು ಮಡದಿಯ ಬಗೆಗೆ ಚಿಂತಾಕುಲರಾದರು. ಏನೂ ಅರಿಯದ ಎಳೆ ವಯಸ್ಸಿನ ಹೆಣ್ಣಿನೆದೆಯ ದನಿ ಅವರ ಅಂತರಂಗವನ್ನು ಕಲಕುತ್ತಿತ್ತು. ಅವಳಿಗೆ ದಲಿತ ಜನದ ಸಮಸ್ಯೆಯಾಗಲೀ, ಪಾಶ್ಚಾತ್ಯ ವಿದ್ಯೆಯ ಪ್ರಯೋಜನವಾಗಲೀ, ಪತಿಯ ಮಹತ್ವಾಕಾಂಕ್ಷೆಯಾಗಲೀ ಅರ್ಥವಾಗುವುದೆಂತು ? ಪತಿ ಆ ವಿಷಯ ವನ್ನು ಸತಿಯ ಮುಂದೆ ಪ್ರಸ್ತಾಪಿಸಿ, ಅವಳಿಗರ್ಥವಾಗುವಂತೆ ವಿದೇಶ ಯಾತ್ರೆಯ ಉದ್ದೇಶವನ್ನು ತಿಳಿಸಿ, ಅವಳ ಒಪ್ಪಿಗೆಯನ್ನು ಪಡೆದುಕೊಂಡರು.

# ೨. ವಿಕಾಸ

1913ರ ಜುಲೈ ಮೂರನೆಯ ವಾರ ಅಂಬೇಡ್ಕರ್ ನ್ಯೂಯಾರ್ಕ್ ನಗರ ಸೇರಿದರು. ಅಲ್ಲಿಯ ವಿಶ್ವವಿದ್ಯಾಲಯದ ವಿದ್ಯಾರ್ಥಿ ನಿಲಯದಲ್ಲವರು ಒಂದು ವಾರದ ತನಕ ತಂಗಿದರು. ಅವರಿಗೆ ಅಲ್ಲಿಯ ಊಟ ಹಿಡಿಸುತ್ತಿರಲಿಲ್ಲ. ಜತೆಗೆ ಪಾಶ್ಚಾತ್ಯರ ಆಹಾರದಲ್ಲಿ ದನದ ಮಾಂಸ ವಿಶೇಷವಾಗಿರುತ್ತಿದ್ದುದರಿಂದ ಅದನ್ನು ನೋಡಿದ ಕೂಡಲೇ ಅಬ್ಬಳಿಕೆ ಬಂದಂತಾಗುತ್ತಿತ್ತು. ಭಾರತೀಯ ವಿದ್ಯಾರ್ಥಿಗಳಿದ್ದ ಕಾಸ್ಮಾಪಾಲಿಟನ್ ಕ್ಲಬ್ಬಿನ ಊಟ ಹಿಡಿಸಬಹುದೆಂಬ ಕಾರಣದಿಂದ ಅವರಲ್ಲಿಗೆ ತಮ್ಮ ವಾಸ್ತವ್ಯವನ್ನು ಬದಲಾಯಿಸಿದರು. ಅನಂತರ ಅವರು ಲಿವಿಂಗ್‌ಸ್ಟನ್ ಹಾಸ್ಟಲಿನಲ್ಲಿ ನವಲ್ ಭಾತೇನ ಎಂಬ ಪಾರ್ಸಿ ವಿದ್ಯಾರ್ಥಿ ಜತೆ ಬಿಡಾರ ಹೂಡಿದರು.

ಅಮೆರಿಕೆಯ ನೆಲದಲ್ಲಿ ಕಾಲಿರಿಸಿದಕೂಡಲೇ ಹೊಸದಾಗಿ ಮಾನವ ಜನ್ಮವೆತ್ತಿದಂತೆ, ಮುಕ್ತ ವಾತಾವರಣದಲ್ಲಿ ಹಕ್ಕಿಯಂತೆ ಹಾರಾಡುತ್ತಿದ್ದಂತೆ, ತಮ್ಮ ರಕ್ತದಲ್ಲಿ ಹೊಸ ಹುರುಪು ಹುಮ್ಮಸ್ಸುಗಳು ಚಿಮ್ಮಿದಂತೆ ಅನುಭವವಾಗಿ ಅವರು ಕುಣಿದಾಡಿದರು. ಜಾತಿ ಮತಗಳ, ವಿಧಿ ನಿಷೇಧಗಳ ಕಟ್ಟುಪಾಡಿಲ್ಲದ, ಮನು ಸಂತಾನರ ಕ್ರೌರ್ಯ ದ್ವೇಷಗಳಿಲ್ಲದ, ನೂತನ ಸನ್ನಿವೇಶದಲ್ಲಿ ಜ್ಞಾನದ ಪಾರಾವಾರವನ್ನೀಸುವ, ಕುಡಿಯುವ, ನೆಗೆಯುವ ಸಾಮರ್ಥ್ಯ ಒಮ್ಮಿಂದೊಮ್ಮೆಗೆ ಅವರ ವಶವಾದಂತೆ ಭಾಸವಾಯಿತು. ವಿದ್ಯಾರ್ಥಿನಿಲಯದ ಪಾಕಶಾಲೆ ಭೋಜನಶಾಲೆ ಸ್ನಾನಗೃಹಗಳಲ್ಲಿ ಎಲ್ಲೆಂದರಲ್ಲಿ ಅಳುಕಿಲ್ಲದೆ

ತಿರುಗಾಡಬಹುದಿತ್ತು : ಪಾತ್ರೆ ಪರಡಿಗಳನ್ನು ಮುಟ್ಟಬಹುದಿತ್ತು ; ಹೋಟಲಿನಲ್ಲಿ ಯಾರೂ ಸಂದೇಹ ತಿರಸ್ಕಾರಗಳಿಂದ ಅವರನ್ನು ನೋಡುತ್ತಿರಲಿಲ್ಲ; ಕಾಲೇಜಿನಲ್ಲಿ ದೈನ್ಯಭಾವವನ್ನುಳಿದು ವಿದ್ಯಾರ್ಥಿಗಳೊಡನೆ ಸಮಾನತೆಯಿಂದ ಬೆರೆಯುಬಹುದಿತ್ತು ; ತಾವು ಅಸ್ಪೃಶ್ಯರೆಂಬ ಭಾವನೆ ಪೂರ್ವಜನ್ಮದ ಕೆಟ್ಟ ಕನಸೆಂಬಂತೆ ತೋರುತ್ತಿತ್ತು. "ಮಾತಾ ಪಿತೃಗಳು ಮಕ್ಕಳ ಜನ್ಮದಾತರಾದರೆ ಸಾಲದು, ಅವರ ಭಾಗ್ಯವನ್ನು ರೂಪಿಸುವ ರೂವಾರಿಗಳೂ ಆಗಬೇಕು. ಗಂಡುಮಕ್ಕಳಿಗೆ ಮಾತ್ರವಲ್ಲ, ಹೆಣ್ಣುಮಕ್ಕಳಿಗೂ ಸೂಕ್ತ ಶಿಕ್ಷಣ ನೀಡುವುದಾದರೆ, ಮುಂದೆ ಒಳ್ಳೆಯ ದಿನಗಳನ್ನು ಕಾಣಬಹುದೆಂಬ ನಂಬಿಕೆ ನನಗಿದೆ" ಎಂದು ಅಮೆರಿಕೆಗೆ ಹೋದ ತರುಣದಲ್ಲಿ ಅವರು ತಮ್ಮ ತಂದೆಯ ಗೆಳೆಯರೊಬ್ಬರಿಗೆ ಬರೆದ ಪತ್ರದಲ್ಲಿ ಅವರ ಜೀವನೋದ್ದೇಶ ಸ್ಪಷ್ಟವಾಗುತ್ತದೆ. ಹಣೆಬರಹವನ್ನು ನಂಬಿ, ಆತ್ಮ ಗೌರವವನ್ನು ಮರೆತು, ಅಸಹಾಯಕತೆಯ ನಿರಾಶೆಯಿಂದ ಕೈಕಟ್ಟಿಕೊಂಡು ಕುಳಿತದರೆ ದಲಿತ ಜನಾಂಗಕ್ಕೆ ಮೋಕ್ಷವಿಲ್ಲವೆಂಬುದನ್ನವರು ಬಹು ಬೇಗನೆ ಅರಿತುಕೊಂಡರು. ಏಬ್ರಹಾಮ್ ಲಿಂಕನ್ನನ ನಾಡಿನಲ್ಲಿ, ಬೂಕರ್ ಟಿ. ವಾಷಿಂಗ್‌ಟನ್ನನ ಕಾರ್ಯಕ್ಷೇತ್ರದಲ್ಲಿ ಸುತ್ತಾಡಿ, ಹೊಸಗಾಳಿ ಕುಡಿದ ಅವರು ಹೊಸ ಸ್ಫೂರ್ತಿಯ ಚಿಲುಮೆಯಾದದ್ದರಲ್ಲಿ, ಹೊಸ ಮಾನವರಾದದ್ದರಲ್ಲಿ ಆಶ್ಚರ್ಯವಿಲ್ಲ.

ವಿದೇಶದ ನೂತನ ಜೀವನ ಸನ್ನಿವೇಶಗಳನ್ನು ಗ್ರಹಿಸಿ, ಅವುಗಳಿಗೊಗ್ಗಿಕೊಳ್ಳಬೇಕಾದರೆ ಅವರಿಗೆ ಕೆಲವು ದಿನ ಹಿಡಿದುವು. ತಾಯ್ನಾಡಿನಿಂದ ಬಹು ದೂರ ಬಂದು ಕಾಲಹರಣ ಮಾಡಿದ್ದಾದರೆ ದೇಶದ್ರೋಹವಾಗುತ್ತದೆಂದು ಅವರು ಬಗೆದರು. ಸೋಮಾರಿತನವಾಗಲೀ ಭೋಗವೈಭವವಾಗಲೀ ಬಡವರಿಗಲ್ಲವೆಂಬುದನ್ನವರು ಮನಗಂಡರು. ಸಿನಿಮಾ ನೋಡಬೇಕೆಂಬ ಆಶೆಯಾಗಲೀ ಊರು ಕೇರಿ ಉಪವನಗಳಲ್ಲಿ ಕಾಲಾಡಿಸಬೇಕೆಂಬ ಗೀಳಾಗಲೀ ಅವರಿಗಿರಲಿಲ್ಲ. ತಮಗೆ ಬರುತ್ತಿದ್ದ ವಿದ್ಯಾರ್ಥಿವೇತನದಲ್ಲಿ ಸಾಧ್ಯವಾದಷ್ಟು ಮಿಗಿಸಿ, ಮಡದಿಯ ಖರ್ಚಿಗಾಗಿ ಕಳಿಸಬೇಕಾಗಿತ್ತು. ಆದ್ದರಿಂದ ಒಂದೆರಡು ರೊಟ್ಟಿ ಚೂರು, ಒಂದು ಸುತ್ತು ಮಾಂಸ ಅಥವಾ ಮೀನು ಮತ್ತು ಕಾಫಿಯಿಂದ ತಮ್ಮ ಹಸಿವನ್ನು ನೀಗಿಸಿಕೊಳ್ಳಬೇಕಾಗಿತ್ತು. ಸಾಮಾನ್ಯವಾಗಿ ಕ್ಷುದ್ಬಾಧೆ ಜ್ಞಾನಪಿಪಾಸುವಿಂದ ದೂರಸರಿಯುತ್ತದೆ. ಅವರು ತಮ್ಮ ಬಹು ವೇಳೆಯನ್ನು ಗ್ರಂಥಾಲಯದಲ್ಲಿ ಕಳೆಯುತ್ತಿದ್ದರು. ದಿನಕ್ಕೆ ಹದಿನಾಲ್ಕು ಗಂಟೆಕಾಲ

ಜ್ಞಾನೋಪಾಸನೆಯಲ್ಲಿ ತಲ್ಲೀನರಾಗುತ್ತಿದ್ದರು. ಹೊಸ ಪುಸ್ತಕವೊಂದು ಕೈಗೆ ಬಂದಾಗ ಊಟ ತಿಂಡಿ ನಿದ್ದೆಗಳನ್ನು ಮರೆಯುತ್ತಿದ್ದರು. ಕೊನೆಗೆ ದೇಹಾಯಾಸ ಮಾನಸಿಕ ವ್ಯಥೆಗಳು ಕಾಣೆಯಾಗುತ್ತಿದ್ದವು. ತಮ್ಮ ಸತಿ ಮಗು ಹೆತ್ತಳೆಂಬ, ಹೆತ್ತ ಕೆಲವು ದಿನಗಳಲ್ಲಿಯೇ ಅದು ಸತ್ತು ಹೋಯಿತೆಂಬ ಸುದ್ದಿ ಆ ಸಂಯಮಿಯ ಮನವನ್ನು ತುಸು ಕಲಕಿ ಮರೆಯಾಯಿತು.

ಆ ಸಮಯದಲ್ಲಿ ಅವರ ಗಮನವನ್ನು ವಿಶೇಷವಾಗಿ ಸೆಳೆದ ಪ್ರಾಧ್ಯಾಪಕರೆಂದರೆ ಆರ್. ಎ. ಸೆಲಿಗ್‌ಮನ್. ಅವರು ಲಾಲಾ ಲಜಪತರಾಯರ ಆಪ್ತ ಮಿತ್ರರು. ಅವರು ಪ್ರಕಾಂಡ ಪಂಡಿತರು, ಶ್ರೇಷ್ಠ ಬೋಧಕರು, ಸತ್ಯ ಶೋಧಕರು. ಒಮ್ಮೆ ಅವರ ಉಪನ್ಯಾಸ ಕೇಳಿದವರು ಅವರನ್ನು ಜೀವನ ಪರ್ಯಂತ ಮರೆಯುತ್ತಿರಲಿಲ್ಲ. ಅಂಬೇಡ್ಕರ್ ಅವರಿಂದ ವಿಶೇಷಾನುಮತಿಪಡೆದು ಅವರು ಪಾಠ ಮಾಡುತ್ತಿದ್ದ ಬೇರೆ ತರಗತಿಗಳಿಗೂ ಹಾಜರಾಗುತ್ತಿದ್ದರು. ಶಿಷ್ಯವಾತ್ಸಲ್ಯದಲ್ಲಿ ಆ ಪ್ರಾಧ್ಯಾಪಕರಿಗೆ ಹೊಯ್‌ಕಯ್ಯಾದವರಿರಲಿಲ್ಲ. ಅವರು ತಮ್ಮ ಕೋಣೆಯಲ್ಲಿದ್ದಾಗ ವಿದ್ಯಾರ್ಥಿಗಳು ಯಾರು ಬೇಕಾದರೂ ಹೋಗಿ ಪ್ರಶ್ನೆ ಪರಿಪ್ರಶ್ನೆಗಳ ಮೂಲಕ ತಮ್ಮ ಸಂಶಯಗಳನ್ನು ನಿವಾರಿಸಿಕೊಳ್ಳಬಹುದಿತ್ತು. ಸಂಶೋಧನೆಯಲ್ಲಿ ಅಂಬೇಡ್ಕರರ ಆಸಕ್ತಿಯನ್ನು ಕೆರಳಿಸಿದವರೂ ಅವರೇ. ಚಿಂತನ ಮಂಥನ ಪ್ರಯೋಗಗಳೇ ಸಂಶೋಧನೆಯ ಯಶಸ್ಸಿಗೆ ಕಾರಣವಾದ್ದರಿಂದ ಕೇವಲ ತತ್ತ್ವಲೋಲುಪರಾಗದೆ, ನೇರವಾಗಿ ಅನುಷ್ಠಾನ ಪ್ರವೃತ್ತರಾಗಬೇಕೆಂದೂ ಸ್ವಾನುಭವದ ಮೂಲಕ ಸೂಕ್ತ ವಿಧಾನಗಳನ್ನು ಕಂಡುಹಿಡಿದುಕೊಳ್ಳಬೇಕೆಂದೂ ಅವರು ಅಂಬೇಡ್ಕರರನ್ನು ಪ್ರೇರಿಸಿದರು ಅಷ್ಟು ಆತ್ಮೀಯವಾಗಿ ಧೈರ್ಯವನ್ನು ತುಂಬುವ, ಆಸಕ್ತಿಯನ್ನು ಕೆರಳಿಸುವ, ಮಾರ್ಗದರ್ಶನ ಮಾಡುವ ಗುರುಗಳು ಆತನಕ ಅವರಿಗೆ ದೊರೆತಿರಲಿಲ್ಲ.

ಅಂಬೇಡ್ಕರ್ ಅವರು ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗಕ್ಕಾಗಿ ಆರಿಸಿಕೊಂಡ ವಿಷಯಗಳು ರಾಜಕೀಯ ವಿಜ್ಞಾನ, ನೀತಿ ಮೀಮಾಂಸೆ, ಜನಾಂಗ ವಿಜ್ಞಾನ, ಸಮಾಜ ಶಾಸ್ತ್ರ ಮತ್ತು ಅರ್ಥಶಾಸ್ತ್ರ. 'ಪ್ರಾಚೀನ ಭಾರತೀಯ ವಾಣಿಜ್ಯ'ವೆಂಬ ವಿಷಯವನ್ನು ಕುರಿತು 1915ರಲ್ಲಿ ಬರೆದ ಪ್ರೌಢ ಪ್ರಬಂಧ ಎಂ.ಎ. ಪದವಿಯನ್ನು ಸಂಪಾದಿಸಿಕೊಟ್ಟಿತು. ಮಾರನೆಯ ವರ್ಷ ಜನಾಂಗ ವಿಜ್ಞಾನ ಸಂಬಂಧವಾದ ವಿಚಾರಗೋಷ್ಠಿಯಲ್ಲಿ ಭರತ ಖಂಡದ ಜಾತಿಸಮಸ್ಯೆಯನ್ನು ಕುರಿತ ಪ್ರಬಂಧವನ್ನು ಓದಿದರು. ಸಂಶೋಧ

ನಾತ್ಮಕವಾದ ಆ ಪ್ರಬಂಧದಲ್ಲವರು ಜಾತಿಗಳ ಉಗಮ ವಿಕಾಸವನ್ನು ವೈಜ್ಞಾನಿಕ ದೃಷ್ಟಿಯಿಂದ ವಿವರಿಸಿದರು. ಜಾತಿ ಹಿಂದೂ ಧರ್ಮದ ಅವಿಭಾಜ್ಯಾಂಗವೆಂದೂ. ಅದು ನಾಡಿನ ಜನತೆಯನ್ನು ಸಾವಿರಾರು ವಿಭಿನ್ನ ಘಟಕಗಳಾಗಿ ಒಡೆದಿದೆಯೆಂದೂ, ಸ್ವಜಾತಿ ವಿವಾಹ ಪದ್ಧತಿಯ ಮೂಲಕ ಅವು ಪರಸ್ಪರ ವಿಲಯನಗೊಳ್ಳದಂತೆ ಅದು ತಡೆದಿದೆಯೆಂದೂ, ನಿಮ್ನ ಜಾತಿಯ ಜನ ಎಷ್ಟೇ ಧರ್ಮಿಷ್ಠರಾದರೂ ಉತ್ತಮರ ವರ್ಗಕ್ಕೆ ಸೇರಲಾರರೆಂದೂ ಸಾಮಾಜಿಕ ಧಾರ್ಮಿಕ ಮತ್ತು ಆರ್ಥಿಕ ವಿಪತ್ತುಗಳಿಗೆ ಮಾತ್ರ ಅವರು ಸದಾ ವಾರಸುದಾರರೆಂದೂ ಅಂಬೇಡ್ಕರ್ ಅವರು ಚಾರಿತ್ರಿಕ ಹಿನ್ನೆಲೆಯಲ್ಲಿ ಜಾತೀಯತೆಯ ಭೀಕರತೆಯನ್ನು ನಿರೂಪಿಸಿದರು.

ಈ ಪ್ರಬಂಧಗಳ ಜತೆಜತೆಗೆ ಬ್ರಿಟಿಷ್ ಇಂಡಿಯಾದ ಪ್ರಾಂತೀಯ ಆರ್ಥಿಕ ವಿಕಾಸವನ್ನು ಕುರಿತ ನಿಬಂಧವನ್ನು ಸಹ ಅವರು ಸಿದ್ಧಪಡಿಸುತ್ತಿದ್ದರು. 1916ನೆಯ ಇಸವಿ ಜೂನ್ ತಿಂಗಳ ಎರಡನೆಯ ವಾರದಲ್ಲಿ ಅದನ್ನು ಕೊಲಂಬಿಯಾ ವಿಶ್ವವಿದ್ಯಾನಿಲಯಕ್ಕೊಪ್ಪಿಸಿದರು. ಅದು ಅಂಬೇಡ್ಕರ್ ಅವರಿಗೆ ಡಾಕ್ಟರ್ ಆಫ್ ಫಿಲಾಸಫಿ ಪದವಿಯ ಗೌರವವನ್ನು ತಂದುಕೊಟ್ಟಿತು. ಆ ಮಹಾನಿಬಂಧದ ಮಹತ್ವದ ಗುರುತಿಗಾಗಿ ಕಲಾಮಂಡಲಿಯ ಪ್ರಾಧ್ಯಾಪಕರೂ ವಿದ್ಯಾರ್ಥಿಗಳೂ ವಿಶೇಷ ಭೋಜನ ಕೂಟವನ್ನೇರ್ಪಡಿಸಿ, ಅವರನ್ನು ಮುಕ್ತಕಂಠದಿಂದ ಪ್ರಸಂಸಿಸಿ ಅಭಿನಂದಿಸಿದರು. ಲಿಂಕನ್ ಮತ್ತು ಬೂಕರ್ ಟಿ. ವಾಷಿಂಗ್ಟನ್ನರಂತೆ ದಲಿತ ಜನಾಂಗದ ದಾಸ್ಯ ವಿಮೋಚನೆಗೆ ಹೋರಾಡುವ ಕಾರಣ ಪುರುಷರಾಗುವರೆಂದು ತರುಣರು ಅವರನ್ನು ಕೊಂಡಾಡಿದರು. ಆ ಗ್ರಂಥ ಪ್ರಪಂಚದ ವಿದ್ವಾಂಸರ ಕುತೂಹಲವನ್ನು ಕೆರಳಿಸುವುದೆಂದೂ. ಅಂಥ ಕಠಿಣ ವಿಷಯವನ್ನು ಕುರಿತ ತಾತ್ವಿಕ ದೃಷ್ಟಿಯ ವಿವರಣಾತ್ಮಕ ಅಧ್ಯಯನ ಬೇರೆ ಕಡೆ ನಡೆದಿಲ್ಲವೆಂದೂ ಅದಕ್ಕೆ ಮುನ್ನುಡಿಯನ್ನು ಬರೆದ ಪ್ರಾಧ್ಯಾಪಕ ಸೆಲಿಗ್‌ಮನ್ನರು ಘೋಷಿಸಿದರು. ಭರತಖಂಡದ ಆರ್ಥಿಕ ಪರಿಸ್ಥಿತಿಯ ಪ್ರತಿಪಾದನೆಯಲ್ಲಿ ದೇಶಾಭಿಮಾನ ಅಂಬೇಡ್ಕರರ ಆತ್ಮಾಭಿವ್ಯಕ್ತಿಯನ್ನು ಗುರುತಿಸಬಹುದು. ಬ್ರಿಟಿಷ್ ಅಧಿಕಾರೀಶಾಹಿಯ ನ್ಯೂನತೆಗಳನ್ನೂ, ವಸಾಹತು ನೀತಿಯ ಕೂಟೋಪಾಯಗಳನ್ನೂ, ಪ್ರತಿಗಾಮಿ ಶಕ್ತಿಗಳ ವೈಪರೀತ್ಯಗಳನ್ನೂ ಅವರು ಬಯಲಿಗೆಳೆದಿದ್ದಾರೆ. ಆಂಗ್ಲರ ಆಡಳಿತ ಕಾಲದಲ್ಲಿ ಅಲ್ಪ ಸ್ವಲ್ಪ ಭೌತಿಕ ಪ್ರಗತಿ ಸಾಧ್ಯವಾಗಿದ್ದರೂ, ಭಾರತೀಯರು ಮೂಕ ಪ್ರಾಣಿ

ಗಳಂತೆ ದಾಸ್ಯಪಂಕದಲ್ಲಿ ಒದ್ದಾಡುವುದು ಹೇಯವಾದದ್ದೆಂದು ಸ್ಪಷ್ಟಪಡಿಸಿದ್ದಾರೆ. ಅವರ ಆರ್ಥಿಕ ನೀತಿ ಇಂಗ್ಲೆಂಡಿನ ಕೈಗಾರಿಕೋದ್ಯಮಿಗಳ ಹಿತಾಸಕ್ತಿಗಳನ್ನವಲಂಬಿಸಿತ್ತೆಂಬುದನ್ನು ಖಚಿತಪಡಿಸಿದ್ದಾರೆ. ಸಾಮಾಜಿಕ ಅನ್ಯಾಯ ಮತ್ತು ದಾಸ್ಯಗಳಿಗೆ ಬಲಿಯಾಗಿರುವ ದಲಿತ ವರ್ಗ ಎಲ್ಲ ದೇಶಗಳ್ಲಿರುವುದಾಗಿಯೂ, ಆದರೆ ರಾಜಕೀಯ ಸ್ವಾತಂತ್ರ್ಯವನ್ನು ಕಳೆದುಕೊಂಡಿರುವ ದೇಶ ಮತ್ತೊಂದಿಲ್ಲವೆಂಬುದಾಗಿಯೂ ಅವರು ದಿಟ್ಟತನದಿಂದ ನುಡಿದಿದ್ದಾರೆ.

ಆ ಕಾಲಕ್ಕೆ ಲಂಡನ್ ನಗರ ಅಂತರರಾಷ್ಟ್ರೀಯ ಶಿಕ್ಷಣ ಕೇಂದ್ರವೆಂದೂ ಜ್ಞಾನದೇಗುಲವೆಂದೂ ಹೆಸರು ಪಡೆದಿತ್ತು. ಅಲ್ಲಿ ಕಲಿಸದ ಜ್ಞಾನ ವಿಭಾಗವಿರಲಿಲ್ಲ ; ಅಲ್ಲಿಲ್ಲದ ಜ್ಞಾನ ಶಾಖೆ ಬೇರೆಲ್ಲಿಯೂ ಇರಲಿಲ್ಲ. ಅಮೆರಿಕೆಯಲ್ಲಿ ಪಡೆದ ಯಶಸ್ಸಿನಿಂದ ಉತ್ತೇಜಿತರಾದ ಅವರು 1916ರ ಜೂನ್ ತಿಂಗಳಲ್ಲಿ ಲಂಡನ್ ನಗರ ಸೇರಿದರು.

ಅವರು ಅಕ್ಟೋಬರ್ ತಿಂಗಳಲ್ಲಿ ಕಾನೂನು ವ್ಯಾಸಂಗಕ್ಕೆಂದು ಗ್ರೇಸ್ ಇನ್ ಅನ್ನೂ, ಅರ್ಥ ಶಾಸ್ತ್ರಾಧ್ಯಯನಕ್ಕಾಗಿ ಲಂಡನ್ನಿನ ಅರ್ಥಶಾಸ್ತ್ರ ಶಾಲೆಯನ್ನೂ ಸೇರಿದರು. ಅರ್ಥಶಾಸ್ತ್ರದಲ್ಲದವರು ಮೊದಲೇ ಸಾಕಷ್ಟು ಪರಿಣತಿ ಪಡೆದಿದ್ದುದರಿಂದ ಡಾಕ್ಟೊರೇಟ್ ಪದವಿಗೆ ನಿಬಂಧ ಸಿದ್ಧಪಡಿಸಬಹುದೆಂದು ಅಲ್ಲಿಯ ಪ್ರಾಧ್ಯಾಪಕರು ಅನುಮತಿ ನೀಡಿದರು. ಅವರು ತ್ವರಿತವಾಗಿ ತಮ್ಮ ಸಂಶೋಧನೆಯನ್ನು ಮುಂದುವರಿಸುತ್ತಿದ್ದಾಗಲೇ, ಅವರ ವೇತನಾವಧಿ ಮುಕ್ತಾಯಗೊಂಡಿತೆಂದೂ, ಕೂಡಲೇ ತಾಯ್ನಾಡಿಗೆ ಮರಳಬೇಕೆಂದೂ ಬರೋಡೆಯ ದಿವಾನರಿಂದ ಪತ್ರ ಬಂತು. ಅದರಿಂದ ಆ ಜ್ಞಾನ ಭಿಕ್ಷುವಿನ ಮನಸ್ಸಿಗೆ ವ್ಯಥೆಯಾಯಿತು. ಅನ್ಯಮಾರ್ಗ ಕಾಣದೆ, ಹಣ ಸಂಪಾದಿಸಿಕೊಂಡು ಹಿಂದಿರುಗಿ, ತಮ್ಮ ಸಂಶೋಧನೆ ಮುಂದುವರಿಸುವುದೆಂದು ನಿಶ್ಚಯಿಸಿಕೊಂಡು, ಪ್ರಾಧ್ಯಾಪಕರ ಅನುಮತಿ ಪಡೆದು, ಭಾರತಕ್ಕೆ ಹಿಂದಿರುಗಿವರು 1917ರ ಜುಲೈ 27ರಂದು ಬೂಲಗ್ನೆ (Boulgene) ರೈಲು ಹತ್ತಿ, ಮಾರ್ಸಲೇಸ್ ತಲುಪಿ, ಅಲ್ಲಿಂದ ಕೈಸರ್-ಇ-ಹಿಂದ್ ಹಡಗನ್ನೇರಿದರು. ಯುದ್ಧ ನಡೆಯುತ್ತಿದ್ದ ಆ ಕಾಲದಲ್ಲಿ ಹಡಗಿನ ಪ್ರಯಾಣ ಅಪಾಯಕಾರಿಯಾಗಿತ್ತು. ಮೆಡಿಟರೇನಿಯನ್ ಸಮುದ್ರದಲ್ಲಿ ಸಿಡಿದ ಗುಂಡಿನ ಪರಿಣಾಮವಾಗಿ ಹಡಗೊಂದು ಮುಳುಗಿಹೋಯಿತೆಂಬ ಸುದ್ದಿ ಜಗತ್ತಿನಲ್ಲೆಲ್ಲ ಹಾಹಾಕಾರವುಂಟುಮಾಡಿತಲ್ಲದೆ, ಅಂಬೇಡ್ಕರ್ ಅವರ ಮನೆಯಲ್ಲಿ ಗೋಳಿನ

ಅಲೆಯೆಬ್ಬಿಸಿತು. ಹಾಳಾದ ಹಡಗಿನಲ್ಲಿ ತಮ್ಮ ಸಾಮಾನಿದ್ದುದಾಗಿಯೂ ತಾವು ಮತ್ತೊಂದು ಹಡಗಿನಲ್ಲಿ ಸುರಕ್ಷಿತವಾಗಿ ಬರುತ್ತಿದ್ದುದಾಗಿಯೂ ಅಂಬೇಡ್ಕರ್ ಅವರಿಂದ ತಂತಿ ಬಂದಾಗ ಮಡದಿ ರಮಾಬಾಯಿ ನಿಟ್ಟುಸಿರು ಬಿಟ್ಟರು. ಆದರೆ ತಾವು ಹೊಟ್ಟೆಕಟ್ಟಿ ಮಿಗಿಸಿದ್ದ ಹಣದಿಂದ ಕೊಂಡ ಪುಸ್ತಕಗಳು ಸಮುದ್ರದ ಪಾಲಾಗಲಾಗಿ ಅಂಬೇಡ್ಕರ್ ಅವರು ತುಂಬ ವ್ಯಾಕುಲಗೊಂಡರು. ಅವರು 1917ರ ಆಗಸ್ಟ್ 21 ರಂದ ಕೊಲಂಬೋ ಮಾರ್ಗವಾಗಿ ಮುಂಬಯಿ ತಲುಪಿದರು.

ಸ್ವದೇಶೀ ಚಳುವಳಿಯ ಮತ್ತು ಮಹಾಯುದ್ಧದಲ್ಲಿ ಸಂಭವಿಸಿದ ಕಷ್ಟ ನಷ್ಟಗಳ ಪರಿಣಾಮವಾಗಿ ಆಂಗ್ಲ ಸರ್ಕಾರ ಕಳವಳಗೊಂಡು. ಭಾರತೀಯರಿಗೆ ಕೆಲವು ಸವಲತ್ತುಗಳನ್ನು ನೀಡುವುದೆಂದು ನಿಶ್ಚಯಿಸಿ, ಮಾಂಟೆಗು ಎಂಬ ಮುತ್ಸದ್ದಿಯನ್ನು ನಾಯಕರ ಅಭಿಪ್ರಾಯ ಸಂಗ್ರಹಣೆಗಾಗಿ ಭರತ ಖಂಡಕ್ಕೆ ಕಳುಹಿಸಿತು. ಪ್ರಪ್ರಥಮವಾಗಿ ಅಸ್ಪೃಶ್ಯರ ಪ್ರತಿನಿಧಿಗಳು ಸಂಘ ಸಂಸ್ಥೆಗಳ ಮೂಲಕ ಬ್ರಿಟಿಷ್ ಸರ್ಕಾರದ ಪ್ರತಿನಿಧಿಯ ಮುಂದೆ ತಮ್ಮ ಬೇಡಿಕೆಗಳನ್ನು ಸಲ್ಲಿಸಲು ಮುಂದಾದರು ; ತಮ್ಮನ್ನು ಬ್ರಾಹ್ಮಣರ ಮತ್ತು ಸವರ್ಣೀಯರ ದಾಸ್ಯದಿಂದ ವಿಮುಕ್ತಗೊಳಿಸುವಂತೆ ವಿನಂತಿಮಾಡಿಕೊಂಡರು. ಅಂಬೇಡ್ಕರ್ ಆ ಚಟುವಟಿಕೆಗಳಲ್ಲಿ ಪಾಲ್ಗೊಳ್ಳದೆಯೆ ಸಾಕ್ಷೀಪ್ರಜ್ಞೆಯಿಂದ ಅವುಗಳನ್ನು ವೀಕ್ಷಿಸುತ್ತಿದ್ದರು.

ಅವರು ಇಂಗ್ಲೆಂಡಿನಿಂದ ಹಿಂದಿರುಗಿದ ಕೂಡಲೇ, ಅವರ ವಿದ್ವತ್ತನ್ನು ಮೆಚ್ಚಿ ಗೌರವಿಸುವ ಸಲುವಾಗಿ ಸಾಂಬಾಜಿ ವಾಗ್ಮಾರೆಯವರ ನೇತೃತ್ವ ದಲ್ಲೊಂದು ಅಭಿನಂದನ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಸಂಕೋಚ ಸ್ವಭಾವದ, ವಿರಕ್ತ ಪ್ರವೃತ್ತಿಯ ಅಂಬೇಡ್ಕರ್ ಆ ಸಮಾರಂಭಕ್ಕೆ ಹೋಗಲಿಲ್ಲ. ಸಭೆ ಮುಕ್ತಾಯಗೊಂಡನಂತರ ಅವರ ಆಪ್ತಮಿತ್ರರೂ ಮೆಚ್ಚುಗಾರರೂ ಅವರ ಒಂದಂಕಣದ ಗೂಡಿಗೆ ಹೋಗಿ ಅಭಿನಂದನೆಗಳ ಮಳೆಗರೆದರು. ಬರೋಡ ಸರ್ಕಾರದೊಡನೆ ಮಾಡಿಕೊಂಡಿದ್ದ ಒಪ್ಪಂದದ ಪ್ರಕಾರ ಅಂಬೇಡ್ಕರ್ ಅವರು ಹತ್ತು ವರ್ಷ ಅಲ್ಲಿ ಸೇವೆ ಸಲ್ಲಿಸಬೇಕಾಗಿತ್ತು. ಅವರಲ್ಲಿಗೆ ಹೋಗಲು ಕೈಯಲ್ಲಿ ಕಾಸಿರಲಿಲ್ಲ. ಹಡಗಿನ ಮಾಲೀಕರು ಕಟ್ಟಿಕೊಟ್ಟಿದ್ದ ನಷ್ಟ ಪರಿಹಾರದ ದ್ರವ್ಯದಲ್ಲಿ ಹೆಂಡತಿಗೆ ಸ್ವಲ್ಪ ಕೊಟ್ಟು, ಮಿಕ್ಕಿದ್ದನ್ನು ಕೈಗಾವಲಿಗಿರಿಸಿಕೊಂಡು ಬರೋಡೆಗೆ ಹೋದರು. ಅವರನ್ನು ರೈಲು ನಿಲ್ದಾಣದಲ್ಲಿ ಸ್ವಾಗತಿಸುವಂತೆ

ಮಹಾರಾಜರು ತಮ್ಮ ಅಧಿಕಾರಿಗಳಿಗೆ ಆಜ್ಞೆ ನೀಡಿದ್ದರು. ಅವನೆಷ್ಟೇ ವಿದ್ಯಾವಂತನಾಗಿರಲಿ ಹೀನಕುಲ ಸಂಜಾತನನ್ನು ಉತ್ತಮ ಕುಲದವರು ಸ್ವಾಗತಿಸುವುದೆಂದರೇನು? ಅದರಿಂದ ಅವರ ಕುಲಕ್ಕೆ ಕಳಂಕವೊದಗುವು ದಿಲ್ಲವೆ? ಈ ಕಾರಣದಿಂದಾಗಿ ಯಾರೂ ನಿಲ್ದಾಣಕ್ಕೆ ಹೋಗಿರಲಿಲ್ಲ. ಹೋಟಲಿನಲ್ಲಾಗಲೀ ವಿದ್ಯಾರ್ಥಿನಿಲಯದಲ್ಲಾಗಲೀ ಅವರಿಗೆ ತಂಗು ದಾಣ ದೊರೆಯಲಿಲ್ಲ. ಕೊನೆಗೊಂದು ಪಾರ್ಸಿ ಹೋಟಲಿನಲ್ಲವರು ಅಜ್ಞಾತವಾಗುಳಿ ದಿರಬೇಕಾಯಿತು.

ಕೆಲವು ಇಲಾಖೆಗಳಲ್ಲಿ ಆಡಳಿತಾನುಭವ ಪಡೆದನಂತರ ಅವರನ್ನು ಅರ್ಥಸಚಿವರನ್ನಾಗಿ ನೇಮಿಸಿಕೊಳ್ಳುವುದೆಂದು ಮಹಾರಾಜರು ಆಲೋಚಿ ದ್ದರು. ಆದ್ದರಿಂದ ತತ್ಕಾಲದಲ್ಲವರು ಮಹಾರಾಜರ ಮಿಲಿಟರಿ ಕಾರ್ಯ ದರ್ಶಿಯಾಗಿ ಅಧಿಕಾರ ಸ್ವೀಕರಿಸಿದರು. ಬೌದ್ಧಿಕ ಸಿದ್ಧಿ ಪಡೆದಿದ್ದರೂ. ಮಹಾರಾಜರ ಕ ಪೆಗೆ ಪಾತ್ರರಾಗಿದ್ದರೂ ಸುತ್ತಮುತ್ತಣ ಜನ ಅಸ್ಪೃಶ್ಯ ರೆಂದೇ ಅವರನ್ನು ತುಚ್ಛವಾಗಿ ಕಾಣುತ್ತಿದ್ದರು. ನಿರಕ್ಷರಕುಕ್ಷಿಗಳಾದ ಜವಾನರು ಸಹ ಅವರ ಕೈಗೆ ಕಾಗದ ಪತ್ರ ನೀಡಿದ್ದಾದರೆ ತಮ್ಮ ಮೈ ಮೈಲಿಗೆಯಾಗುವು ದೆಂದು ತಿಳಿದು, ದೂರದಿಂದಲೇ ಮೇಜಿನಮೇಲೆ ಬಿಸಾಡಿ ಹೋಗುತ್ತಿದ್ದರು ಕಚೇರಿಯಲ್ಲಿ ಅವರಿಗೆ ಕುಡಿಯುವ ನೀರು ಸಿಗುತ್ತಿರಲಿಲ್ಲ ; ಸವರ್ಣೀಯರು ಬಳಸುವ ಪಾತ್ರೆಗಳನ್ನು ಮುಟ್ಟುವಂತಿರಲಿಲ್ಲ. ಕೆಳಗಿನ ಅಧಿಕಾರಿಗಳು ಅವರೊಡನೆ ಉಪೇಕ್ಷೆಯಿಂದ ವರ್ತಿಸುತ್ತಿದ್ದರು. ಅವರು ಕಚೇರಿ ಬಿಡುವ ಮುನ್ನ ಜವಾನರು ದಾರಿಯ ರಗ್ಗುಗಳನ್ನು ಸುರುಳಿ ಸುತ್ತಿಟ್ಟು, ಅವರು ಹೊರಬಾಗಿಲು ದಾಟಿದನಂತರ ಮತ್ತೆ ಸುರುಳಿ ಬಿಡಿಸುತ್ತಿದ್ದರು. ಅಂಥ ಅವಮಾನಕರ ಪರಿಸ್ಥಿತಿಯಲ್ಲಿ ಗ್ರಂಥ ಭಂಡಾರವೇ ಅವರಿಗೆ ಧ್ಯಾನಮಂದಿರ ವಾಗಿ ಪರಿಣಮಿಸಿತು.

ಕೆಲವು ದಿನ ಕಳೆಯುವಷ್ಟರಲ್ಲಿ ಅವರು ಅಸ್ಪೃಶ ರೆ ಬ ಸಂಗತಿ ಹೋಟಲಿನ ಮಾಲೀಕನಿಗೆ ತಿಳಿಯಿತು. ಕೆಲವು ಪಾರ್ಸಿಗಳು ದೊಣ್ಣೆ ವಡಿ ಗಳೊಡನೆ ಅವರನ್ನೋಡಿಸುವ ಸಲುವಾಗಿ ಬಂದು 'ನೀನು ಯಾವ ಜಾತಿ?' ಎಂದು ಪ್ರಶ್ನಿಸಿದರು.

"ಹಿಂದು"

"ನಿಜ ಹೇಳು"

"ನಿಜವೆ"

"ನೀನು ಮಹರ್ ಅಲ್ಲವೆ?"

"ಮಹರ್ ಹಿಂದುವಲ್ಲವೆ?"

"ಯಾರು ಹೇಳಿದರು?"

"ನಾನು"

"ಮುಟ್ಠಾಳ, ನಿನಗೆಷ್ಟು ಸೊಕ್ಕು? ಮೋಸಮಾಡಿ ಇಲ್ಲಿ ಸೇರಿಕೊಂಡಿದ್ದೀಯ. ಈ ಕೂಡಲೇ ಕಾಲು ತೆಗೆಯದಿದ್ದರೆ ನಿನ್ನನ್ನೂ ನಿನ್ನ ಸಾಮಾನನ್ನೂ ಗಟಾರಕ್ಕೊಗೆಯಬೇಕಾದೀತು."

"ಇಪ್ಪತ್ತನಾಲ್ಕು ಗಂಟೆ ಸಮಯ ಕೊಡಿ."

"ಜೋಕೆ. ಇಪ್ಪತ್ತುನಾಲ್ಕು ಗಂಟೆಯೊಳಗೆ ಇಲ್ಲಿಂದ ಹೊರಡದಿದ್ದರೆ ನಿನ್ನ ಮೂಳೆ ಉಳಿಯಲಿಕ್ಕಿಲ್ಲ" ಎಂದವರು ಗರ್ಜಿಸಿದರು.

ಅಂಬೇಡ್ಕರ್ ಅವರು ಕೂಡಲೇ ಒಂದಂಕಣ ಕೋಣೆ ಹಿಡಿಯುವ ಸಲುವಾಗಿ ಕೇರಿಗಳನ್ನೆಲ್ಲ ಸುತ್ತಿದರು. ಹಿಂದುಗಳು ಮಾತ್ರವಲ್ಲ, ಮುಸ್ಲಿಮರು ಸಹ ಅವರ ಜಾತಿಯ ಹೆಸರು ಕೇಳಿ ಹೊರಗಟ್ಟುತ್ತಿದ್ದರು. ಮಹಾರಾಜರಿಗೆ ಮನವಿ ಸಲ್ಲಿಸಿದರು. ಅವರದನ್ನು ದಿವಾನರಿಗೆ ದಾಟಿಸಿದರು. ಅದನ್ನು ದಿವಾನರು ಕಸದ ಬುಟ್ಟಿಗೆಸೆದರು. ಸವರ್ಣೀಯರನ್ನು ಮೇಲೆತ್ತಿ ಹಾಕಿಕೊಳ್ಳುವ ಧೈರ್ಯ ರಾಜರಿಗಿರಲಿಲ್ಲ. ಕಡೆಗೆ ನಿರಾಶರಾಗಿ ಅನ್ನ ನೀರಿಲ್ಲದೆ ಊರ ಹೊರಗಿನ ರಸ್ತೆ ಬದಿಯ ಮರದಡಿಯಲ್ಲಿ ಕುಳಿತು ಗಳಗಳನೆ ಅತ್ತುಬಿಟ್ಟರು: ಭೂಮಿಗಾದರೂ ಕರುಣೆಯಿಲ್ಲವಲ್ಲ; ಇದ್ದಿದ್ದರೆ ತಮ್ಮನ್ನೂ ತಮ್ಮವರನ್ನೂ ನುಂಗಿ ಕಿರುಕುಳಾವಮಾನಗಳಿಂದ ಪಾರುಮಾಡಬಹುದಿತ್ತಲ್ಲ ಎಂದು ಬಗೆ ಬಗೆಯಾಗಿ ಚಿಂತಿಸಿದರು. ಕೊನೆಗೆ ಬೇರೆ ದಾರಿಯಿಲ್ಲದೆ ಎರಡು ತಿಂಗಳ ತಂಗಣೆಯನಂತರ 1917ನೆಯ ನವಂಬರ್ ತಿಂಗಳ ಮಧ್ಯಭಾಗದಲ್ಲಿ ಮುಂಬಯಿಗೆ ಹಿಂದಿರುಗಿದರು. ಕೆಲೂಸ್ಕರ್ ಅವರು ಬರೋಡೆಯ ಉದಾರ ಸ್ವಭಾವದ ಪ್ರಾಧ್ಯಾಪಕರೊಬ್ಬರಿಗೆ ಪತ್ರ ಬರೆದು ಅಂಬೇಡ್ಕರ್ ಅವರಿಗೆ ಆಶ್ರಯ ನೀಡುವಂತೆ ಕೇಳಿಕೊಂಡರು. ಪ್ರಾಧ್ಯಾಪಕರು ಕೂಡಲೇ ಸಮ್ಮತಿಯ

ಪತ್ರ ಬರೆದರು. ಅವರು ತಮ್ಮ ಪತ್ನಿಗೆ ಪತ್ರದ ವಿಷಯ ತಿಳಿಸಿದಾಗ, ಆ ಪತ್ನಿ ಹುಲಿಯಂತೆ ಮೇಲೆ ಬಿದ್ದರು. ಪ್ರಾಧ್ಯಾಪಕರು ತತ್ತರಿಸುತ್ತ ನೇರವಾಗಿ ನಿಲ್ದಾಣಕ್ಕೆ ಓಡಿದರು. ರೈಲಿಂದಿಳಿದ ಅಂಬೇಡ್ಕರ್‌ರನ್ನವರು ಭೇಟಿ ಮಾಡಿ, ತಮ್ಮ ಇಕ್ಕಟ್ಟಿನ ಪರಿಸ್ಥಿತಿಯನ್ನು ವಿವರಿಸಿದರು. ಅಂಬೇಡ್ಕರ್ ಖಿನ್ನಮುಖಿಯಾಗಿ ಊರೊಳಗೂ ಹೋಗದೆ, ಮತ್ತೊಂದು ರೈಲಿನಲ್ಲಿ ಮುಂಬಯಿಗೆ ಹಿಂದಿರುಗಿದರು. ನಿಂತ ನೆಲವೇ ಅಗ್ನಿಕುಂಡವಾಗಿ, ಕುಡಿವ ನೀರೇ ನಂಜಾಗಿ, ಸೇವಿಸುವ ಗಾಳಿಯೇ ವಿಷವಾಗಿ, ಗಗನವೇ ಕುಸಿದು ಕೆಳಗೆ ಬೀಳುವುದಾದರೆ ದಲಿತರಿಗೆ ರಕ್ಷೆಯೆಲ್ಲಿಯದು ?

ಮುಸ್ಲಿಮರ ರಾಜಕೀಯ ಹಕ್ಕುಗಳನ್ನು ಮಾನ್ಯಮಾಡಿದ ಕಾಂಗ್ರೆಸ್ ಸಂಸ್ಥೆ ಅದೇತಾನೆ ರಾಜಕೀಯವಾಗಿ ಹಾಗೂ ಸಾಮಾಜಿಕವಾಗಿ ಪ್ರಜ್ಞಾವಂತರಾಗುತ್ತಿದ್ದ ನಿಮ್ನವರ್ಗದ ಜನರ ಬೇಡಿಕೆಗಳನ್ನು ಸಹಾನುಭೂತಿಯಿಂದ ಪರಿಶೀಲಿಸಬೇಕೆಂಬ ತತ್ತ್ವವನ್ನಂಗೀಕರಿಸಿತು. 1917ರ ನವೆಂಬರ್ ತಿಂಗಳಲ್ಲಿ ನಾರಾಯಣ ಗಣೇಶ ಚಂದ್ರಾವರ್ಕರ್ ಅವರ ನೇತೃತ್ವದಲ್ಲಿ ನಡೆದ ನಿಮ್ನವರ್ಗದ ಜನರ ಸಮ್ಮೇಲನ ಜನಸಂಖ್ಯೆಗನುಗುಣವಾಗಿ ಶಾಸನಸಭೆಗಳಿಗೆ ತಮ್ಮ ಪ್ರತಿನಿಧಿಗಳನ್ನಾರಿಸುವ ಹಕ್ಕನ್ನು ತಮಗೆ ನೀಡಬೇಕೆಂದು ಸರ್ಕಾರವನ್ನು ಕೋರುವ ನಿರ್ಣಯವನ್ನಂಗೀಕರಿಸಿತು. ತಮ್ಮ ಮಲತಾಯಿಯ ನಿಧನದಿಂದ ಶೋಕಗ್ರಸ್ತರಾಗಿದ್ದ ಪ್ರಯುಕ್ತ ಅಂಬೇಡ್ಕರ್ ಆ ಸಮ್ಮೇಲನದಲ್ಲಿ ಭಾಗವಹಿಸಲಿಲ್ಲ. ಮುಂಬಯಿ ಮಹಾನಗರದಲ್ಲಿ, 1918ರ ಮಾರ್ಚ್ ತಿಂಗಳಲ್ಲಿ ಬರೋಡೆಯ ಮಹಾರಾಜರ ಅಧ್ಯಕ್ಷತೆಯಲ್ಲಿ ನಡೆದ, ವಿಠ್ಠಲಭಾಯಿ ಪಟೇಲ್ ಎಂ. ಆರ್. ಜಯಕರ್, ಬಿಪಿನ ಚಂದ್ರಪಾಲ್, ತಿಲಕ್, ಎ. ವಿ. ಥಕ್ಕರ್ ಮೊದಲಾದ ಪ್ರಭೃತಿಗಳು ಹಾಜರಿದ್ದ, ಮೊಟ್ಟ ಮೊದಲನೆಯ ಅಖಿಲ ಭಾರತೀಯ ನಿಮ್ನವರ್ಗದ ಜನರ ಮಹಾ ಸಮ್ಮೇಲನ ಭರತಖಂಡಕ್ಕಂಟಿಕೊಂಡು ಬಂದಿದ್ದ ಅಸ್ಪೃಶ್ಯತೆಯ ಕಳಂಕವನ್ನೊರಸುವಂತೆ ಭಾರತೀಯರಿಗೆ ಕರೆಕೊಟ್ಟಿತು. ಅಸ್ಪೃಶ್ಯತೆಯನ್ನು ಸಹಿಸಿಕೊಂಡಿರುವ ದೇವರು ದೇವರಲ್ಲವೆಂದೂ, ಅದೊಂದು ಸಾಮಾಜಿಕ ರೋಗವೆಂದೂ, ಅದರ ಪ್ರಾಬಲ್ಯಕ್ಕೆ ಬ್ರಾಹ್ಮಣರು ಕಾರಣರೆಂದೂ ತಿಲಕ್ ತಮ್ಮ ಭಾಷಣದಲ್ಲಿ ಹೇಳಿದರು. ಆದರೆ ದೈನಂದಿನ ವ್ಯವಹಾರಗಳಲ್ಲಿ ಅಸ್ಪೃಶ್ಯತೆಯನ್ನು ಆಚರಿಸುವುದಿಲ್ಲವೆಂಬ ಪ್ರಣಾಳಿಕೆಗೆ ತಮ್ಮ ಅನುಯಾಯಿಗಳ ವಿರೋಧದಿಂದಾಗಿ ಅವರು ರುಜು

ಹಾಕಲಿಲ್ಲ. ಸವರ್ಣೀಯರು ನಡಸುತ್ತಿದ್ದ ಅಂಥ ಸಮ್ಮೇಲನಗಳ ಬಗ್ಗೆ ಅಂಬೇಡ್ಕರ್ ಅವರಿಗೆ ಸಂಶಯವಿದ್ದುದರಿಂದ ಆ ಕಡೆಗೆ ಅವರು ತಿರುಗಿ ಸಹ ನೋಡುತ್ತಿರಲಿಲ್ಲ.

ಜೀವನಮಾರ್ಗವನ್ನು ಕಲ್ಪಿಸಿಕೊಳ್ಳದೆ ಅಂಬೇಡ್ಕರ್ ರಾಜಕಾರಣದ ಅಥವಾ ಸಮಾಜ ಸುಧಾರಣೆಯ ಕಡೆಗೆ ಗಮನ ಹರಿಸುವಂತಿರಲಿಲ್ಲ. ಸ್ವತಂತ್ರ ವಾಗಿ ಜೀವನ ನಡಸಬೇಕೆಂಬುದು ಅವರ ಮಹದಾಶಯ. ಕಾನೂನು ವ್ಯಾಸಂಗ ಮುಗಿದಿದ್ದರೆ ಅದು ಸಾಧ್ಯವಾಗುತ್ತಿತ್ತು. ಪಾರ್ಸಿಗೃಹಸ್ಥರೊಬ್ಬರ ನೆರವಿನಿಂದ ಮಕ್ಕಳಿಬ್ಬರಿಗೆ ಮನೆಪಾಠ ಹೇಳಿಕೊಡುವ ಕಾಯಕ ದೊರಕಿಸಿಕೊಂಡರು. ಅದರ ಜತೆಗೆ ಷೇರುಮಾರುಕಟ್ಟೆಯ ವ್ಯವಸ್ಥಾಪಕರಿಗೆ ಸಲಹೆ ನೀಡುವ ವ್ಯವ ಹಾರಸಂಸ್ಥೆಯೊಂದನ್ನು ಪ್ರಾರಂಭಿಸಿದರು. ಮೊದಮೊದಲು ಅದು ಲಾಭ ದಾಯಕವಾಗಿತ್ತು. ಅದರ ಯಜಮಾನ ಅಸ್ಪೃಶ್ಯನೆಂದು ತಿಳಿದಕೂಡಲೆ ವ್ಯವಹಾರಿಗಳು ಆ ಕಡೆ ತಲೆಹಾಕುತ್ತಿರಲಿಲ್ಲ. ಕೆಲವು ದಿನಗಳಲ್ಲಿಯೇ ಅದನ್ನು ಮುಚ್ಚಬೇಕಾಯಿತು. ಆನಂತರ ಸುಮಾರು ದಿನ ಪಾರ್ಸಿ ಸದ್ಗೃಹಸ್ಥನೊಬ್ಬನ ಲೆಕ್ಕ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದರು.

ಹೀಗೆ ಅವರ ಭವಿಷ್ಯ ಗಾಳಿಗೊಡ್ಡಿದ ಸೊಡರಿನಂತೆ ಅಸ್ಥಿಮಿತವಾಗಿರು ವಾಗ, ಸೈಡೆನ್‌ಹ್ಯಾಮ್ ಕಾಲೇಜಿನಲ್ಲೊಂದು ಪ್ರಾಧ್ಯಾಪಕ ಹುದ್ದೆ ಖಾಲಿ ಯಿರುವುದಾಗಿ ತಿಳಿಯಿತು. ಸೈಡೆನ್‌ಹ್ಯಾಮರು ಹಿಂದೆ ಮುಂಬಯಿ ರಾಜ್ಯ ಪಾಲರಾಗಿದ್ದರು. ಲಂಡನ್ನಿನಲ್ಲಿದ್ದಾಗ ಅಂಬೇಡ್ಕರ್ ಅವರನ್ನು ಪರಿಚಯಿಸಿ ಕೊಂಡಿದ್ದರು. ಸಂಬಂಧಪಟ್ಟ ಅಧಿಕಾರಿಗಳಿಗೆ ತಮ್ಮ ಪರವಾಗಿ ಶಿಫಾರಸು ಮಾಡುವಂತೆ ಅವರು ಮಾಜಿ ರಾಜ್ಯಪಾಲರಿಗೆ ಪತ್ರ ಬರೆದರು. ಸಂದರ್ಶನ ಸಹ ಜರುಗಿತು. 1918ನೆಯ ನವೆಂಬರು ತಿಂಗಳಲ್ಲಿ ಅವರನ್ನು ಸರ್ಕಾರ ಪ್ರಾಧ್ಯಾಪಕ ಹುದ್ದೆಗೆ ನೇಮಿಸಿತು. ಈ ಅಸ್ಪೃಶ್ಯ ಪ್ರಾಧ್ಯಾಪಕನಿಗೇನು ಬರುತ್ತದೆ? ಯಾವ ಜನ್ಮದ ಕರ್ಮಫಲವೊ, ಅವನಿಂದ ಪಾಠ ಹೇಳಿಸಿಕೊಳ್ಳ ಬೇಕಾಯಿತಲ್ಲ? ಎಂಬ ಕ್ರೋಧಸಂಕಟಗಳಿಂದ ವಿದ್ಯಾರ್ಥಿಗಳು ತರಗತಿಗಳನ್ನು ಪ್ರವೇಶಿಸಿದರು. ಅಂಬೇಡ್ಕರ್ ಎಂದೂ ಪೂರ್ವಸಿದ್ಧತೆಯಿಲ್ಲದೆ ತರಗತಿಗೆ ಹೋದವರಲ್ಲ ; ಜತೆಗೆ ಆತ್ಮಪ್ರತ್ಯಯವೂ ಅವರಲ್ಲಿ ತುಂಬಿ ತುಳುಕಾಡುತ್ತಿತ್ತು. ಮೊದಲ ಗಂಟೆಯಲ್ಲಿ ವಿದ್ಯಾರ್ಥಿಗಳು ಹಾಜರಿಗಾಗಿ ಬಂದಿದ್ದರೆ ಹೊರತು, ಪಾಠ ಕೇಳುವುದಕ್ಕಲ್ಲ. ಪ್ರಾಧ್ಯಾಪಕರ ಅಸ್ಖಲಿತವಾಣಿಗೂ ವಿದ್ವತ್ ವೈಭವಕ್ಕೂ

ಮಾರುಹೋದ ವಿದ್ಯಾರ್ಥಿಗಳು "ಇವನು ಪರವಾ ಇಲ್ಲ ಕಣಯ್ಯ. ನಾವೇನೋ ಅಂತಿದ್ವಿ" ಎಂದು ಪರಸ್ಪರವಾಗಿ ಮಾತಾಡಿಕೊಂಡರು. ಅವರ ಆಧುನಿಕ ಪೋಷಾಕು, ಸುಸಂಸ್ಕೃತ ರೀತಿ ನೀತಿ ಮತ್ತು ಮಿಂಚುನೋಟಗಳು ವಿದ್ಯಾರ್ಥಿಗಳ ಮನಸ್ಸನ್ನು ಸೂರೆಗೊಂಡವು. ಕೆಲವು ಗಂಟೆಗಳಲ್ಲಿಯೇ ಅವರು ಶ್ರೇಷ್ಠ ಪ್ರಾಧ್ಯಾಪಕರೆಂಬ ಭಾವನೆ ಎಲ್ಲ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಬಲವಾಗಿ ಬೇರೂರಿತು.

ಮಹಾರಾಷ್ಟ್ರದಲ್ಲಿ ದಲಿತ ಜನರ ಉದ್ಧಾರಕ್ಕಾಗಿ ಪಣತೊಟ್ಟ ಸವರ್ಣೀಯರಲ್ಲಿ ಅಗ್ರಗಣ್ಯರೆಂದರೆ ಕೊಲ್ಲಾಪುರದ ಸಾಹುಮಹಾರಾಜರು. ಅಸ್ಪೃಶ್ಯತಾನಿವಾರಣೆಗಾಗಿ ಅವರು ಅನೇಕ ಕಾರ್ಯಕ್ರಮಗಳನ್ನು ಜಾರಿಗೆ ತಂದರು. ಸರ್ಕಾರಿ ಇಲಾಖೆಗಳಿಗೆ ಮಾತ್ರವಲ್ಲ, ಅರಮನೆಯ ಸೇವೆಗೂ ಅಸ್ಪೃಶ್ಯರನ್ನು ನೇಮಿಸಿಕೊಂಡರು. ಸಾರ್ವಜನಿಕವಾಗಿ ಸಹಪಂಕ್ತಿ ಭೋಜನದಲ್ಲಿ ಭಾಗವಹಿಸಿದರು. ಅಂಬೇಡ್ಕರರು ಅವರ ನೆರವಿನಿಂದ 1920ನೆಯ ಜನವರಿ 31ರಂದು 'ಮೂಕನಾಯಕ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. ಸಂಪಾದಕರಾಗಿ ಘೋಷಿಸಿಕೊಳ್ಳದಿದ್ದರೂ ಅವರೇ ಅದರ ಚಾಲಕ ಶಕ್ತಿಯಾಗಿದ್ದರು. ಹಣ ಕೊಡುವುದಾಗಿ ಬರೆದರೂ ಮೂಕನಾಯಕಕ್ಕೆ ಸಂಬಂಧಿಸಿದ ಜಾಹಿರಾತನ್ನು ತಿಲಕರ ಕೇಸರಿ ಪ್ರಕಟಿಸಲಿಲ್ಲ. ಪ್ರಥಮ ಸಂಚಿಕೆಯಲ್ಲಿಯೇ ಅಂಬೇಡ್ಕರ್ ಹಿಂದೂ ಸಮಾಜದ ದೋಷದೌರ್ಬಲ್ಯಗಳನ್ನು ಬಯಲಿಗೆಳೆದರು. "ಅದೊಂದು ಅಸಮಾನತೆಯ ತವರು. ಅದು ಏಣಿಯಿಲ್ಲದ, ಪ್ರವೇಶ ದ್ವಾರವಿಲ್ಲದ ಅನೇಕ ಮಹಡಿಗಳುಳ್ಳ ಗೋಪುರ. ಒಂದು ಮಹಡಿಯಲ್ಲಿ ಹುಟ್ಟಿದ ಜನ ಅಲ್ಲಿಯೇ ಸತ್ತು ಕೊಳೆಯಬೇಕು. ಚರಾಚರ ವಸ್ತುಗಳಲ್ಲಿ ದೇವರಿದ್ದಾರೆಂದು ನುಡಿದ ಜನ ಸ್ವಮತೀಯರಲ್ಲಿ ಕೆಲವರ ಹಣೆಯ ಮೇಲೆ ಅಸ್ಪೃಶ್ಯತೆಯ ಮುದ್ರೆ ಒಡಿದರು. ಹಿಂದುಳಿದ ಬ್ರಾಹ್ಮಣೇತರರು ಮತ್ತು ಅಸ್ಪೃಶ್ಯರು ಶತಶತಮಾನಗಳ ಜಡತನದಿಂದ ಜಾಗ್ರತರಾಗುವತನಕ ಈ ನಾಡಿಗೆ ಮುಕ್ತಿಯಿಲ್ಲ. ಇಂಡಿಯಾ ಸ್ವತಂತ್ರವಾದರೆ ಸಾಲದು. ಧಾರ್ಮಿಕ ರಾಜಕೀಯ ಸಾಮಾಜಿಕಾರ್ಥಿಕ ವಿಷಯಗಳಲ್ಲಿ ಭರತ ಖಂಡದಲ್ಲಿ ಹುಟ್ಟಿದವರೆಲ್ಲರೂ ಸಮಾನ ಹಕ್ಕುಳ್ಳವರಾಗಬೇಕು ; ಪ್ರತಿಯೊಬ್ಬನೂ ವಿಕಾಸಹೊಂದಲನುಕೂಲವಾಗುವಂತೆ ಸಮಾನಾವಕಾಶಗಳನ್ನು ಕಲ್ಪಿಸಬೇಕು. ಅಸ್ಪೃಶ್ಯರ ಹಕ್ಕು ಬಾಧ್ಯತೆಗಳನ್ನು ಸ್ಪಷ್ಟಪಡಿಸದೆ ಆಂಗ್ಲರು ಈ ನಾಡಿನಿಂದ ಕಾಲ್ತೆಗೆಯಬಾರದು ;

ಕಾಲ್ತೆಗೆದದ್ದಾದರೆ ಮತ್ತೆ ಸಾವಿರಾರು ವರ್ಷಗಳವರೆಗೆ ಅವರು ಸವರ್ಣೀಯರಿಗೆ ಗುಲಾಮರಾಗಿ ಪಶುಗಳಿಗಿಂತ ಕೀಳಾಗಿ ಬದುಕಬೇಕಾಗುತ್ತದೆ."–ಇದು ಅವರ ಅಂದಿನ ಬರಹಗಳ ಸಾರಾಂಶ. ಜನಸಂಖ್ಯೆಗನುಗುಣವಾಗಿ ನಿಮ್ನ ವರ್ಗದ ಜನರಿಗೆ ಪ್ರತ್ಯೇಕ ಚುನಾವಣಾ ಕ್ಷೇತ್ರಗಳಿರಬೇಕೆಂಬ ತಿದ್ದುಪಡಿಯನ್ನು ಮಾಂಟೆಗೋ-ಚೆಲ್ಮ್ಸ್‌ಫೋರ್ಡ್ ಸುಧಾರಣೆಗಳಲ್ಲಿ ಸೇರ್ಪಡೆಗೊಳಿಸಬೇಕೆಂದು ಅವರು ವಾದಿಸಿದರು.

1920ನೆಯ ಇಸವಿ ಮಾರ್ಚಿ 21ರಂದು ಕೊಲ್ಲಾಪುರ ಸಂಸ್ಥಾನದ ಮಾಂಗಾವ್ ಪಟ್ಟಣದಲ್ಲಿ ಜರುಗಿದ ಅಸ್ಪೃಶ್ಯ ಸಮ್ಮೇಲನದ ಅಧ್ಯಕ್ಷ ಪದವಿಯ ಗೌರವ ಅಂಬೇಡ್ಕರ್ ಅವರ ಪಾಲಿಗೊದಗಿತ್ತು. ಆ ಸಂದರ್ಭದಲ್ಲಿ ಸಾಹು ಮಹಾರಾಜರು ಅವರನ್ನು ಕುರಿತು ನುಡಿದ ಮಾತುಗಳಲ್ಲಿ ಪ್ರವಾದಿಯ ಕಾಣ್ಕೆಯಿತ್ತು. "ನೀವೀಗ ಅಂಬೇಡ್ಕರ್ ಅವರ ರೂಪದಲ್ಲಿ ರಕ್ಷಕನೊಬ್ಬನನ್ನು ಪಡೆದಿದ್ದೀರಿ. ಅವರು ದಾಸ್ಯ ಸಂಕೋಲೆಯಿಂದ ನಿಮ್ಮನ್ನು ಪಾರುಮಾಡುತ್ತಾರೆಂಬ ಭರವಸೆ ನನಗಿದೆ. ಮುಂಬರುವ ದಿನಗಳಲ್ಲಿ ಅವರು ಭರತಖಂಡದ ಅಗ್ರಗಣ್ಯ ನಾಯಕರಾಗಿ ರಾರಾಜಿಸುತ್ತಾರೆಂಬುದಾಗಿ ನನ್ನ ಅಂತರಂಗ ನುಡಿಯುತ್ತಿದೆ." ಅದೇ ವರ್ಷ ಮೇ ತಿಂಗಳ ಕೊನೆಯ ವಾರದಲ್ಲಿ ನಿಮ್ನವರ್ಗದ ಜನರೇ ಏರ್ಪಡಿಸಿದ್ದ ಅಖಿಲ ಭಾರತೀಯ ಸಮ್ಮೇಲನ ನಾಗಪುರದಲ್ಲಿ ನಡೆಯಿತು. ಸಾಹು ಮಹಾರಾಜರೇ ಆ ಸಮ್ಮೇಲನದ ಅಧ್ಯಕ್ಷರು. ನಿಮ್ನವರ್ಗದ ಪ್ರತಿನಿಧಿಗಳನು ಸರ್ಕಾರವಾಗಲೀ ದಲಿತ ಜನಾಂಗದ ಸಂಘಸಂಸ್ಥೆಗಳಾಗಲೀ ನಾಮಕರಣ ಮಾಡಬಾರದೆಂಬ. ಶಾಸನಸಭಾ ಸದಸ್ಯರು ಮಾತ್ರ ಆಯ್ಕೆ ಮಾಡತಕ್ಕದ್ದೆಂಬ ನಿರ್ಣಯವನ್ನು ಆ ಸಮ್ಮೇಲನದಲ್ಲಿ ಮಂಡಿಸಲೆಂದು ಕರ್ಮವೀರಶಿಂಧೆಯವರು ಕಳಿಸಿದ್ದರು. ಆ ನಿರ್ಣಯವನ್ನಂಗೀಕರಿಸಬಾರದೆಂದೂ, ಸರ್ಕಾರ ಅದಕ್ಕೆ ಮನ್ನಣೆ ನೀಡಕೂಡದೆಂದೂ ಅಂಬೇಡ್ಕರ್ ಅವರು ಸಕಾರಣವಾಗಿಯೂ ಕಟ್ಟುಗ್ರವಾಗಿಯೂ ವಾದಿಸಿದರು. ಸವರ್ಣೀಯರು ಔದಾರ್ಯದಿಂದ ತಮ್ಮ ಹಕ್ಕುಗಳನ್ನ ರಕ್ಷಿಸಲಾರರೆಂದೂ, ಅಸ್ಪೃಶ್ಯರು ಒಳ ಪಂಗಡಗಳನ್ನು ವಿಸರ್ಜಿಸಿ ಒಟ್ಟುಗೂಡಿದ್ದಾದರೆ ತಮ್ಮ ಸ್ವಾತಂತ್ರ್ಯ ಬಹು ಬೇಗನೆ ಕೈಗೂಡುತ್ತದೆಂದೂ, ಯಾರೂ ಮುಂದೆ ತಮ್ಮ ಪ್ರಗತಿಗೆ ಅಡ್ಡ ಬರಲಾರರೆಂದೂ ಅವರು ಉದ್ಘೋಷಿಸಿದರು. ಅವರ ಅಂದಿನ ವಾದದಲ್ಲಿ ವಾದನೈಪುಣ್ಯವೂ ನಾಯಕ ಲಕ್ಷಣಗಳೂ ಮೊಟ್ಟಮೊದಲಿಗೆ ಗೋಚರವಾದುವು. ಅಲ್ಲಿ ನೆರೆದಿದ್ದ

ಜನ ಅವರಲ್ಲಿ ಉದ್ಧಾರಕ ಶಕ್ತಿಯನ್ನು ಕಂಡುಕೊಂಡು ಅವರಿಗೆ ಜಯಕಾರ ಕೂಗಿದರು.

ಲಂಡನ್ನಿನಲ್ಲಿ ವ್ಯಾಸಂಗ ಮುಗಿಸಿಬರಬೇಕೆಂಬ ಹೆಬ್ಬಯಕೆ ಪ್ರೊಫೆಸರ್ ಅಂಬೇಡ್ಕರ್ ಅವರ ಮನಸ್ಸಿನಿಂದ ಅಳಿಸಿಹೋಗಿರಲಿಲ್ಲ. ತಮಗೆ ಬರುತ್ತಿದ್ದ ಆದಾಯದಲ್ಲಿ ಸಂಸಾರ ನಿರ್ವಹಣೆಗೆ ಅಗತ್ಯವಾದಷ್ಟು ಮಡದಿಯ ಕೈಗೆ ಕೊಟ್ಟು, ಉಳಿದುದನ್ನು ವಿದೇಶದ ಖರ್ಚಿಗೆಂದು ಮುಡಿಪಾಗಿಡುತ್ತಿದ್ದರು. ಪ್ರಾಧ್ಯಾಪಕರಾದ ನಂತರವೂ ಹಿಂದಿನ ಮನೆಯನ್ನು ಬದಲಾಯಿಸಲಿಲ್ಲ. ಎಷ್ಟಿದ್ದ ರಷ್ಟರಿಂದಲೇ ಸಂಸಾರ ನಡೆಸುವ ಕಲೆ ರಮಾಬಾಯಿಯವರಿಗೆ ರಕ್ತಗತ ವಾಗಿತ್ತು. ಬಡತನದಲ್ಲಿ ಬೆಳೆದ ಹೆಣ್ಣಾದ್ದರಿಂದ ಅವರಿಗೆ ಖರ್ಚಿನ ದಾರಿಯೂ ಗೊತ್ತಿರಲಿಲ್ಲ, ಆಸೆ ಆವಶ್ಯಕತೆಗಳೂ ಇರಲಿಲ್ಲ. ಪತಿಯ ಪ್ರಯತ್ನದಿಂದಾಗಿ ಅವರು ಅಲ್ಪಸ್ವಲ್ಪ ಓದುಬರಹ ಕಲಿತುಕೊಂಡಿದ್ದರು. ತಮ್ಮ ಪತಿ ಮಹಾವಿದ್ವಾಂಸರೆಂಬುದನ್ನವರರಿಯರು. ಪತಿಪರಾಯಣೆಯಾದ ಅವರಿಗೆ ಅಂಬೇಡ್ಕರ್ ಬರಿಯ ಮಾನವರಲ್ಲ, ದೇವರು. ಗ್ರಂಥ ಪಾರಾಯಣದಲ್ಲಿ ಸದಾ ಮಗ್ನರಾಗಿರುತ್ತಿದ್ದ ಪತಿಯ ಬಗೆಗೆ ಅವರೆಂದೂ ಬೇಸರಗೊಂಡವರಲ್ಲ. ಗಂಡನ ಅಣ್ಣ ತೀರಿಕೊಂಡನಂತರ ಅವರ ಸಂಸಾರದ ಭಾರವೂ ತಮ್ಮ ಮೇಲೆ ಬಿದ್ದಾಗ ಅವರು ಗೊಣಗಲಿಲ್ಲ. ತಂಟೆತಕರಾರುಗಳಿಲ್ಲದೆ ಅತ್ಯಂತ ಶಾಂತಿಯಿಂದ ಎರಡು ಸಂಸಾರಗಳನ್ನು ನಡಸಿದ ಯಶಸ್ಸು ಅವರಿಗೆ ಸಲ್ಲಬೇಕು. ದೇವರು ದಿಂಡರಲ್ಲಿ ಅವರಿಗೆ ಅಪಾರ ಶ್ರದ್ಧೆ. ತಮಗೆ ದೇವರಲ್ಲಿ ನಂಬಿಕೆಯಿಲ್ಲದಿದ್ದರೂ ಗಂಡ ಮಾತ್ರ ಅವರ ಪೂಜಾಪ್ರಾರ್ಥನೆಗಳಿಗೆ ಅಡ್ಡಿಯೊಡ್ಡುತ್ತಿರಲಿಲ್ಲ. ಪತಿ ವಿದೇಶದಲ್ಲಿದ್ದಾಗಲಂತೂ ದೈವಶ್ರದ್ಧೆಯೇ ಅವರನ್ನು ಬದುಕಿಸಿತು.

ಅಂಬೇಡ್ಕರ್ ಅಮೆರಿಕೆಯಿಂದ ಹಿಂದಿರುಗಿದನಂತರ ರಮಾಬಾಯಿ ಒಂದು ಗಂಡುಮಗುವನ್ನು ಹೆತ್ತರು. ಅವನ ಹೆಸರು ಗಂಗಾಧರ್. ನಾಲ್ಕೈದು ತಿಂಗಳೊಳಗೆ ಆ ಮಗು ಸಹ ಮೊದಲ ಮಗುವಿನ ದಾರಿ ಹಿಡಿಯಿತು. ಮೂರನೆಯ ಮಗು ಯಶವಂತನನ್ನು ತುಂಬ ಜಾಗರೂಕತೆಯಿಂದ ಪೋಷಿಸಿ ದರು. ಅವನು ಸಹ ಆಗಾಗ್ಗೆ ಖಾಯಿಲೆಯಿಂದ ನರಳುತ್ತಿದ್ದನು. ಆ ವಿಷಯ ವನ್ನು ಸದಾ ವ್ಯಾಸಂಗಾಸಕ್ತರಾಗಿರುತ್ತಿದ್ದ ಪತಿಗೆ ಸತಿ ತಿಳಿಸುತ್ತಿರಲಿಲ್ಲ. ತಾವೇ ಆಸ್ಪತ್ರೆಯಿಂದ ಮದ್ದು ತಂದು ಅನುಪಾನ ಮಾಡುತ್ತಿದ್ದರು. ಅವರು ದೊಡ್ಡ ವಿದ್ಯಾವತಿಯಲ್ಲವಾದರೂ, ಆಧುನಿಕ ಫ್ಯಾಷನ್ ಬಲ್ಲವರಲ್ಲವಾದರೂ ಗಂಡನಿಗೆ

ಭಾರವಾಗದೆ ಅವರಿಗೆ ನೆರಳಾಗಿ. ತಾಯಿಯಾಗಿ. ದಾಸಿಯಾಗಿ ತಮ್ಮ ಬಾಳನ್ನು ತೇದರು. ಅವರ ಯಶಸ್ಸಿಗೆ ಕಾರಣರಾದರು.

ತಾವು ಉಳಿಸಿಕೊಂಡಿದ್ದ ಹಣದ ಜತೆಗೆ. ಹಳೆಯ ಮಿತ್ರ ನವಲ್ ಭಾತೇನಾ ಅವರಿಂದ ಐದು ಸಾವಿರ ರೂಪಾಯಿ ಸಾಲ ತೆಗೆದುಕೊಂಡು ಅವರು ಲಂಡನ್ನಿಗೆ ಹೊರಡಲು ಸಿದ್ಧರಾದರು. ಸಾಹು ಮಹಾರಾಜರ ದ್ರವ್ಯ ಸಹಾಯದಿಂದ ಮಡದಿಯ ಬಳಿ ಕೊಂಚ ಹಣ ಬಿಡಲಸುಕೂಲವಾಯಿತು. 1920ರ ಆಗಸ್ಟ್ ತಿಂಗಳಲ್ಲಿ ಲಂಡನ್ ತಲುಪಿದಕೂಡಲೇ ತಮ್ಮ ವ್ಯಾಸಂಗ ವನ್ನು ಪುನರಾರಂಭಿಸಿದರು. ಕಾರ್ಲ್‌ಮಾರ್ಕ್ಸ್. ಮೆಜಿನಿ. ಲೆನಿನ್ ಮತ್ತು ಸಾವರ್‌ಕರ್ ಅವರ ಜ್ಞಾನತೃಷೆಯನ್ನು ಪರಿಹರಿಸಿ. ಅವರ ವಿದ್ವತ್ತನ್ನು ಪೋಷಿಸಿದ, ಜಗತ್ತಿನ ಬೃಹತ್ ಜ್ಞಾನಭಂಡಾರವಾದ ಬ್ರಿಟಿಷ್ ವಸ್ತು ಸಂಗ್ರಹಾಲಯ ಅಂಬೇಡ್ಕರ್‌ರ ನಿತ್ಯ ಯಾತ್ರಾಸ್ಥಳವಾಯಿತು. ಬೆಳಗಿನ ಎಂಟು ಗಂಟೆಯಿಂದ ಸಂಜೆಯ ಐದು ಗಂಟೆಯವರೆಗೆ ಅವರಲ್ಲಿಂದ ಕದಲುತ್ತಿರಲಿಲ್ಲ. ಹಣ ಕಾಲಗಳನ್ನುಳಿಸುವ ಸಲುವಾಗಿ ಅವರು ಮಧ್ಯಾಹ್ನದ ಊಟವನ್ನು ಖೋತಾ ಮಾಡಿದರು. ಕಾವಲುಗಾರ ಕಿಟಕಿಗಳನ್ನು ಮುಚ್ಚಿ ಬಂದು ಎಚ್ಚರಿಸುವ ತನಕ ಅವರು ಮೈಮರೆತು ತಮ್ಮ ಜಾಗದಲ್ಲಿ ಕುಳಿತಿರುತ್ತಿದ್ದರು. ವಸ್ತು ಸಂಗ್ರಹಾಲಯದ ಜತೆಗೆ ಅವರು ಆಗಾಗ್ಗೆ ಇಂಡಿಯಾ ಆಫೀಸ್ ಮತ್ತು ವಿಶ್ವವಿದ್ಯಾನಿಲಯದ ಗ್ರಂಥಾಲಯಗಳಿಗೂ ದಾಳಿಮಾಡುತ್ತಿದ್ದರು.

ಅವರಿಳಿದುಕೊಂಡಿದ್ದ ಮನೆಯ ಯಜಮಾನಿ ಜಿಪ್ಸುಣ. ಅವಳು ಬೆಳಗಿನ ತಿಂಡಿಗೆ ಕೊಡುತ್ತಿದ್ದದ್ದು ಒಂದು ಚೂರು ಮೀನು. ಒಂದು ಕಪ್ಪು ಟೀ ಮತ್ತು ಅಂಗೈಯಗಲ ರೊಟ್ಟಿ. ಸಂಜೆಯ ಊಟವೂ ಅಷ್ಟೇ ಮಿತಿಯಲ್ಲಿರುತ್ತಿತ್ತು. ಅವರೆಲ್ಲಿಗೇ ಹೋಗಲಿ ನಡೆದುಕೊಂಡೇ ಮನೆಗೆ ಬರುತ್ತಿದ್ದದ್ದು. ಮನೆಯಲ್ಲಿ ಊಟ ಮುಗಿಯುವುದೆ ತಡ. ಪುಸ್ತಕ ತೆರೆಯುತ್ತಿದ್ದರು. ರಾತ್ರಿ ಹತ್ತು ಗಂಟೆ ಹೊತ್ತಿಗೆ ಹಸಿವಾಗುತ್ತಿತ್ತು. ಹಪ್ಪಳ ಸುಟ್ಟು ತಿಂದು. ಒಂದು ಕಪ್ಪು ಟೀ ಮಾಡಿಕೊಂಡು ಕುಡಿದು. ಮತ್ತೆ ಜ್ಞಾನಸ್ನಾನಕ್ಕಣಿಯಾಗುತ್ತಿದ್ದರು. ನಟ್ಟಿರುಳು ಕಳೆಯುವವರೆಗೂ ಹೀಗೆಯೇ ಜಾಗರಣೆ ನಡೆಯುತ್ತಿತ್ತು.

ಶಿಸ್ತು ಸಂಯಮಗಳ ಅಭ್ಯಾಸಕ್ಕೆ ಮಿತವ್ಯಯ ಮತ್ತು ಕಾಯಕತತ್ತ್ವಗಳ ಅನುಷ್ಠಾನವೇ ಮೂಲವೆಂಬುದನ್ನು ಅಂಬೇಡ್ಕರ್ ಅವರು ಮೊದಲೇ

ಅರಿತಿದ್ದುದರಿಂದ ಲಂಡನ್ನಿನ ಜೀವನ ಕಠಿಣವಾಗಿ ತೋರಲಿಲ್ಲ. ತಿಂಗಳಿಗೆ ಎಂಟು ಪೌಂಡುಗಳು ಸಾಕಾಗುತ್ತಿದ್ದವು. ಯಾವ ವಿಧವಾದ ಮೋಜೂ ಅವರ ಬಳಿ ಸುಳಿಯುತ್ತಿರಲಿಲ್ಲ.

ಬಿಡುವಿಲ್ಲದ ವ್ಯಾಸಂಗ ಸಂಶೋಧನೆಗಳ ನಡುವೆಯೂ ಅವರು ದಲಿತ ಜನಾಂಗದ ಸಮಸ್ಯೆಗಳನ್ನು ಕುರಿತು ಆಲೋಚಿಸುತ್ತಿದ್ದರು. ಇಂಡಿಯಾದಲ್ಲಿ ಅಸ್ಪೃಶ್ಯರ ಏಳ್ಗೆಗಾಗಿ ಜರುಗುತ್ತಿದ್ದ ಕಾರ್ಯಕ್ರಮಗಳನ್ನು ತಿಳಿದುಕೊಳ್ಳು ತ್ತಿದ್ದರು. ಆ ಕಾರ್ಯಕ್ರಮಗಳ ವ್ಯವಸ್ಥೆಯಲ್ಲಿ ಆಸಕ್ತರಾದ ಕಾರ್ಯಕರ್ತರಿಗೆ ಲಂಡನ್ನಿನಿಂದಲೇ ಮಾರ್ಗದರ್ಶನ ನೀಡುತ್ತಿದ್ದರು. ಮೂಕನಾಯಕ ಪತ್ರಿಕೆಯನ್ನು ಮರೆತಿರಲಿಲ್ಲ. ಮಾಂಟೆಗೊ ಮೊದಲಾದ ಆಂಗ್ಲ ನಾಯಕರನ್ನು ಭೇಟಿಮಾಡಿ, ಅಸ್ಪೃಶ್ಯರ ಸಮಸ್ಯೆಗಳನ್ನು ಪರಿಚಯಮಾಡಿಕೊಡುತ್ತಿದ್ದರು. ತಮ್ಮ ಮತ್ತು ಅಣ್ಣನ ಮಕ್ಕಳ ಶಿಕ್ಷಣದ ಬಗ್ಗೆ ಆಗಾಗ್ಗೆ ಸಲಹೆ ನೀಡುತ್ತಿದ್ದರು. 1919 ನೆಯ ಇಸವಿಯಲ್ಲಿ ಜಾರಿಗೆ ಬಂದ ಕಾನೂನು ಮೊಟ್ಟಮೊದಲಿಗೆ ನಿಮ್ನ ವರ್ಗದ ಜನರ ಅಸ್ತಿತ್ವವನ್ನು ಗುರುತಿಸಿ, ಕೇಂದ್ರ ಮತ್ತು ಪ್ರಾಂತ ಶಾಸನ ಸಭೆಗಳಿಗೆ ಕೆಲವು ಸದಸ್ಯರನ್ನು ನಾಮಕರಣ ಮಾಡುವ ಸೌಲಭ್ಯವನ್ನು ಕಲ್ಪಿಸಿತು. ಆದರೂ ಅಷ್ಟರಿಂದಲೇ ನಿಮ್ನ ಜನಾಂಗದ ಸರ್ವಾಂಗೀಣಾಭಿವೃದ್ಧಿ ಕ್ಷಿಪ್ರವಾಗಿ ಕೈಗೂಡುತ್ತದೆಂಬುದನ್ನು ಅವರು ತಳ್ಳಿ ಹಾಕಿದರು.

ಅಂಬೇಡ್ಕರ್ ಅವರ ಚಿತ್ತೈಕಾಗ್ರತೆ ಮತ್ತು ಬೌದ್ಧಿಕ ಸಾಮರ್ಥ್ಯಗಳು ಅತ್ಯದ್ಭುತವೆಂಬುದಕ್ಕೆ ಅವರು ಎಂ.ಎಸ್‌ಸಿ. ಮತ್ತು ಡಾಕ್ಟೊರೇಟ್ ಪದವಿಗಳಿಗಾಗಿ ಸಿದ್ಧಪಡಿಸಿದ ಮಹಾನಿಬಂಧಗಳೇ ಸಾಕ್ಷಿಯಾಗಿವೆ. ಈ ಸಿದ್ಧತೆಯ ಜತೆಗೆ ಕಾನೂನು ವ್ಯಾಸಂಗವನ್ನು ಮುಂದುವರಿಸುತ್ತಿದ್ದರೆಂಬು ದನ್ನು ಮರೆಯಬಾರದು. 1921ರ ಜೂನ್ ತಿಂಗಳಲ್ಲಿ ಎಂ.ಎಸ್‌ಸಿ. ಪದವಿ ಗೆಂದು ಸಾದರಪಡಿಸಿದ ಪ್ರಬಂಧದಲ್ಲಿ ಅವರು ಬ್ರಿಟಿಷ್ ಭಾರತದ ಕೇಂದ್ರ ಸರ್ಕಾರ ಪ್ರಾಂತ್ಯಗಳಿಗೆ ನೀಡುತ್ತಿದ್ದ ಆರ್ಥಿಕ ಸಹಾಯವನ್ನೂ ಅದರ ವಿಕೇಂದ್ರೀಕರಣದ ಅಗತ್ಯತೆಯನ್ನೂ ಕುರಿತು ಚರ್ಚಿಸಿದರು. 1922ರ ಅಕ್ಟೋಬರ್ ತಿಂಗಳಲ್ಲಿ ಬರೆದು ಮುಗಿಸಿದ 'ರೂಪಾಯಿಯ ಸಮಸ್ಯೆ' ಎಂಬ ಮಹಾನಿಬಂಧ ಅವರಿಗೆ ಅಂತರರಾಷ್ಟ್ರೀಯ ಖ್ಯಾತಿಯನ್ನು ತಂದುಕೊಟ್ಟಿತು. ಅವರು ಅದರಲ್ಲಿ ಭಾರತದ ನಾಣ್ಯ ಪದ್ಧತಿಯನ್ನೂ ವಿನಿಮಯ ನೀತಿಯನ್ನೂ ಕೂಲಂಕಷವಾಗಿ ಪರಿಶೀಲಿಸಿದರು. ಆ ಸಂಬಂಧವಾಗಿ ಮುಂದಿನ ದಿನಗಳಲ್ಲಿ

ರಚನೆಗೊಂಡ ಸಾರ್ವಭೌಮ ಮಂಡಲಿಗಳು ಅಂಬೇಡ್ಕರ್ ಅವರ ಅಭಿಪ್ರಾಯಗಳನ್ನು ಸ್ವಾಗತಿಸುತ್ತಿದ್ದವು. ಲಂಡನ್ ವಿಶ್ವವಿದ್ಯಾಲಯಕ್ಕೆ ನಿಬಂಧವನ್ನೊಪ್ಪಿಸಿ, ಕಾನೂನು ಪರೀಕ್ಷೆ ಮುಗಿಸಿ, 1922ರ ಕೊನೆಯಲ್ಲಿ ಜರ್ಮನಿಯ ಬಾನ್ ವಿಶ್ವವಿದ್ಯಾನಿಲಯಕ್ಕೆ ಹೋದರು. ಅಲ್ಲಿಗೆ ಹೋದ ಮೂರ್ನಾಲ್ಕು ತಿಂಗಳಲ್ಲಿ, ಅವರ ನಿಬಂಧದ ಬಗ್ಗೆ ಚರ್ಚಿಸುವ ಸಲುವಾಗಿ, ಕೂಡಲೇ ಬರುವಂತೆ ಅವರ ಪ್ರಾಧ್ಯಾಪಕರಾದ ಎಡ್ವಿನ್ ಕಾನನ್ ಅವರು ಪತ್ರ ಬರೆದಿದ್ದುದರಿಂದ ಅಂಬೇಡ್ಕರ್ ಅನಿವಾರ್ಯವಾಗಿ ಹಿಂದಿರುಗಬೇಕಾಯಿತು. ಅವರ ಸಿದ್ಧಾಂತಗಳು ಸರಿಯಾಗಿದ್ದರೂ, ವಾದ ಸರಣಿಯನ್ನು ಬದಲಾಯಿಸಬೇಕೆಂದು ಅವರ ನಿಬಂಧವನ್ನು ಪರಿಶೀಲಿಸಿದ ವಿದ್ವಾಂಸರು ಅಭಿಪ್ರಾಯ ವ್ಯಕ್ತಪಡಿಸಿದ್ದರು. ಅಂಬೇಡ್ಕರ್ ಅವರು ಸಾರ್ವಭೌಮ ಸರ್ಕಾರವನ್ನು ಕುರಿತು ಮಾಡಿದ್ದ ಉಗ್ರ ಟೀಕೆಗಳು ಆ ವಿದ್ವಾಂಸರಿಗೆ ಕ್ರಾಂತಿಕಾರಕವಾಗಿ ಕಂಡುಬಂದಿದ್ದುದರಿಂದ, ಅದನ್ನು ತೆಗೆಯಬೇಕೆಂದು ಸಲಹೆಮಾಡಿದ್ದರು. ಪ್ರಗತಿಗಾಮಿಗಳಾದ ಹೆರಾಲ್ಡ್ ಲಾಸ್ಕಿಯಂಥ ಪ್ರಾಧ್ಯಾಪಕರು ಸಹ ಅಂಬೇಡ್ಕರ್ ವಿದ್ಯಾರ್ಥಿ ಸಂಘವೊಂದರಲ್ಲಿ ಓದಿದ ಲೇಖನವನ್ನು ಕೇಳಿದಾಗ, ಅವರನ್ನು ಕ್ರಾಂತಿಕಾರಿ ಎಂದು ಕರೆದಿದ್ದರು.

ಕೈಯಲ್ಲಿದ್ದ ದುಡ್ಡೆಲ್ಲ ಕರಗಿಹೋದದ್ದರಿಂದ, ತಮ್ಮ ಕುಟುಂಬ ಹಣದ ಮುಗ್ಗಟ್ಟಿನಿಂದಾಗಿ ಕಷ್ಟಕ್ಕೊಳಗಾಗಿದ್ದುದರಿಂದ ಅವರು ಬಹುಕಾಲ ಲಂಡನ್ನಿನಲ್ಲಿ ನಿಲ್ಲಲಾಗಲಿಲ್ಲ. 1923ರ ಏಪ್ರಿಲ್ ತಿಂಗಳಲ್ಲಿ ಮುಂಬಯಿಗೆ ಹಿಂದಿರುಗಿದರು. ಕೆಲವು ತಿಂಗಳಲ್ಲಿಯೇ ತಮ್ಮ ನಿಬಂಧವನ್ನು ಪರಿಷ್ಕರಿಸಿ ಲಂಡನ್ ವಿಶ್ವವಿದ್ಯಾನಿಲಯಕ್ಕೆ ರವಾನಿಸಿದರು. ವಿಶ್ವವಿದ್ಯಾನಿಲಯ ಅದಕ್ಕೆ ತನ್ನ ಅಂಗೀಕಾರ ಮುದ್ರೆಯನ್ನೊತ್ತಿ, ಡಿ.ಎಸ್‌ಸಿ. ಪದವಿ ನೀಡಿತು. ರೂಪಾಯಿ ಪೌಂಡುಗಳ ಸಂಬಂಧ ನಿರ್ಣಯದಲ್ಲಿ ಆಂಗ್ಲರಿಗಾಗಿದ್ದ ಲಾಭವನ್ನೂ ಭಾರತೀಯರಿಗಾಗಿದ್ದ ನಷ್ಟವನ್ನೂ ಸ್ಪಷ್ಟಪಡಿಸುವುದೇ ಆ ನಿಬಂಧದ ಉದ್ದೇಶವಾಗಿತ್ತು. ಆಗಿನ ಕಾಲಕ್ಕೆ ಅವರಷ್ಟು ವಿದೇಶೀಯ ಪದವಿಗಳನ್ನು ಪಡೆದಿದ್ದ, ಅವರಷ್ಟು ವಿದ್ವತ್ತನ್ನು ಸಂಪಾದಿಸಿದ್ದ ಯುವಕರು ಭರತಖಂಡದಲ್ಲಿಯೇ ಅಪರೂಪವೆಂದು ಹೇಳಿದರೆ ತಪ್ಪಾಗಲಾರದು.

## ೩. ಸಾಧನೆ

ಭಾರತಕ್ಕೆ ಮರಳಿದನಂತರ ವಕೀಲವೃತ್ತಿಯನ್ನಾರಂಭಿಸುವುದೆಂದೂ, ಜತೆಗೆ ತಮ್ಮ ಬಾಳಿನ ಏಕೈಕ ಗುರಿಯಾದ ಅಸ್ಪೃಶ್ಯರ ಉದ್ಧಾರಕಾರ್ಯವನ್ನು ಮುಂದುವರಿಸುವುದೆಂದೂ ಅಂಬೇಡ್ಕರ್ ತೀರ್ಮಾನಿಸಿದರು. ತಮ್ಮ ಪೋಷಕರಂತಿದ್ದ ನವಲ್ ಭಾತೇನರು ಕೊಟ್ಟ ಹಣದಿಂದ ಸನ್ನದು ಪಡೆದು, 1923ರ ಜೂನ್ ತಿಂಗಳಲ್ಲಿ ವಕೀಲರಾದರು. ಅಹಿತವಾದ ಪರಿಸರದಲ್ಲಿ ಸವರ್ಣೀಯರ ನಡುವೆ ಅಸ್ಪೃಶ್ಯನೊಬ್ಬ ವಕೀಲಿ ವೃತ್ತಿ ನಡೆಸುವುದು ಸಾಹಸ ಕಾರ್ಯವೇ ಸರಿ. ಪ್ರಾರಂಭದಲ್ಲಿ ಪ್ರಾಯೋಗಿಕಾನುಭವವಿರದಿದ್ದರೂ, ಪಾಂಡಿತ್ಯ ಮತ್ತು ಕಾಯಕ ಶ್ರದ್ಧೆಗಳಿಂದಾಗಿ ಯಶಸ್ಸುಗಳಿಸಬಹುದೆಂಬ ಆತ್ಮಪ್ರತ್ಯಯ ಅವರಲ್ಲಿ ಅಪಾರವಾಗಿತ್ತು. ವಕೀಲಿ ವೃತ್ತಿಯಲ್ಲಿಯೂ ನ್ಯಾಯಾಚರಣೆ ಮತ್ತು ಧರ್ಮಾನುಷ್ಠಾನಗಳು ಸಾಧ್ಯವೆಂಬುದನ್ನು ತೋರಿಸಿ ಕೊಡುವ ಹಂಬಲ ಅವರದು. ಸುಲಿಗೆ ಮತ್ತು ಜಿಗಣೆತನ ಅವರಿಗೆ ವಿದೇಶೀಯ. ಕಕ್ಷಿದಾರರ ಆರ್ಥಿಕ ಚೈತನ್ಯವನ್ನು ಗಮನದಲ್ಲಿರಿಸಿಕೊಂಡು ತಮಗೆ ಸಲ್ಲಬೇಕಾದ ರುಸುಂ ಪಡೆಯುತ್ತಿದ್ದರು. ಅವರ ಕಚೇರಿಯಲ್ಲಿ ಸಾಮಾನ್ಯವಾಗಿ ಬಡವರೂ ಅಸ್ಪೃಶ್ಯರೂ ಮುತ್ತಿಕೊಂಡಿರುತ್ತಿದ್ದರು. ತೀರ ಬಡವರಿಂದ ಒಂದು ಕಾಸೂ ನಿರೀಕ್ಷಿಸುತ್ತಿರಲಿಲ್ಲ. ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ನಡುವೆ ನಡೆಯುತ್ತಿದ್ದ ಮೊಕದ್ದಮೆಗಳಲ್ಲೆಲ್ಲ ಅವರು ಬ್ರಾಹ್ಮಣೇತರರ ಪರವಾಗಿ ವಕಾಲತ್ತು ವಹಿಸಿ, ಜಯ ಪಡೆಯುತ್ತಿದ್ದರು.

ಅವರು ಸಮಾಜಸೇವಾರಂಗಕ್ಕೆ ಧುಮುಕುವುದು ತುಸು ತಡವಾದರೂ, ಅಸ್ಪೃಶ್ಯತಾ ನಿವಾರಣೆಯ ಸಂಬಂಧವಾಗಿ ನಡೆಯುತ್ತಿದ್ದ ಪ್ರಯತ್ನಗಳನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡುತ್ತಿದ್ದರು. ದೇವಾಲಯ ಧರ್ಮಶಾಲೆಗಳು ಕೋರ್ಟುಕಚೇರಿ ಶಿಕ್ಷಣ ಸಂಸ್ಥೆಗಳು ಕೆರೆಬಾವಿ ಆಸ್ಪತ್ರೆಗಳು ಇವೇ ಮೊದಲಾದ ಸಾರ್ವಜನಿಕ ಸ್ಥಾನಗಳ ಸೌಲಭ್ಯಗಳನ್ನು ನಿಮ್ನ ವರ್ಗದ ಜನ ನಿರಾತಂಕವಾಗಿ ಪಡೆಯುವಂತಿರಬೇಕೆಂಬ ವಿಷಯದ ಬಗ್ಗೆ ಶಾಸನ ಸಭೆ ಪುರಸಭೆಗಳಲ್ಲಿ ಚರ್ಚೆ ನಡೆದು, ನಿರ್ಣಯಗಳಾಗುತ್ತಿದ್ದುವು. ನಿಮ್ನ ವರ್ಗದ ನ್ಯಾಯಕರು ಮಾತ್ರವಲ್ಲ ಕೆಲವು ಸವರ್ಣೀಯ ರಾಜಕೀಯ ಮುಖಂಡರೂ ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ಆಂದೋಳನ ನಡೆಸುತ್ತಿದ್ದರು. ಇವರಲ್ಲಿ ಘೊಲಪ್, ಎಸ್. ಕೆ. ಬೋಳೆ, ಆನಂದರಾವ್ ಸರ್ವೆ ಮುಂತಾದವರು ಮುಖ್ಯರು. ದಲಿತ ಜನಾಂಗದ ಉದ್ಧಾರ ಹಿಂದೂ ಸಂಘಟನೆಗೆ ಆಧಾರವೆಂದು ಸಾವರ್‌ಕರ್‌ರ ಖಚಿತಾಭಿಪ್ರಾಯವಾಗಿತ್ತು. ಗಾಂಧಿಯವರು ಸಹ ಅಸ್ಪೃಶ್ಯತೆ ಹಿಂದೂ ಮತಕ್ಕಂಟಿಕೊಂಡಿರುವ ಕಳಂಕವೆಂದೂ ಅದು ನಿರ್ಮೂಲವಾಗುವ ತನಕ ಹಿಂದೂ ಧರ್ಮಕ್ಕೆ ಭವಿಷ್ಯವಿಲ್ಲವೆಂದೂ, ತಮಗೆ ಪುನರ್ಜನ್ಮವಿರುವುದಾದರೆ ಅಸ್ಪೃಶ್ಯನಾಗಿ ಹುಟ್ಟುವ ಬಯಕೆಯಿದೆಯೆಂದೂ ಮೇಲಿಂದ ಮೇಲೆ ಘೋಷಿಸುತ್ತಿದ್ದರು. ಸಾವರ್‌ಕರ್ ಹೊರತಾಗಿ ಉಳಿದವರು ಸಮಾಜ ಸುಧಾರಕರಾಗಿದ್ದರೇ ಹೊರತು, ಕ್ರಾಂತಿಕಾರರಾಗಿರಲಿಲ್ಲ. ಸಮಾಜದ ಪುನಸ್ಸೃಷ್ಟಿ ಕ್ರಾಂತಿ ಮಾರ್ಗದಿಂದ ಸಾಧ್ಯವೇ ಹೊರತು, ಸುಧಾರಣಾ ಮಾರ್ಗದಿಂದಲ್ಲವೆಂಬ ಭಾವನೆ ಅಂಬೇಡ್ಕರ್ ಅವರ ಮನಸ್ಸಿನಲ್ಲಿ ರೂಪುದೋರುತ್ತಿತ್ತು.

ಕಾಂಗ್ರೆಸ್ಸಿನ ತಂತ್ರದಿಂದ ತಮ್ಮ ಜನರ ಏಳ್ಗೆ ಸಾಧ್ಯವಾಗದೆಂದು ತಿಳಿದು, ಕೇಂದ್ರ ಸಂಸ್ಥೆಯೊಂದನ್ನು ಸ್ಥಾಪಿಸುವ ಸಾಧ್ಯತೆಯನ್ನು ಕುರಿತು ಚರ್ಚಿಸುವ ಸಲುವಾಗಿ ಅಂಬೇಡ್ಕರ್ 1924ನೆಯ ಇಸವಿ ಮಾರ್ಚ್ 9 ರಂದು ರಾಜಕೀಯ ಮುಖಂಡರ ಸಭೆ ಕರೆದರು. ಬಹಿಷ್ಕೃತ ಹಿತಕಾರಿಣಿ ಸಭೆಯ ಹುಟ್ಟಿಗೆ ಅದು ನಿಮಿತ್ತವಾಯಿತು. ಚಿಮನ್‌ಲಾಲ್ ಹರಿಲಾಲ್ ಸೆಟಲ್‌ವಾಡ ಅವರು ಅಧ್ಯಕ್ಷರಾಗಿಯೂ, ಅಂಬೇಡ್ಕರ್ ಅವರು ಕಾರ್ಯಾಧ್ಯಕ್ಷರಾಗಿಯೂ, ಶಿವತರ್ಕರ್ ಕಾರ್ಯದರ್ಶಿಯಾಗಿಯೂ ಆಯ್ಕೆಗೊಂಡರು. ಶಿಕ್ಷಣ ಪ್ರಚಾರ, ವಿದ್ಯಾರ್ಥಿನಿಲಯ ಸ್ಥಾಪನೆ, ಸಾಂಸ್ಕೃತಿಕ ಕಾರ್ಯಕ್ರಮ, ಆರ್ಥಿಕ

ಪ್ರಗತಿ, ಕುಂದು ಕೊರತೆಗಳನ್ನು ಕುರಿತ ಮನವಿ, ಇವೇ ಮುಂತಾದ ಮಾರ್ಗಗಳ ಮೂಲಕದ ಅಸ್ಪೃಶ್ಯೋದ್ಧಾರ ಸಾಧನೆ ಆ ಸಭೆಯ ಗುರಿಯಾಗಿತ್ತು. ದಲಿತರಿಗೆ ರಾಜಕೀಯ ಮತ್ತು ಸಾಮಾಜಿಕ ಸಮಾನತೆಯನ್ನು ಸಂಪಾದಿಸಿಕೊಡುವಲ್ಲಿ ಅದು ಹಿಂದೆ ಬೀಳಲಿಲ್ಲ.

ಆರ್ತರಿಗಾಗಲೀ ಪತಿತರಿಗಾಗಲೀ ಅಥವಾ ಗುಲಾಮರಿಗಾಗಲೀ ಸ್ವಸಾಮರ್ಥ್ಯ ಸ್ವಪ್ರಯತ್ನಗಳಿಂದ ವಿಮೋಚನೆ ಸಾಧ್ಯವೇ ಹೊರತು ಅನ್ಯರ ಕೃಪೆಯಿಂದ ಸಾಧ್ಯವಾಗದೆಂಬ ಸಂಗತಿ ಅಂಬೇಡ್ಕರರಿಗೆ ಅಂಗೈ ಹುಣ್ಣಿನಂತೆ ಸ್ಪಷ್ಟವಾಗಿತ್ತು. ಅದು ಚಾರಿತ್ರಿಕ ಸತ್ಯವೂ ಅಹುದು. ಆತ್ಮಗೌರವವಿಲ್ಲದ, ಆತ್ಮೋದ್ಧಾರಾಸಕ್ತಿಯಿಲ್ಲದ ಜನರಿಗೆ ಪಾಶವಿಕ ಜೀವನವೆ ಗತಿಯೆಂದು ಸಾರಿದರು. ಅವರ ಹೃದಯದಲ್ಲಿ ಅನುಕಂಪವಿದ್ದರೂ, ಮಾತಿನಲ್ಲಿ ಖಾರ ವಿರುತ್ತಿತ್ತು. "ನಿಮ್ಮ ಬಾಡಿದ ಮೋರೆಯನ್ನು ನೋಡಿದಾಗ, ಸೊರಗಿದ ದನಿಯನ್ನು ಕೇಳಿದಾಗ ನನ್ನ ಎದೆ ಬಿರಿಯುತ್ತದೆ. ಸಹಸ್ರ ಸಹಸ್ರವರ್ಷಗಳಿಂದ ದಾರಿದ್ರ್ಯ ದುಃಖತಪ್ತರಾಗಿ ನರಳುತ್ತಿದ್ದೀರಿ. ಆದರೂ ಅಸಹಾಯ ಕತೆ ಅನಿವಾರ್ಯವೆಂದು ತಿಳಿದು ಲಜ್ಜಾಹೀನರಾಗಿ ಮುದುಡಿಕೊಂಡಿದ್ದೀರಿ. ನೀವು ಭ್ರೂಣಾವಸ್ಥೆಯಲ್ಲಿಯೇ ನಿಗತುಕೊಂಡಿದ್ದರೆ ಲೇಸಾಗುತ್ತಿತ್ತು. ಮೊದಲೇ ದುಃಖದಾರಿದ್ರ್ಯದಾಸ್ಯಗಳ ಭಾರದಿಂದ ಕುಸಿದಿರುವ ಭೂಮಿಗೆ ಜುಗುಪ್ಸಾವಹವೂ ಹೇಯವೂ ಆದ ಬಾಳಿನ ಮೂಲಕ ಹೊರೆಯಾಗುವಿರೇಕೆ ? ನೀವು ಚೈತನ್ಯಶಾಲಿಗಳಾಗಿ ಹೊಸ ಬದುಕಿಗೆ ಸಿದ್ಧವಾಗದಿದ್ದರೆ ಸಾಯುವುದೆ ಮೇಲು : ಸತ್ತು ತಿರೆಯ ಹೊರೆಯನ್ನಿಳಿಸುವುದು ಮೇಲು. ಸವರ್ಣೀಯನಂತೆ ಅವರ್ಣೀಯನೂ ಸಮಪ್ರಮಾಣದಲ್ಲಿ ಅಶನವಸನವಸತಿಗಳನ್ನು ಪಡೆಯ ಬೇಕಾದ್ದು ಆಜನ್ಮಸಿದ್ಧ ಹಕ್ಕು. ಸ್ವಾವಲಂಬನೆಯೇ ಗೌರವಯುತವಾದ ಬಾಳಿಗೆ ಆಧಾರವೆಂದರಿಯಿರಿ' ಎಂದವರು ನಿಮ್ನವರ್ಗದ ಜನರನ್ನುದ್ದೇಶಿಸಿ ಗರ್ಜಿಸುತ್ತಿದ್ದರು.

ಅಂಬೇಡ್ಕರ್ ಅವರು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗ ವಹಿಸಲಿಲ್ಲ, ನಿಜ. ಏಕೆಂದರೆ ಬ್ರಿಟಿಷರು ಭಾರತದಿಂದ ಕಾಲ್ತೆಗೆದನಂತರ ತಮ್ಮ ಪರಿಸ್ಥಿತಿ ಉತ್ತಮವಾಗುವುದಿಲ್ಲವೆಂದು ನಂಬಿಕೊಂಡಿದ್ದರು. ಆ ನಂಬಿಕೆ ಬುಡವಿಲ್ಲದ್ದಲ್ಲ. ಅಶೋಕ, ಹರ್ಷವರ್ಧನ, ಕೃಷ್ಣದೇವರಾಯ, ಶಿವಾಜಿಯ ರಂಥ ನಯಾಮಯರಾದ ರಾಜರ ಆಡಳಿತದಲ್ಲಿಯೂ ದಲಿತರ ಮುಕ್ತ

ವೇದನೆಯನ್ನು ಪರಿಹರಿಸಿದವರಿಲ್ಲ. ಅವರನ್ನು ದಾಸ್ಯ ದಾರಿದ್ರ್ಯಗಳಿಂದ ಬಿಡುಗಡೆ ಮಾಡಿದವರಿಲ್ಲವೆಂಬ ಪಾಠವನ್ನವರು ಭಾರತೀಯ ಇತಿಹಾಸದಿಂದ ಕಲಿತಿದ್ದರು. ಸವರ್ಣೀಯರು ನಂಬಿಕೆಗರ್ಹರಲ್ಲದ್ದರಿಂದ ಆಂಗ್ಲರನ್ನೊಲಿಸಿ ಕೊಂಡು ತಮ್ಮ ಕೋಮಿಗೆ ಸಾಧ್ಯವಾದಷ್ಟು ಸವಲತ್ತುಗಳನ್ನು ಪಡೆಯುವುದೇ ಅವರ ಹೋರಾಟದ ಉದ್ದೇಶವಾಗಿತ್ತು. ಪತ್ರಿಕೆಗಳ ಸಹಕಾರವಿಲ್ಲದೆ, ಹಣದ ಬೆಂಬಲವಿಲ್ಲದೆ, ರೈಲು, ಬಸ್ಸು, ಎತ್ತಿನ ಗಾಡಿಗಳಲ್ಲಿ ಊರೂರು ಅಲೆದು, ಸಭೆ ಸೇರಿಸಿ, ಸಿಂಹವಾಣಿಯಿಂದ ದಲಿತರಲ್ಲಿ ಜಾಗೃತಿಯುಂಟುಮಾಡಿದರು. ಮೊದಮೊದಲು ಸಭೆಗಳಿಗೆ ಜನ ಸೇರಿಸುವುದೇ ಕಷ್ಟವಾಗುತ್ತಿತ್ತು : ಬಂದ ನಾಲ್ಕಾರು ಜನ ಬೀಡಿ ಸೇದಿಕೊಂಡು ಹರಟೆ ಹೊಡೆಯುತ್ತಿದ್ದರು. ಆ ಜನರ ಜಡಸ್ವಭಾವ ಎಷ್ಟು ದಟ್ಟವಾಗಿತ್ತೆಂದರೆ, ತಿಳಿದವರಿಂದ ತಿಳಿವು ಪಡೆಯಲು ಸಹ ಅವರು ಸಿದ್ಧರಾಗಿರಲಿಲ್ಲ.

1925-26 ರಲ್ಲಿ ನಡೆದ ಎರಡು ಘಟನೆಗಳು ಅಂಬೇಡ್ಕರರ ಕ್ರೋಧಾಗ್ನಿಯನ್ನು ಸಹಜವಾಗಿ ಪ್ರಖರಗೊಳಿಸಿದುವು. ಅವುಗಳಲ್ಲೊಂದು ತಿರುವಾಂಕೂರು ಸಂಸ್ಥಾನದ ವೈಕಂ ಎಂಬ ಊರಿನಲ್ಲಿ ನಡೆದದ್ದು. ಆ ದಿನ ಊರಿನ ಒಂದು ಬೀದಿಯಲ್ಲಿ ಅಸ್ಪೃಶ್ಯರು ತಲೆಹಾಕುವಂತಿರಲಿಲ್ಲ ; ಬಂದದ್ದಾದರೆ ಚಿತ್ರಹಿಂಸೆಗೊಳಗಾಗುತ್ತಿದ್ದರು. ಆ ಪ್ರತಿಬಂಧಕ ನಿವಾರಣೆಗಾಗಿ ಪೆರಿಯಾರ್ ಎಂಬ ಹೆಸರಿಂದ ಪ್ರಸಿದ್ಧಿ ಪಡೆದಿದ್ದ ರಾಮಸ್ವಾಮಿ ನಾಯಕರ್ ಅವರ ನೇತೃತ್ವದಲ್ಲಿ ಸತ್ಯಾಗ್ರಹ ಚಳುವಳಿ ನಡೆಯಿತು. ಅದನ್ನು ಹತ್ತಿಕ್ಕುವ ಸಲುವಾಗಿ ಸಂಪ್ರದಾಯವಾದಿಗಳು ನಡೆಸಿದ ಕೂಟೋಪಾಯ ಹಿಂಸಾಕೃತ್ಯ ನಿಷ್ಫಲಗೊಂಡು ಅವರ್ಣೀಯರಿಗೆ ಅದ್ಭುತ ಜಯ ಲಭಿಸಿತು. ಮತ್ತೊಂದು ಘಟನೆ ನಡೆದದ್ದು ಮದ್ರಾಸಿನಲ್ಲಿ. ಮುರುಗೇಶನ್ ಎಂಬ ಅಸ್ಪೃಶ್ಯ ಯುವಕ ಹಿಂದೂ ದೇವಾಲಯಕ್ಕೆ ಹೋಗಲಾಗಿ, ಅವನನ್ನು ಬಂಧಿಸಿ, ಶಿಕ್ಷೆ ವಿಧಿಸಲಾಯಿತು. ಆಗಾಗ್ಗೆ ನಡೆಯುತ್ತಿದ್ದ ಇಂಥ ಘಟನೆಗಳು ಅಂಬೇಡ್ಕರ್‌ರ ಮನಸ್ಸನ್ನು ಕೆಡಿಸಿ, ಸವರ್ಣೀಯರ ಸಂಬಂಧವಾದ ಅಪನಂಬಿಕೆಯನ್ನು ದೃಢಗೊಳಿಸುತ್ತಿದ್ದವು.

ಮುಂಬಯಿ ವಿಭಾಗದ ಬ್ರಿಟಿಷ್ ಸೈನ್ಯದಲ್ಲಿ ಮಹರ್ ತುಕಡಿಯಿತ್ತಷ್ಟೆ. ಸಿಪಾಯಿದಂಗೆಯಲ್ಲಿ ಅವರು ಭಾಗವಹಿಸಿದರೆಂಬ ಕಾರಣದಿಂದ, ಯುದ್ಧಕಲೆ ಅವರಿಗೊಗ್ಗುವುದಿಲ್ಲವೆಂಬ ಸುಳ್ಳು ನೆಪವೆತ್ತಿ, ಸಾರ್ವಭೌಮ ಸರ್ಕಾರ ಕಾಲ ಕ್ರಮೇಣ ಅವರನ್ನು ಸೈನ್ಯದಿಂದ ದೂರವಿರಿಸಿ, ಆ ತುಕಡಿಯನ್ನೇ ವಜಾ

ಮಾಡಿತು. ನಿಮ್ನವರ್ಗದ ನಾಯಕರು ಸಹಜವಾಗಿಯೇ ಕ್ರುದ್ಧರಾದರು. ಕೋರೆಗಾಪ್ ಯುದ್ಧಸ್ಮಾರಕದ ಸನಿಹದಲ್ಲಿ ಪ್ರತಿವರ್ಷ ನಿಮ್ನಜನರ ಸಭೆ ನಡೆದು, ಪ್ರತಿಭಟನೆ ಅಭಿವ್ಯಕ್ತಗೊಳ್ಳುತ್ತಿತ್ತು. 1927 ರಲ್ಲಿ ನಡೆದ ವಾರ್ಷಿಕ ಸಭೆಯಲ್ಲಿ ಮಾತಾಡುತ್ತ ಅಂಬೇಡ್ಕರರು "ಆಂಗ್ಲಸೇನೆಗೆ ಸೇರುವುದಾಗಲೀ, ಅವರ ಪರವಾಗಿ ಯುದ್ಧ ಮಾಡುವುದಾಗಲೀ ಹೆಮ್ಮೆಯ ವಿಷಯವಲ್ಲ. ಸವರ್ಣೀಯರು ನಮ್ಮವರನ್ನು ತುಚ್ಛವಾಗಿ ಕಾಣುತ್ತಿದ್ದುದರಿಂದ. ನಮ್ಮವರಿಗೆ ಅನ್ಯ ಜೀವನಮಾರ್ಗವಿಲ್ಲದ್ದರಿಂದ ಸೈನಿಕತನ ಅನಿವಾರ್ಯವಾಗಿದೆ. ಸರ್ಕಾರಕ್ಕೆ ಪ್ರತಿಭಟನೆ ಸಲ್ಲಿಸುವ ಮೂಲಕ ನಾವು ಕಳೆದುಕೊಂಡಿರುವ ಹಕ್ಕನ್ನು ಮತ್ತೆ ಪಡೆಯಬೇಕಾಗಿದೆ" ಎಂದು ಗುಡುಗಿದರು.

ಸಮಾಜದಲ್ಲಿ ಅಂಬೇಡ್ಕರರ ಸ್ಥಾನಮಾನಗಳು ದಿನೇದಿನೇ ವರ್ಧಿಸುತ್ತಿದ್ದರೂ ಅವರ ತಂಗು ಜಾಗದಲ್ಲಿ ಮಾತ್ರ ಬದಲಾವಣೆ ಕಾಣಲಿಲ್ಲ. ಆಧುನಿಕ ಸೌಲಭ್ಯಗಳಿಲ್ಲದ, ನಲ್ಲಿ, ಸ್ನಾನಗೃಹ. ಕಕ್ಕಸುಗಳಿಲ್ಲದ ಹಿಂದಿನ ಕೋಣೆಮನೆಯಲ್ಲಿಯೇ ಅವರ ಸಂಸಾರ ಸಾಗುತ್ತಿತ್ತು. ಆ ಮನೆಯಲ್ಲಿ ಮೂರು ಅಂತಸ್ತುಗಳಿದ್ದುವು. ಒಂದೊಂದು ಅಂತಸ್ತಿನಲ್ಲಿಯೂ ಅನೇಕ ವಠಾರಗಳು. ಸರ್ವಾನುಭೋಗಕ್ಕೆಂದು ಎರಡೆರಡು ನಲ್ಲಿಗಳು ಮತ್ತು ಕಕ್ಕಸುಗಳು. ಆ ವಠಾರದಲ್ಲಿದ್ದವರೆಲ್ಲ ನಿಮ್ನವರ್ಗದ ಕಾರ್ಮಿಕರು. ಅಂಬೇಡ್ಕರರ ಕಚೇರಿ ಸನಿಹದಲ್ಲಿದ್ದ ಸಮಾಜಸೇವಾ ಸಂಸ್ಥೆಯ ಕಟ್ಟಡದ ಸಣ್ಣ ಕೋಣೆಯಲ್ಲಿತ್ತು. ಸುಪ್ರಸಿದ್ಧ ನ್ಯಾಯವಾದಿಗಳು, ರಾಜಕಾರಣಿಗಳು ಮತ್ತು ಸಮಾಜ ಸುಧಾರಕರು ಅವರ ಸಲಹೆ ಸಹಕಾರಗಳಿಗಾಗಿ ಅವರಿದ್ದಲ್ಲಿಗೆ ಬರುತ್ತಿದ್ದರು. ಅವರು ಅನಿರೀಕ್ಷಿತವಾಗಿ ಬಂದಾಗ ಅಂಬೇಡ್ಕರರು ಅರೆ ನಗ್ನರಾಗಿರುತ್ತಿದ್ದರು. ಮನೆಯಲ್ಲಾಗಲೀ ಕಚೇರಿಯಲ್ಲಾಗಲೀ ಬೆಂಚುವಿನಾ ಕುರ್ಚಿಗಳಿರುತ್ತಿರಲಿಲ್ಲ, ಒಂದು ದಿನ ಸಾಹು ಮಹಾರಾಜರು ಹಠಾತ್ತನೆ ಮನೆಗೆ ಬಂದಾಗ, ಅಂಬೇಡ್ಕರರು ಒಳಗೆ ಹೋಗಿ ಅಂಗಿಯನ್ನು ತಗುಲಿಸಿಕೊಂಡು ಮರಳಿದರು. ಮೆತ್ತೆಯಿಲ್ಲದ ಬೆಂಚೇ ಅವರಿಗೆ ಮಂಚವಾಗುತ್ತಿತ್ತು. ಎಷ್ಟೋಸಾರಿ ನಿರಾಶೆ ಕವಿದಾಗ ವರಾಂಡದ ಬೆಂಚುಗಳ ಮೇಲೊರಗಿಕೊಂಡು ಧ್ಯಾನಮಗ್ನರಾಗುತ್ತಿದ್ದರು ; ಇಲ್ಲವೆ ಆಕಾಶದ ನಕ್ಷತ್ರಗಳ ಕಡೆಗೆ ಕಣ್ಣಾಗುತ್ತಿದ್ದರು. ಅವರಂಥ ಮೇಧಾವಿಗಳು ಉತ್ತಮ ಕುಲದಲ್ಲಿ ಹುಟ್ಟಿದ್ದರೆ ಅವರ ಜೀವನ ವಿಧಾನ ತೀರ ಭಿನ್ನವಾಗುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

ಅಂಬೇಡ್ಕರರ ಕಿರಿಯ ಮಗ ರಾಜರತ್ನ. ಅವನು ಹುಟ್ಟಿದ್ದು 1928 ರ ಅವಧಿಯಲ್ಲಿ. ತಂದೆ ಅವನನ್ನು ತುಂಬ ಪ್ರೀತಿಸುತ್ತಿದ್ದರು. ಅವನಿಗಿಂತ ಮುಂಚೆ ಹೆಣ್ಣು ಮಗುವೊಂದು ಹುಟ್ಟಿ ತೀರಿಕೊಂಡಿತ್ತು. ಕಿರಿಯ ಮಗ ಹುಟ್ಟಿದನಂತರ ರಮಾಬಾಯಿಯವರ ಆರೋಗ್ಯ ಹದಗೆಟ್ಟಿತು. ಹವಾ ಬದಲಾವಣೆಯಾದರೆ ಆರೋಗ್ಯ ಕುದುರಬಹುದೆಂದು ಭಾವಿಸಿ ಪತಿ ಅವರನ್ನು ಮಕ್ಕಳೊಡನೆ ಬೇರೆ ಊರಿಗೆ ಕಳಿಸಿಕೊಟ್ಟರು. ಆ ಸಮಯದಲ್ಲಿ ಅವರೇ ಅಡುಗೆ ಮಾಡಿಕೊಳ್ಳುತ್ತಿದ್ದರಲ್ಲದೆ. ಬಂದ ಅತಿಥಿಗಳಿಗೂ ಮಾಡಿ ಬಡಿಸು ತ್ತಿದ್ದರು. ಒಂದು ದಿನ ಇಬ್ಬರು ಪರಿಚಯಸ್ಥರು ಸ್ವಂತ ವ್ಯವಹಾರಗಳಿಗೆ ಸಂಬಂಧಿಸಿದ ಸಮಾಲೋಚನೆಗಾಗಿ ಪರಸ್ಥಳದಿಂದ ಬಂದರು. ಬಂದವರೆ ವಕೀಲರ ಮನೆಯಲ್ಲಿ ತಳವೂರಿದರು. ಬೆಳಗ್ಗೆ ಅವರಿಗೆ ರೊಟ್ಟಿ ಕಾಫಿ ಮಾಡಿ ಕೊಟ್ಟು. ತಾವೂ ತೆಗೆದುಕೊಂಡು ಭೀಮರಾಯರು ಕೋರ್ಟಿಗೆ ಹೋದರು. ಸಂಜೆ ಕೋರ್ಟಿನಿಂದ ಹಿಂದಿರುಗಿದನಂತರ ಅಡುಗೆ ಮಾಡಿಕೊಂಡು ಅತಿಥಿ ಗಳಿಗಾಗಿ ಕಾಯುತ್ತಿದ್ದರು. ಅವರು ಊಟವನ್ನು ಸವಿಯುವಾಗ ಭಾವೀ ಮಹಾನಾಯಕರ ಪಾಕಕಲಾನೈಪುಣ್ಯವನ್ನು ನೆನೆದು ಬೆರಗಾಗುತ್ತಿದ್ದರು. ಅವರ ದೃಷ್ಟಿಯಲ್ಲಿ ಯಾವ ಕೆಲಸವೂ ಕೀಳಲ್ಲ ; ಮೇಲುಕೀಳುಗಳ ಭಾವನೆ ಅವರ ಜಾಯಮಾನಕ್ಕೆ ಹೊರತಾಗಿತ್ತು.

ಬರಬರುತ್ತ ಅಂಬೇಡ್ಕರರ ಸೇವಾಕ್ಷೇತ್ರ ವಿಶಾಲವಾಗತೊಡಗಿತು. ಅವರ ಶಕ್ತಿಸಾಮರ್ಥ್ಯಗಳು ವಾದನೈಪುಣ್ಯ ಮತ್ತು ಸ್ವತಂತ್ರ ವಿಚಾರಧಾರೆ ಸರ್ಕಾರದ ಮತ್ತು ದೇಶದ ಗಮನವನ್ನು ಸೆಳೆದುವು. ಸರ್ಕಾರ ಪುರಸಭೆ ಗಾಗಲೀ ಶಾಸನಸಭೆಗಾಗಲೀ ನಾಮಕರಣ ಮಾಡುವಾಗ ಅವರ ಹೆಸರು ಮರೆಯುವಂತಿರಲಿಲ್ಲ. 1927ರಲ್ಲಿ ಅವರು ಮುಂಬಯಿ ಶಾಸನಸಭೆಗೆ ನಾಮ ಕರಣಗೊಂಡಾಗ. ಅವರ್ಣೀಯ ಅಧ್ಯಾಪಕರು ದಾಮೋದರ ಸಭಾಂಗಣದಲ್ಲಿ ಸನ್ಮಾನ ಸಮಾರಂಭವನ್ನೇರ್ಪಡಿಸಿ. ಅವರಿಗೊಂದು ನಿಧಿ ಅರ್ಪಿಸಿದರು. ಅಂಬೇಡ್ಕರರು ಆ ನಿಧಿಯನ್ನು ಬಹಿಷ್ಕೃತ ಹಿತಕಾರಿಣಿ ಸಭೆಗೆ ವರ್ಗಾಯಿಸಿದರು. ಸೈಡೆನ್‌ಹ್ಯಾಮ್ ಕಾಲೇಜಿನ ಪ್ರಿನ್ಸಿಪಾಲ್ ಹುದ್ದೆ ಖಾಲಿಯಾದಾಗ ಅವರ ಲಕ್ಷ್ಯ ಆ ಕಡೆಗೆ ಹರಿಯಿತು. ಪ್ರಗತಿಪರ ದೃಷ್ಟಿಯಿದ್ದ ಪರಂಜಪೆಯಂಥ ವಿದ್ಯಾ ಸಚಿವರು ಸಹ ಅದ್ವಿತೀಯ ಅರ್ಹತೆಗಳನ್ನು ಪಡೆದಿದ್ದ ಅಂಬೇಡ್ಕರರನ್ನು ಪ್ರಿನ್ಸಿಪಾಲರಾಗಿ ನೇಮಿಸಲಾಗಲಿಲ್ಲ. ಆ ಬಗ್ಗೆ ಕಿರ್ಲೋಸ್ಕರ್ ನಡೆಸಿದ ಪ್ರಯತ್ನವೂ ಸಫಲವಾಗಲಿಲ್ಲ. ಎಲ್ಫಿನ್‌ಸ್ಟನ್ ಕಾಲೇಜಿನ ಪ್ರಾಧ್ಯಾಪಕ

ಹುದ್ದೆಗೆ ಅಂಬೇಡ್ಕರರನ್ನು ನೇಮಿಸಿಕೊಳ್ಳುವುದಾಗಿ ಪರಂಜಪೆ ಅವರಿಗೆ ತಿಳಿಸಿದರು. ಅಂಬೇಡ್ಕರರು ಅವರ ಔದಾರ್ಯವನ್ನು ಸವಿನಯವಾಗಿ ನಿರಾಕರಿಸಿದರು. ನೌಕರಿ ಸೇರಿದರೆ ಸಮಾಜಸೇವೆ ಕುಂಠಿತಗೊಳ್ಳಬಹುದೆಂಬ ಅಂಜಿಕೆಯೂ ಆ ನಿರಾಕರಣೆಯ ಹಿನ್ನೆಲೆಯಲ್ಲಿತ್ತು. ಆದರೆ ಒಪ್ಪೊತ್ತಿನ ಹುದ್ದೆಗಳನ್ನು ಸ್ವೀಕರಿಸುತ್ತಿದ್ದರು.

ಸಾರ್ವಜನಿಕ ಸ್ಥಳಗಳಲ್ಲಿ ಅಂತ್ಯಜರಿಗೆ ಪೂರ್ಣಪ್ರವೇಶಾವಕಾಶವಿರಬೇಕೆಂಬುದಾಗಿ ಶಾಸನಸಭೆ ನಿರ್ಣಯ ಮಾಡಿದ್ದರೂ, ಸರ್ಕಾರ ಆಜ್ಞೆ ಹೊರಡಿಸಿದ್ದರೂ ಸಂಬಂಧಪಟ್ಟ ಅಧಿಕಾರಿಗಳು ಅವನ್ನು ಕಾರ್ಯಗತಗೊಳಿಸುತ್ತಿರಲಿಲ್ಲ. ಸವರ್ಣೀಯರು ತಮ್ಮ ಸಾಂಪ್ರದಾಯಿಕ ವಿರೋಧವನ್ನು ನಿಲ್ಲಿಸಲಿಲ್ಲ. ಈ ದಿಶೆಯಲ್ಲಿ ಮುಂದಿನ ಕಾರ್ಯಕ್ರಮವನ್ನು ಕುರಿತು ಪರ್ಯಾಲೋಚನೆ ನಡೆಸುವ ಸಲುವಾಗಿ ಮಹದ್ ಪಟ್ಟಣದಲ್ಲಿ ಕೊಲಬ ಜಿಲ್ಲೆಯ ನಿಮ್ನವರ್ಗೀಯರು 1927ರ ಮಾರ್ಚಿ ತಿಂಗಳಲ್ಲಿ ಸಮ್ಮೇಲನ ಕರೆದರು. ಸುರೇಂದ್ರನಾಥ ತಿಪ್ನಿಸ್, ಅನಂತರಾವ್ ಮೊದಲಾದವರು ಬಹು ಸಮರ್ಥವಾಗಿ ಸಕಲ ವ್ಯವಸ್ಥೆಗಳನ್ನು ಸಜ್ಜುಗೊಳಿಸಿದರು. ಕಾರ್ಯಕರ್ತರು ಎರಡು ತಿಂಗಳು ಮುಂಚೆಯೇ ಹಳ್ಳಿಕೊಂಪೆ ತಿರುಗಿ, ಜನರನ್ನು ಕಂಡು ಮಾತಾಡಿ, ಸಭೆಯಲ್ಲಿ ಭಾಗವಹಿಸುವಂತೆ ಪ್ರಚೋದಿಸುತ್ತಿದ್ದರು. ಆ ಪ್ರಚಾರದ ಪರಿಣಾಮವಾಗಿ, ನೂರಾರು ಮೈಲಿಗಳ ದೂರದಿಂದ ಆಬಾಲವೃದ್ಧರು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ರೊಟ್ಟಿ ಬುತ್ತಿ ಕಟ್ಟಿಕೊಂಡು ಮಹದ್ ಪಟ್ಟಣಕ್ಕೆ ನಡೆದು ಬಂದರು. ಹತ್ತುಸಾವಿರ ಮಂದಿ ಪ್ರತಿನಿಧಿಗಳು ನೆರೆದಿದ್ದ ಆ ಬೃಹತ್ಸಭೆಯಲ್ಲಿ ಅಂಬೇಡ್ಕರ್ ಅವರು ಸವರ್ಣೀಯರಿಂದ ತಮಗಾಗುತ್ತಿದ್ದ ಚಿಕ್ಕಂದಿನ ಅನುಭವಗಳನ್ನು ವಿವರಿಸಿ, ಸೈನ್ಯದಲ್ಲಿ ಉದ್ಯೋಗಾವಕಾಶವಿದ್ದಾಗ ಅವರ್ಣೀಯರು ಅನುಭವಿಸುತ್ತಿದ್ದ ಸ್ಥಾನಮಾನ ಸೌಲಭ್ಯಗಳನ್ನು ನಿರೂಪಿಸಿ, ಅವರು ಸ್ವಾಭಿಮಾನಿಗಳಾಗದಿದ್ದರೆ ಅವರ ಭವಿಷ್ಯ ಆಶಾದಾಯಕವಾಗುವುದಿಲ್ಲವೆಂದು ನಿರ್ಭೀತಿಯಿಂದ ನುಡಿದರು. "ನಮ್ಮ ನಡೆನುಡಿ ಬದಲಾವಣೆಗೊಳ್ಳಬೇಕು. ನಮ್ಮ ಆಲೋಚನೆ ಜೀವಂತವಾಗಬೇಕು. ಇಂದಿನಿಂದ ದನದ ಶವ ತಿನ್ನುವುದಿಲ್ಲವೆಂದು ನೀವು ಪ್ರತಿಜ್ಞೆ ಮಾಡಬೇಕು. ನಾವು ಅಲ್ಪರೆಂಬ, ಅಪಸ್ಮೃವೆಂಬ ಭಾವನೆಯನ್ನು ತ್ಯಜಿಸಬೇಕು. ಸವರ್ಣೀಯರು ಹೊರಗೆಸೆದ ಎಂಜಲನ್ನು ತಿನ್ನಬೇಡಿ. ನಮಗಿಂತ ನಮ್ಮ ಮಕ್ಕಳು ಉತ್ತಮ

ರೀತಿಯಿಂದ ಬಾಳಬೇಕೆಂದು ಸಂಕಲ್ಪ ತೊಡದಿದ್ದರೆ ತಂದೆ ತಾಯಿಯರಿಗೂ ಪಶುಗಳಿಗೂ ನಡುವೆ ಏನೂ ವ್ಯತ್ಯಾಸವಿಲ್ಲವೆಂದು ಹೇಳಬೇಕಾಗುತ್ತದೆ." ನಿಮ್ನವರ್ಗದವರಿಗೆ ಪೌರಹಕ್ಕುಗಳು ಮತ್ತು ಸರ್ಕಾರಿ ನೌಕರಿಗಳು ದೊರೆಯಲು ಸಹಾಯ ಮಾಡುವಂತೆ. ಅವರ ಮಕ್ಕಳಿಗೆ ಉಚಿತಾಹಾರವೊದಗಿಸುವಂತೆ. ತಾವೇ ಸತ್ತಪ್ರಾಣಿಗಳನ್ನು ಹೂಳುವಂತೆ ಸಮ್ಮೇಲನ ನಿರ್ಣಯದ ಮೂಲಕ ಸವರ್ಣೀಯರಿಗೆ ಮನವಿ ಮಾಡಿಕೊಂಡಿತು : ಪಾನ ನಿರೋಧವನ್ನು ಜಾರಿಗೆ ತರುವಂತೆ. ಅಂತ್ಯಜರು ದನದಶವ ತಿನ್ನದ ಹಾಗೆ ಕಾನೂನು ಮಾಡುವಂತೆ. ಉಚಿತ ಬಲಾತ್ಕಾರ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತರುವಂತೆ. ನಿಮ್ನವರ್ಗದ ವಿದ್ಯಾರ್ಥಿನಿಲಯಗಳಿಗೆ ಸಹಾಯದ್ರವ್ಯ ನೀಡುವಂತೆ ಸರ್ಕಾರಕ್ಕೆ ಬಿನ್ನವಿಸಿಕೊಂಡಿತು.

ಆ ಸಮ್ಮೇಲನದಲ್ಲಿ ಸವರ್ಣೀಯರೂ ಸೇರಿ ಅಂಗೀಕರಿಸಿದ ಮುಖ್ಯ ನಿರ್ಣಯ ಚೌಡರ ಕೆರೆಗೆ ಸಂಬಂಧಿಸಿದ್ದು. ಪ್ರತಿನಿಧಿಗಳು ಕೆರೆಯಬಳಿ ಹೋಗಿ, ನಿಮ್ನವರ್ಗದವರ ನೀರು ಕುಡಿಯುವ ಹಕ್ಕನ್ನು ಚಲಾಯಿಸಬೇಕೆಂಬುದೇ ಆ ನಿರ್ಣಯದ ವಿಷಯವಾಗಿತ್ತು. ಸಾಮಾಜಿಕ ಕ್ರಾಂತಿಯ ಪ್ರವರ್ತಕರಾದ ಅಂಬೇಡ್ಕರರು ಪ್ರಾಚೀನ ಸಂಪ್ರದಾಯಗಳ ವೇಷದಲ್ಲಿ ವಿಜೃಂಭಿಸುತ್ತಿದ್ದ ಅಸುರೀಶಕ್ತಿಗಳ ವಿಧ್ವಂಸನಕ್ಕಾಗಿಯೆಂಬಂತೆ ಮೆರವಣಿಗೆಯ ಅಗ್ರಭಾಗದಲ್ಲಿ ಮಹಾ ಸೇನಾನಿಯಂತೆ ಹೆಜ್ಜೆಹಾಕುತ್ತಿದ್ದರು. ಹೋರಾಟದ ಮೂಲಕ ಸ್ವಾತಂತ್ರ್ಯವನ್ನು ದಕ್ಕಿಸಿಕೊಳ್ಳಬೇಕೇ ಹೊರತು. ಬಳುವಳಿಯ ರೂಪದಲ್ಲಿ ಪಡೆಯಲಾಗದೆಂಬಂತೆ. ಸರ್ವಾಪಾಯಗಳಿಗೂ ತಲೆಯೊಡ್ಡಲು ಸಿದ್ಧರಾಗಿ ಅವರು ಮುನ್ನಡೆದಿದ್ದರು. ದಾಸ್ಯ ದಾರಿದ್ರ್ಯಗಳೇ ಸಹಜಸ್ಥಿತಿಯೆಂದು ನಂಬಿ ನಿರ್ವೀರ್ಯರಾಗಿದ್ದ ನಿಮ್ನವರ್ಗೀಯರಲ್ಲಿ ಹುರುಪು ಹುಮ್ಮಸ್ಸುಗಳನ್ನು ತುಂಬಿ. ಸರ್ವತ್ಯಾಗಗಳಿಗೆ ಅವರನ್ನು ಅಣಿಗೊಳಿಸಿದ್ದರು. ಮೆರವಣಿಗೆ ಊರಿನ ಬೀದಿಗಳಲ್ಲಿ ಹರಿದು. ಚೌಡರ ಕೆರೆಯತಡಿಗೆ ಹೊರಳಿತು. ಮಹಾ ಸೇನಾನಿ ಮೊದಲು ಕೆರೆಗಿಳಿದು ನೀರು ಕುಡಿದರು. ಉಳಿದ ಜನ ಅವರನ್ನು ಹಿಂಬಾಲಿಸಿ. ತಮ್ಮ ಹಕ್ಕನ್ನು ಮೆರೆದರು. ಅನಂತರ ಮೆರವಣಿಗೆ ಶಾಂತ ರೀತಿಯಲ್ಲಿ ಚಪ್ಪರಕ್ಕೆ ಮರಳಿತು. ನೂರು ಮಾತಿಗಿಂತ ಒಂದು ಕೃತಿಯಬೆಲೆ ಜಾಸ್ತಿಯೆಂಬ ಸ್ವರ್ಣಸಿದ್ಧಾಂತದ ಮಹತ್ವವನ್ನಂದು ಅಂಬೇಡ್ಕರ್ ತೋರಿಸಿಕೊಟ್ಟರು.

ಅವರ್ಣೀಯರು ವೀರೇಶ್ವರ ದೇವಾಲಯವನ್ನು ಪ್ರವೇಶಿಸಲಿದ್ದಾರೆಂಬುದಾಗಿ ಸ್ವಲ್ಪ ಹೊತ್ತಿನನಂತರ ದುಷ್ಟಪ್ರವೃತ್ತಿಯ ಸವರ್ಣೀಯರು ಗುಲ್ಲೆಬ್ಬಿಸಿದರು. ಊರಿನ ತುಂಡಾಡಿಗರು ದೊಣ್ಣೆದಡಿ ಸಂಗ್ರಹಿಸಿಕೊಂಡು ರಸ್ತೆಗಳ ಮೂಲೆಮೂಲೆಗಳಲ್ಲಿ ಗುಂಪುಗೂಡಿದರು. ತಮ್ಮ ಧರ್ಮ ಅಪಾಯದ ಬಸಿರಲ್ಲಿದೆ, ತಮ್ಮ ದೇವರಿಗೂ ಮೈಲಿಗೆಯ ಭಯ ಸನ್ನಿಹಿತವಾಗಿದೆಯೆಂದು ಅವರು ಅಬ್ಬರಿಸಿದರು. ಗೋಮಾಂಸ ಭಕ್ಷಕರಾದ ತುರುಕರು, ಅಂತೆಯೇ ಹಿಂದೂ ದೇವತೆಗಳನ್ನು ದೂಷಿಸುತ್ತಿದ್ದ ಕಿರಿಸ್ತರು ಅದೇ ಕೆರೆಯಲ್ಲಿ ನೀರು ಕುಡಿಯುವಾಗ ತುಟಿಪಿಟಕ್ಕೆನ್ನದಿದ್ದ ಹಿಂದೂ ವೀರರು ತಮ್ಮ ಮತವನ್ನೊಪ್ಪಿಕೊಂಡು. ರಾಮಕೃಷ್ಣರನ್ನು ಪೂಜಿಸುತ್ತಿದ್ದ ನಿಮ್ನವರ್ಗದ ಜನರ ಬಗೆಗೆ ಪ್ರಕಟಿಸುತ್ತಿದ್ದ ಅಸಹನೆ ಹೇಯವಾದುದಾಗಿತ್ತು. ಸವರ್ಣೀಯ ರೌಡಿಗಳು ಚಪ್ಪರದ ಕಡೆಗೆ ನುಗ್ಗಿ. ನಿರಾಯುಧರಾದ ಪ್ರತಿನಿಧಿಗಳ ಮೇಲೆ ಬಿದ್ದು. ತರಿದು. ಓಡಿಸಿ ಅವರ ಬುತ್ತಿಯನ್ನು ನೆಲದ ಮೇಲೆ ಚೆಲ್ಲಿ, ಹಾಹಾಕಾರ ಎಬ್ಬಿಸಿ. ಅಸಹ್ಯವಾಗಿ ವರ್ತಿಸಿದರು. ಕೊಳ್ಳಾಟಕ್ಕಾಗಿ ಅಂಗಡಿ ಬೀದಿಗೆ ಹೋಗಿದ್ದ ಹೆಂಗಸರು ಮಕ್ಕಳು ಪೋಲಿಗಳ ಬರ್ಬರ ವರ್ತನೆಗೆ ಹೆದರಿ. ಆಸರೆಗಾಗಿ ತುರುಕರ ಮನೆಹೊಕ್ಕರು. ತಹಸೀಲ್ದಾರ ಮತ್ತು ಪೋಲೀಸು ಅಧಿಕಾರಿಗಳು ಪ್ರವಾಸಿ ಮಂದಿರದಲ್ಲಿದ್ದ ಅಂಬೇಡ್ಕರರನ್ನು ಭೇಟಿಮಾಡಿದರು. "ನನ್ನ ಜನವನ್ನು ನಾನು ನಿಯಂತ್ರಿಸುತ್ತೇನೆ : ನಿಮ್ಮ ಜನ ನೀವು ನೋಡಿಕೊಂಡರೆ ಸಾಕು" ಎಂದು ನುಡಿದು ಅಂಬೇಡ್ಕರರು ಕೂಡಲೇ ತಮ್ಮ ಕೆಲವು ಗೆಳೆಯರೊಡನೆ ಬೀದಿಗುಂಟ ನಡೆದರು. ದಾರಿಯಲ್ಲಿ ತಮಗೆದುರಾದ ರೌಡಿಗಳನ್ನು ಕುರಿತು "ದೇವಾಲಯಪ್ರವೇಶ ನಮ್ಮ ಕಾರ್ಯಕ್ರಮದಲ್ಲಿಲ್ಲ. ಅವರ್ಣೀಯರು ಪರದೇಶಿಗಳಲ್ಲ, ಅನ್ಯಮತೀಯರಲ್ಲ. ಶತ್ರುಕುಲದವರಲ್ಲ. ನಮ್ಮ ಅನೈಕ್ಯವೇ ನಾಡಿನ ದಾಸ್ಯಕ್ಕೆ ಕಾರಣವಾಯಿತು. ನಿಮ್ಮ ನಮ್ಮ ರಕ್ತದಲ್ಲಿ ಭೇದವುಂಟೆ?" ಎಂದು ನುಡಿದು, ಮುಂದೆ ನಡೆದರು.

ಮಹದ್‌ನಗರದ ಸಂಖ್ಯೆಗಿಂತ ಪ್ರತಿನಿಧಿಗಳ ಸಂಖ್ಯೆ ಹಲವು ಮಡಿಯಾಗಿತ್ತು. ಅವರಲ್ಲಿ ಕೆಲವು ಬಲಿಷ್ಠ ತರುಣರು ಕೋಪಾರೂಢರಾಗಿ ತಮ್ಮ ನಾಯಕಮಣಿಯ ಬಳಿಗೈದಿ. ಪ್ರತೀಕಾರಕ್ಕನುಮತಿ ನೀಡುವಂತೆ ಕೂಗಾಡಿದರು. ನಾಯಕರು ತಮ್ಮ ತರುಣರನ್ನು ನಾನಾ ಬಗೆಯಾಗಿ ಸಾಂತ್ವನಗೊಳಿಸಿ ತಂತಮ್ಮ ಊರುಗಳಿಗೆ ಮರಳುವಂತೆ ಬುದ್ಧಿ ಹೇಳಿದರು. ಪ್ರತಿನಿಧಿಗಳು

ಸಮ್ಮೇಲನದಿಂದ ನಿರ್ಗಮಿಸುತ್ತಿದ್ದಂತೆ ಊರಿನ ಸವರ್ಣೀಯರು ಊರೂರು ಗಳಿಗೆ ಸುದ್ದಿಗಾರರನ್ನಟ್ಟಿ. ನಿಮ್ನವರ್ಗದ ಜನ ಕೆರೆನೀರನ್ನು ಕೆಡಿಸಿ. ತಮ್ಮನ್ನೆಲ್ಲ ಅವಮಾನಗೊಳಿಸಿದ್ದಕ್ಕಾಗಿ ತಕ್ಕ ಶಿಕ್ಷೆ ನೀಡುವಂತೆ ಮುಖಂಡರಿಗೆ ಬಿನ್ನವಿಸಿ ಕೊಂಡರು. ಆ ದಿನ ಪ್ರವಾಸಿಮಂದಿರ ಸರ್ಕಾರಿ ಅಧಿಕಾರಿಗಳಿಗೆ ಮೀಸಲಾಗಿದ್ದ ದ್ದರಿಂದ. ಅಂಬೇಡ್ಕರ್ ಅವರು ಪೋಲೀಸು ಕಚೇರಿಯಲ್ಲುಳಿದುಕೊಂಡು ದೊಂಬಿಗೆ ಸಂಬಂಧಿಸಿದ ಸಂಗತಿಗಳನ್ನು ಇತ್ಯರ್ಥಗೊಳಿಸಬೇಕಾಯಿತು. ಮಹದ್‌ನಗರ ಸಮ್ಮೇಲನ ಅಸ್ಪೃಶ್ಯರ ಹೋರಾಟದ ಇತಿಹಾಸದಲ್ಲೆಂತೋ ಅಂಬೇಡ್ಕರ್ ಅವರ ಜೀವನದಲ್ಲಿಯೂ ಮಹತ್ಪೂರ್ಣವಾದ ಘಟನೆಯಾಗಿದೆ. ಅದು ಅಂಬೇಡ್ಕರರ ನಾಯಕತ್ವವನ್ನು ಗುರುತಿಸಿದುದಲ್ಲದೆ ಕಾಂಗ್ರೆಸ್ ಮುಸ್ಲಿಮ್‌ಲೀಗಿನಂಥ ರಾಜಕೀಯ ಸಂಸ್ಥೆಗಳಿಗೆ ಅವರ ದಕ್ಷತೆಯನ್ನೂ ಕರ್ತೃತ್ವ ಶಕ್ತಿಯನ್ನೂ ಪರಿಚಯಿಸಿಕೊಟ್ಟಿತು. ಅದು ಸಮಗ್ರ ಭಾರತೀಯ ಅಸ್ಪೃಶ್ಯ ಜನಾಂಗದ ಸಂಘಟನೆಗೆ ನಾಂದಿಯಾದಂತೆ. ಸವರ್ಣೀಯರಿಗೆ ಎಚ್ಚರಿಕೆಯ ಸಂಕೇತವಾಯಿತು.

ಅಂಬೇಡ್ಕರ್ ಅವರು ವಿಜಯಭೇರಿ ಬಾರಿಸಿ ಮನೆಗೆ ಹಿಂದಿರುಗುವ ಹೊತ್ತಿಗೆ. ಮಹದ್ ನಗರದಲ್ಲಿ ನಡೆದ ಭೀಕರ ಘಟನೆಗಳ ಸುದ್ದಿಯನ್ನು ಪತ್ರಿಕೆಗಳ ಮೂಲಕ ತಿಳಿದುಕೊಂಡಿದ್ದ ಮನೆಯವರು ಭೀತಿ ಕಳವಳಗಳಿಂದ ಸೊರಗಿ ಸೊಪ್ಪಾಗಿದ್ದರು. ಅಣ್ಣ ತಮ್ಮನನ್ನು ಗದ್ಗದ ಸ್ವರದಿಂದ ತರಾಟೆಗೆ ತೆಗೆದುಕೊಂಡದ್ದಲ್ಲದೆ ಸಮಾಜ ಸುಧಾರಣಾ ಕಾರ್ಯವನ್ನು ತ್ಯಜಿಸಿ, ವೃತ್ತಿ ವ್ಯವಸಾಯದಲ್ಲಿ ಮುಂದುವರಿಯುವಂತೆ ಸಲಹೆ ಮಾಡಿದರು : ಸವರ್ಣೀಯ ಸ್ನೇಹಿತರು ಅವರನ್ನು ಪಾಳುಬಾವಿಗೆ ತಳ್ಳುವುದಾಗಿ ನಿಂದಿಸಿದರು. ಅಣ್ಣ ನೆದುರಿನಲ್ಲಿ ತಮ್ಮ ಮೌನವಾಗಿದ್ದರು. ತಮ್ಮ ಮತ್ತು ತಮ್ಮ ಸಮಾಜದ ಕ್ಷೇಮ ಸಾಧನೆಯ ದೃಷ್ಟಿಯಿಂದ ತಮ್ಮ ನಿಲುವೇ ಸರಿಯೆಂದು ಅಣ್ಣ ಮರೆಯಾದ ನಂತರ ಗೊಣಗಿಕೊಂಡರು. ಮನೆಯ ಹಿರಿಯರೇ ಕಳವಳದಿಂದ ತಲ್ಲಣಿಸಿದರೆಂದರೆ ಅಬಲೆ ರಮಾಬಾಯಿಯ ಗೋಳು ಕೇಳಬೇಕೇ ? ಎರಡು ಮೂರು ದಿನ ನಿದ್ರಾಹಾರಗಳಿಲ್ಲದೆ ಸಂಕಟಪಡುತ್ತಿದ್ದರು ; ಅವರ ತಲೆದಿಂಬು ಒದ್ದೆಯಾಗುತ್ತಿತ್ತು ; ಯಾವಾಗಲೂ ಅವರ ನಾಲಗೆಯ ಮೇಲೆ ರಾಮನಾಮ ನರ್ತಿಸುತ್ತಿತ್ತು. ಪತಿಯ ಮುಖದರ್ಶನದಿಂದ ಅವರ ವದನಾರವಿಂದ ಅರಳಿತು. ಅವರು ಮನಸ್ಸಿನಲ್ಲಿ ದೇವರನ್ನು ವಂದಿಸಿದರೇ ಹೊರತು. ಮರು ಮಾತಾಡಲಿಲ್ಲ.

ಅಂಬೇಡ್ಕರ್ ಅವರ ಕಾರ್ಯಕ್ಷೇತ್ರ ವಿಶಾಲವಾಗುತ್ತಿದ್ದಂತೆಲ್ಲ, ಪತ್ರಿಕೆಯ ಆವಶ್ಯಕತೆಯೂ ಹೆಚ್ಚುತ್ತಿತ್ತು. ಪತ್ರಿಕೆಯ ಬೆಂಬಲವಿಲ್ಲದೆ ಪಕ್ಷ ಅಥವಾ ನಾಯಕ ರೆಕ್ಕೆಯಿಲ್ಲದ ಪಕ್ಷಿಯಂತಿರಬೇಕಾಗುತ್ತೆಂಬುದು ಸ್ವಾನುಭವ ವೇದ್ಯವಾಗಿತ್ತು. ಪಕ್ಷದ ಧ್ಯೇಯಧೋರಣೆಗಳು ಕ್ರಿಯೆ ಪ್ರತಿಕ್ರಿಯೆಗಳು, ಅಂತೆಯೇ ನಾಯಕರ ಅಭಿಪ್ರಾಯಗಳು ಜನರಿಗೆ ನಿಖರವಾಗಿ ತಿಳಿಯಬೇಕಾದರೆ ಪತ್ರಿಕೆಗೆ ಶರಣು ಹೋಗಲೇಬೇಕು. ಸವರ್ಣೀಯರು ಪ್ರಕಟಿಸುವ ಪತ್ರಿಕೆಗಳು ಹಿಂದುಳಿದ ಜನಾಂಗಗಳ ಆಶೆ ಆಕಾಂಕ್ಷೆಗಳನ್ನು ಪ್ರಾಮಾಣಿಕವಾಗಿ ಪ್ರತಿಬಿಂಬಿಸಲಾರವು. ಅವರ ನಾಯಕರ ಸಂದೇಶವನ್ನು ಕರಾರುವಾಕ್ಕಾಗಿ ಪ್ರಕಟಿಸಲಾರವು. ಅಷ್ಟೇ ಅಲ್ಲ, ಅಭಿಪ್ರಾಯಗಳನ್ನು ತಿರುಚಿ ಮುರುಚಿ ಪ್ರಕಟಿಸುವ ಅಥವಾ ಅವುಗಳನ್ನು ಮುಚ್ಚುವ ಅಧಿಕಾರವೂ ಪತ್ರಿಕೆಗಳಿಗಿದೆ. ಬಹುಜನದೃಷ್ಟಿಯಿಂದ ಕಾಲಕಸವಾಗಿ ಸುಷುಪ್ತಾವಸ್ಥೆಯಲ್ಲಿರುವ ಜನರನ್ನೆಚ್ಚರಿಸಬೇಕಾದರೆ ಪತ್ರಿಕೆಯ ರೂಪದಲ್ಲಿ ಸಶಕ್ತ ಮಾಧ್ಯಮವೊಂದು ಬೇಕಾಗುತ್ತದೆ. ಈ ಆದರ್ಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು, 1972ರ ಏಪ್ರಿಲ್ 3ರಂದು 'ಬಹಿಷ್ಕೃತ ಭಾರತ' ಎಂಬ ಮರಾಠಿ ಪತ್ರಿಕೆಯನ್ನು ಬಾಬಾಸಾಹೇಬರು ಪ್ರಾರಂಭಿಸಿದರು. ಸಂಪಾದಕೀಯ ಹಾಗೂ ಲೇಖನಗಳ ಮೂಲಕ ಅಸ್ಪೃಶ್ಯರಿಗೆ ನ್ಯಾಯವಾಗಿ ದೊರಕಬೇಕಾದ ಹಕ್ಕುಗಳನ್ನು ಕುರಿತು ಸರಳ ಸುಲಭಶೈಲಿಯಲ್ಲಿ ವಾದ ವಿವಾದಗಳನ್ನು ಮಂಡಿಸುತ್ತಿದ್ದರು. ಅವರ ಶೈಲಿಯಲ್ಲಿ ವ್ಯಂಗ್ಯ ವಿಡಂಬನೆಗಳೂ ಬೆರೆತಿರುತ್ತಿದ್ದವು. ಕುಡಿತ ಮತ್ತು ಗೋಮಾಂಸ ಭಕ್ಷಣೆಗಳು ಅಸ್ಪೃಶ್ಯತೆಯ ಲಕ್ಷಣಗಳೆನ್ನುವುದಾದರೆ ತುರುಕರು ಮತ್ತು ಕಿಲಿಸ್ತರು ಅಸ್ಪೃಶ್ಯವರ್ಗಕ್ಕೆ ಸೇರುತ್ತಾರೆಯೆ? ಸವರ್ಣೀಯರಲ್ಲಿ ಕುಡಿಯುವವರಿಲ್ಲವೆ? ಅಸ್ಪೃಶ್ಯತಾನಿವಾರಣೆಯಂಥ ಕ್ರಾಂತಿಕಾರಕ ಬದಲಾವಣೆಗಳಿಗೆ ಸಂಪ್ರದಾಯವಾದಿಗಳು ಇನ್ನೂ ಸಿದ್ಧರಾಗಿಲ್ಲ : ಬದಲಾವಣೆಗಳ ಮೂಲಕ ಅವರಲ್ಲಿ ದ್ವೇಷಭಾವನೆ ಬಿತ್ತುವುದು ಸರಿಯಲ್ಲವೆಂದು ಉದಾರ ಭಾವನೆಯ ಸೋಗು ಹಾಕುವ ಸವರ್ಣೀಯ ನಾಯಕರು ಬಣ್ಣನೆಯ ಮಾತು ಝುಳಪಿಸುತ್ತಾರೆ. ರಾಷ್ಟ್ರಾಭಿಮಾನ ಸ್ವಾತಂತ್ರ್ಯಗಳ ಕಲ್ಪನೆಯೇ ಇಲ್ಲದ ನಿರಕ್ಷರ ಕುಕ್ಷಿಗಳಿಗೇಕೆ ಸ್ವಾತಂತ್ರ್ಯವೆಂದು ತಿರುಗುಬಾಣ ಹೂಡಬಹುದಲ್ಲವೆ? ತಿಲಕರು ಅಸ್ಪೃಶ್ಯರಾಗಿದ್ದರೆ 'ಸ್ವರಾಜ್ಯ ನನ್ನ ಆಜನ್ಮ ಸಿದ್ಧ ಹಕ್ಕು' ಎನ್ನುವುದಕ್ಕೆ ಬದಲಾಗಿ 'ಅಸ್ಪೃಶ್ಯತಾನಿರ್ಮೂಲವೇ ನನ್ನ ಆಜನ್ಮಸಿದ್ಧ ಹಕ್ಕು' ಎಂದು ಘೋಷಿಸುತ್ತಿರಲಿಲ್ಲವೆ? ಆಫ್ರಿಕಾದಲ್ಲಿ ಭಾರತೀಯರಿಗಾಗುತ್ತಿದ್ದ ಅನ್ಯಾಯವನ್ನು ಸಹಿಸದವರು ಇಂಡಿಯಾದಲ್ಲಿ ಅಂತ್ಯಜರಿ

ಗಾಗುತ್ತಿರುವ ಕಿರುಕುಳಗಳ ಕಡೆಗೆ ಕಿವುಡುಗಿವಿ ತಿರುಗಿಸುವುದು ತರವೆ? ಕೃತಿಯಲ್ಲಿ ಪ್ರತಿಬಿಂಬಗೊಳ್ಳದ ಅಧರ ಸಹಾನುಭೂತಿಯಿಂದಾಗುವ ಲಾಭ ವೇನು? ಇವು ಅವರ ಚರ್ಚೆಯ ಸಾರ ಸರ್ವಸ್ವ. ಸವರ್ಣೀಯರು ತಮ್ಮ ಪಾಪಕರ್ಮದ ಭೀಕರತೆಯನ್ನರಿತುಕೊಂಡು ತಾವಾಗಿಯೇ ಅಸ್ಪೃಶ್ಯತಾ ನಿರ್ಮೂಲನಾ ಕಾರ್ಯಕ್ಕೆ ಮುಂದಾಗದಿದ್ದರೆ, ಆ ಕರ್ಮ ಅವರಿಗೆ ಮಾರಕ ವಾಗುತ್ತದೆಂದೂ, ದುಃಖಕಾರಕವಾಗುತ್ತದೆಂದೂ ಎಚ್ಚರಿಕೆ ನೀಡಿದಲ್ಲದೆ. ಅಸ್ಪೃಶ್ಯರೆಲ್ಲ ಒಗ್ಗಟ್ಟಾಗಿ ಅಂತಿಮ ಸಂಗ್ರಾಮಕೆ ಸಿದ್ಧರಾಗಬೇಕೆಂದವರು ಕರೆಕೊಟ್ಟರು.

ಚೌಡರ್ ಕೆರೆಯ ಪವಿತ್ರೀಕರಣ ಸಮಾಚಾರ ತಿಳಿದಾಗ ನಾಡಿನ ಅಸ್ಪೃಶ್ಯರು ವ್ಯಗ್ರರಾದರು, ಡಾ॥ ಅಂಬೇಡ್ಕರ್‌ರು ಗಾಯಗೊಂಡ ಸಿಂಹದಂತೆ ಕೋಪೋಗ್ರರಾದರು. ತಮ್ಮದು ಪರಿಶುದ್ಧವಾದ ಕಾರಣವಾದ್ದರಿಂದ. ತಮ್ಮ ನಿಲವಿನ ಸಮರ್ಥನೆ ಅತ್ಯಗತ್ಯವೆಂದು ಮನದಂದು, ಕೆರೆಯ ಬಳಿ ಸತ್ಯಾಗ್ರಹ ಹೂಡುವುದೆಂದು ನಿಶ್ಚಯಿಸಿದರು. ಸತ್ಯಾಗ್ರಹದಲ್ಲಿ ಬ್ರಾಹ್ಮಣರನು ಸೇರಿಸುವು ದಿಲ್ಲವಾದರೆ ತಾವು ಸಹ ಭಾಗವಹಿಸುವುದಾಗಿ ಬ್ರಾಹ್ಮಣೇತರ ನಾಯಕರು ಆಶ್ವಾಸನೆ ನೀಡಿದರು. "ಬ್ರಾಹ್ಮಣರೆಲ್ಲ ನಿಮ್ಮ ವರ್ಗದ ಜನರ ಶತ್ರುಗಳಲ್ಲ; ನಾನು ಅಸ್ಪೃಶ್ಯತೆಯನ್ನು ಪೋಷಿಸುವ ಬ್ರಾಹ್ಮಣ್ಯವನ್ನು ವಿರೋಧಿಸುತ್ತೇನೆಯೇ ಹೊರತು, ಬ್ರಾಹ್ಮಣರನ್ನಲ್ಲ. ಅನೇಕ ಬ್ರಾಹ್ಮಣೇತರರಲ್ಲಿಯೂ ಬ್ರಾಹ್ಮಣ್ಯ ಮನೆಮಾಡಿಕೊಂಡಿದೆ. ಅಂಥವರು ಬ್ರಾಹ್ಮಣರಿಗಿಂತ ಅಪಾಯಕಾರಿ" ಎಂದು ಆ ನಾಯಕರು ಮುಟ್ಟಿನೋಡಿಕೊಳ್ಳುವಂತೆ, ಪ್ರತ್ಯುತ್ತರಕ್ಕವಕಾಶವಿಲ್ಲದಂತೆ ಬಾಬಾ ಸಾಹೇಬರು ನುಡಿದರು, ಸತ್ಯಾಗ್ರಹಕ್ಕೆ ಬೇಕಾದ ಸಿದ್ಧತೆಗಳಲ್ಲಿ ಮಗ್ನರಾದರು : ಸತ್ಯಾಗ್ರಹೋದ್ದೇಶ ಪವಿತ್ರವಾದದ್ದರಿಂದ ಅದಕ್ಕೆ ಸಹಕಾರ ನೀಡುವಂತೆ ಸರ್ಕಾರಕ್ಕೆ ವಿನಂತಿ ಮಾಡಿಕೊಂಡರು : ಜನತೆಯ ಮನಸ್ಸನ್ನು ಸಿದ್ಧಗೊಳಿಸುವ ಸಲುವಾಗಿ ಪತ್ರಿಕೆಗಳಲ್ಲಿ ಲೇಖನ ಬರೆದರು. "ಅಸ್ಪೃಶ್ಯತೆ ಸಂಸ್ಕೃತಿಯ ಕುರುಹಲ್ಲ. ಅಸಮಾನತೆ ಮತ್ತು ಭೇದಭಾವಗಳನ್ನು ಮಾನ್ಯ ಮಾಡುವ ಧರ್ಮ ಧರ್ಮವಲ್ಲ ; ವ್ಯಕ್ತಿವಿಕಾಸಕ್ಕನುವು ಮಾಡಿಕೊಡದ ಧರ್ಮ ಧರ್ಮವಲ್ಲ. ಅಸ್ಪೃಶ್ಯತೆ ಅಸ್ಪೃಶ್ಯರನ್ನೆ ಅಲ್ಲ, ಹಿಂದೂಗಳನ್ನೂ ರಾಷ್ಟ್ರವನ್ನೂ ವಿನಾಶಗೈದಿದೆ. ಅವರ ಶಕ್ತಿ ಸಾಮರ್ಥ್ಯಗಳನ್ನು ದೇಶಾಭ್ಯುದಯ ಕಾರ್ಯಗಳಿಗೆ ಬಳಸಿಕೊಳ್ಳದಿರುವುದು ದುರ್ದೈವ. ಸವರ್ಣೀಯರು

ಅವರನ್ನು ಸಮಾನಭಾವದಿಂದ ಕಂಡಿದ್ದರೆ, ಅವರು ಮತಾಂತರ ಹೊಂದು ತ್ತಿರಲಿಲ್ಲ. ನಾಡಿನಲ್ಲಿ ಮತೀಯ ಸಮಸ್ಯೆ ಉದ್ಭವಿಸುತ್ತಿರಲಿಲ್ಲ. ಅಹಿಂಸಾತ್ಮಕ ಚಳುವಳಿ ಎಲ್ಲ ಸಂದರ್ಭಗಳಿಗೂ ಸರಿಹೊಂದುವುದಿಲ್ಲ. ಸಂದರ್ಭಾನುಸಾರವಾಗಿ ಹಿಂಸಾಪ್ರಯೋಗ ಅನಿವಾರ್ಯವಾಗುತ್ತದೆ. ನೀರು ಬಳಸುವಾಗ ಸೂಕ್ಷ್ಮ ಕ್ರಿಮಿಗಳು ನಾಶವಾಗುತ್ತವೆ. ನಡೆಯುವಾಗ ಅನೇಕ ಜೀವಿಗಳು ಹತವಾಗು ತ್ತವೆ. ಮಹಿಳೆಯರ ಮಾನಾಪಹರಣ ಸಮಯದಲ್ಲಿ ಮಿಳ್ಮಿಳನೆ ನೋಡು ವುದು ಹೇಡಿತನವಾಗುತ್ತದೆ." ಸತ್ಯ ಸಾಮಾನ್ಯವಾಗಿ ಅಪ್ರಿಯವಾದದ್ದು. ಅವರ ಮಾತು ಕೆಲವರಿಗೆ ಕಹಿಯಾಗಿ ಕಂಡರೂ, ಅದರಲ್ಲಿ ತಾರಕಶಕ್ತಿಯಿತ್ತೆಂಬುದನ್ನು ಮರೆಯುವಂತಿಲ್ಲ.

ಮಹದ್ ಚಳುವಳಿಗೆ ಸಿದ್ಧತೆ ನಡೆಯುತ್ತಿರುವಾಗಲೇ ಅವರ ಮಗ ರಾಜರತ್ನ ತೀರಿಕೊಂಡ. ಅವನು ತಂದೆಗೆ ತುಂಬ ಅಂಟಿಕೊಂಡಿದ್ದ : ಇತರ ಮಕ್ಕಳಿಗಿಂತ ಮಿಗಿಲಾಗಿ ತಂದೆ ಅವನನ್ನು ಪ್ರೀತಿಸುತ್ತಿದ್ದರು. ಒಂದು ರೀತಿ ಯಲ್ಲಿ ಅವನು ಕುಟುಂಬಕ್ಕೂ ತಂದೆಗೂ ನಡುವಣ ಪ್ರೇಮ ಸೇತುವಾಗಿದ್ದನು. ಮಗ ಸತ್ತ ಕೋಣೆಗೆ ಅವರು ಕೆಲವು ತಿಂಗಳು ಪ್ರವೇಶಿಸಲೆ ಇಲ್ಲ. ಸುಮಾರು ಅದೇ ಸಮಯದಲ್ಲಿ ಬಾಬಾ ಸಾಹೇಬರ ಅಣ್ಣ ಬಾಲಾ ಸಾಹೇಬರೂ ಮರಣ ವನ್ನಪ್ಪಿದರು. ಬಹು ಜನರ ದುಃಖವನ್ನು ತನ್ನ ದುಃಖವಾಗಿ ಮಾಡಿ ಕೊಂಡವರ ಸ್ವಂತ ದುಃಖ ತಾನಾಗಿಯೇ ಮರೆತುಹೋಗುತ್ತದೆ. ಅವರಿಗೆ ಭಾರತವೆ ಮನೆಯಾಗಿರುವಾಗ, ದೀನ ದಲಿತರೆಲ್ಲ ತನ್ನ ಕುಟುಂಬದವರಾಗಿರು ವಾಗ, ಸ್ವಂತ ಕುಟುಂಬವೆಂಬುದಿಲ್ಲ. ಅವರು ಅಮರಾವತಿಯ ದೇವಾಲಯ ಪ್ರವೇಶ ಚಳುವಳಿಯಲ್ಲಿ ಮಗ್ನರಾದಾಗ ಮನೆ ಸಂಪೂರ್ಣವಾಗಿ ಮರೆತು ಹೋಯಿತು.

ದೇವಾಲಯ ಪ್ರವೇಶ ಚಳುವಳಿಯ ಕಾರ್ಯಕರ್ತರು ಮುಂದಿನ ವ್ಯವಸ್ಥೆಯನ್ನು ಕುರಿತು ಚರ್ಚಿಸುವ ಸಲುವಾಗಿ 1927ರ ನವೆಂಬರ್-ತಿಂಗಳು 13ರಂದು ಅಮರಾವತಿಯ ಇಂಪ್ರ ಭವನದಲ್ಲಿ ಸಭೆ ಸೇರಿದರು. ಡಾಕ್ಟರ್ ಅಂಬೇಡ್ಕರ್ ಅವರು ಅಧ್ಯಕ್ಷತೆ ವಹಿಸಿದ ಆ ಸಭೆಯಲ್ಲಿ ಪಂಜಾಬರಾವ್ ದೇಶಮುಖ್, ತಿಕಡೆ, ದೇವರಾವ್ ನಾಯಕ್, ಡಿ. ವಿ. ಪ್ರಧಾನ್, ಆರ್. ಡಿ. ಕೌಲಿ ಮೊದಲಾದವರು ಹಾಜರಿದ್ದರು. ದೇವರು ಪತಿತಪಾವನ, ಸರ್ವಾಂತ ರ್ಯಾಮಿ, ಸರ್ವಜ್ಞನೆನ್ನುವುದು ನಿಜವಾದರೆ ಭೇದವಿಲ್ಲದೆ ಸರ್ವರೂ ಅವನನ್ನು

ಪೂಜಿಸುವಂತಿರಬೇಕೆಂದು ಅಂಬೇಡ್ಕರ್‌ರು ತಮ್ಮ ಅಧ್ಯಕ್ಷ ಭಾಷಣದಲ್ಲಿ ವಾದಿಸಿದರು. "ನಮಗೀಗ ದೇವರನ್ನು ಪೂಜಿಸುವುದರಿಂದದೊದಗುವ ತೃಪ್ತಿ ಮುಖ್ಯವಲ್ಲ. ಅಸ್ಪೃಶ್ಯರ ಸಂಪರ್ಕದಿಂದ ದೇವರಾಗಲೀ ದೇವಮಂದಿರವಾಗಲೀ ಅಪವಿತ್ರವಾಯಿತೆನ್ನುವ ಭಾವನೆಯನ್ನು ನಿರ್ಮೂಲ ಮಾಡುವುದೆ ನಮ್ಮ ಗುರಿ. ಅಸ್ಪೃಶ್ಯರು ಹಿಂದುಗಳೆನ್ನುವುದಾದರೆ ಅವರನ್ನು ದೇವಾಲಯಗಳಿಂದ ಹೊರಗಿರಿಸುವುದು ನ್ಯಾಯವಲ್ಲ." ಅನೇಕ ಜನ ಚಳುವಳಿಯಲ್ಲಿ ಭಾಗವಹಿಸಲು ಸಿದ್ಧರಾಗಿದ್ದರೂ ಕೆಲವರ ಅಪೇಕ್ಷೆಯಂತೆ ಅದನ್ನು ಮುಂದೂಡಲಾಯಿತು.

ಮಹದ್ ಚಳುವಳಿಯ ನಿರೀಕ್ಷೆ ಸಂಪ್ರದಾಯಸ್ಥರಲ್ಲಿ ಕೋಲಾಹಲವುಂಟು ಮಾಡಿತಲ್ಲದೆ. ದೇಶದ ಗಮನವನ್ನು ಸೆಳೆಯಿತು. ಅಸ್ಪೃಶ್ಯರು ಕೆರೆಯ ಬಳಿ ಸುಳಿಯದಂತೆ. ಪ್ರತಿಬಂಧಕಾಜ್ಞೆ ಚಲಾಯಿಸುವಂತೆ ಅವರು ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ಅರ್ಜಿ ಸಲ್ಲಿಸಿದರು. ಮ್ಯಾಜಿಸ್ಟ್ರೇಟರು ಅವರ ಅರ್ಜಿಯನ್ನು ಪುರಸ್ಕರಿಸಲಿಲ್ಲ. ಅಷ್ಟಕ್ಕೇ ತೆಪ್ಪಗಾಗದೆ ಸವರ್ಣೀಯರು ಸಿವಿಲ್ ಕೋರ್ಟಿಗೆ ಮನವಿ ಸಲ್ಲಿಸಿ. ತಾತ್ಕಾಲಿಕ ನಿಷೇಧಾಜ್ಞೆ ಹೊರಡಿಸುವುದರಲ್ಲಿ ಯಶಸ್ವಿಯಾದರು. ಆದರೆ ಸಮ್ಮೇಲನದ ವ್ಯವಸ್ಥೆಯನ್ನು ನಿರ್ಬಂಧಿಸಲಾಗಲಿಲ್ಲ. ಚಪ್ಪರ ನಿರ್ಮಾಣಕ್ಕಾಗಿ ಹಿಂದುಗಳು ಜಮೀನನ್ನು ಕೊಡಲಿಲ್ಲವಾಗಿ ಮುಸ್ಲಿಮರನ್ನು ಆಶ್ರಯಿಸಬೇಕಾಯಿತು. ಸ್ಥಳೀಯ ವರ್ತಕರ ಅಸಹಕಾರದಿಂದಾಗಿ ಹೊರಗಿನಿಂದಲೇ ದವಸ ಧಾನ್ಯಗಳನ್ನು ಕೊಂಡು ತರಬೇಕಾಯಿತು. ಕಾರ್ಯಕರ್ತರು ಶಿಸ್ತು ಸಂಯಮಗಳಿಂದ ವರ್ತಿಸುತ್ತ ಏರ್ಪಾಡುಗಳನ್ನು ಪೂರೈಸಿದರು. ಕೆರೆಯ ಬಳಿ ಪೋಲೀಸು ಬಂದೋಬಸ್ತು ಬಲವಾಗಿತ್ತು : ತಾಲ್ಲೂಕಿನ ಅಧಿಕಾರಿಗಳೆಲ್ಲ ಅಲ್ಲೇ ಬಿಡಾರ ಹೂಡಿದರು.

1927ರ ಡಿಸೆಂಬರ್ 25ನೆಯ ತಾರೀಖು ಮಧ್ಯಾಹ್ನ 12–30 ಗಂಟೆಗೆ ಅಂಬೇಡ್ಕರ್ ಇನ್ನೂರು ಪ್ರತಿನಿಧಿಗಳ ಮತ್ತು ಸ್ವಯಂಸೇವಕರ ತಂಡದೊಡನೆ ದಾಸ್‌ಗಾಂವ್ ನಿಲ್ದಾಣದಲ್ಲಿಳಿದರು. ಅವರು ರೈಲಿಂದಿಳಿಯುತ್ತಿದ್ದಂತೆ ಮೂರುಸಾವಿರ ಸತ್ಯಾಗ್ರಹಿಗಳು ಜಯಕಾರ ಹಾಕಿ. ಗೌರವ ರಕ್ಷೆ ನೀಡಿ, ಸ್ವಾಗತಿಸಿದರು. ತಮ್ಮನ್ನು ನೋಡುವಂತೆ ಬರೆದಿದ್ದ ಜಿಲ್ಲಾ ಮ್ಯಾಜಿಸ್ಟ್ರೇಟರ ಪತ್ರವನ್ನು ಪೋಲೀಸ್ ಅಧಿಕಾರಿ ಅಂಬೇಡ್ಕರರಿಗೆ ತಲುಪಿಸಿದರು. ಅಂಬೇಡ್ಕರರು ಕೂಡಲೇ ಮ್ಯಾಜಿಸ್ಟ್ರೇಟರ ಮುಂದೆ ಹಾಜರಾದರು. ಚಳು

ವಳಿಯನ್ನು ಮುಂದೂಡಬೇಕೆಂದೂ, ಆಗದಿದ್ದರೆ ಸಮ್ಮೇಲನದಲ್ಲಿ ಮಾತಾಡಲು ತಮಗೆ ಅವಕಾಶ ನೀಡಬೇಕೆಂದೂ ಮ್ಯಾಜಿಸ್ಟ್ರೇಟರು ನುಡಿದರು. ಮುಂದೂಡಿಕೆ ಸಾಧ್ಯವಿಲ್ಲವೆಂದು ಅಂಬೇಡ್ಕರ್ ನುಡಿದು ಹೊರಬಂದರು. ಅಷ್ಟರಲ್ಲಿ ಸತ್ಯಾಗ್ರಹಿಗಳ ಮೆರವಣಿಗೆ ಮುಂದೆ ಸಾಗಿ ಐದು ಮೈಲಿ ದೂರದ ಮಹದ್ ನಗರವನ್ನು ತಲುಪಿತ್ತು.

ಅಪರಾಹ್ನ ನಾಲ್ಕುವರೆ ಗಂಟೆಗೆ ಪ್ರಾರಂಭವಾದ ಸಭೆಯಲ್ಲಿ ಮಾತಾಡಲು ಅಂಬೇಡ್ಕರ್ ಅವರು ಮೇಲೆದ್ದಾಗ ಹದಿನೈದು ಸಹಸ್ರ ಜನರ ಕರತಾಡನ ಹರ್ಷ ಧ್ವನಿಗಳು ದಿಗ್ದಿಗಂತಗಳಲ್ಲಿ ಅನುರಣಿತವಾದುವು. ಅವರು ಬಾಯಿ ತೆರೆದ ಕೂಡಲೆ ನಿಶ್ಶಬ್ದ ತಾಂಡವವಾಡಿತು. "ಈ ಕೆರೆಯ ನೀರು ಕುಡಿಯದಿದ್ದರೆ ನಾವು ಸಾಯುವುದಿಲ್ಲ. ನಾವು ಮಾನವರು. ಈ ಕೆರೆಯ ನೀರಿಗೆ ನಮಗೂ ಹಕ್ಕಿದೆ ಎಂಬುದನ್ನು ಸಾಧಿಸುವುದೇ ಈ ಚಳುವಳಿಯ ಉದ್ದೇಶ. ಸಮಾನತೆ ಮತ್ತು ನಿರ್ಜಾತೀಯತೆಯ ಆಧಾರದ ಮೇಲೆ ಹಿಂದೂ ಸಮಾಜವನ್ನು ಪುನರ್ ವ್ಯವಸ್ಥೆಗೊಳಿಸಿದಾಗ ಮಾತ್ರ ಈ ನಾಡಿನ ಪುನರ್ಶ್ಯೋದಯ ಸಾಧ್ಯವಾಗುತ್ತದೆ." ಅವರ ಭಾಷಣ ಮುಗಿದ ನಂತರ ಕೆಲವು ನಿರ್ಣಯಗಳ ಬಗ್ಗೆ ಚರ್ಚೆ ನಡೆಯಿತು. ವೇದವೋದಿದ ಅಥವಾ ಕೇಳಿದ ಶೂದ್ರರ ಕಿವಿಯಲ್ಲಿ ಕಾದ ಸೀಸವನ್ನು ಸುರಿಯಬೇಕೆಂದು ನಿರ್ದೇಶಿಸಿದ, ಶೂದ್ರರ ಪ್ರಗತಿಯನ್ನು ಸ್ಥಗಿತಗೊಳಿಸಿ ಅವರನ್ನು ಆರ್ಥಿಕ ಸಾಮಾಜಿಕ ಧಾರ್ಮಿಕ ಮತ್ತು ರಾಜಕೀಯ ದಾಸ್ಯಕ್ಕೀಡು ಮಾಡಿದ ಮನುಸ್ಮೃತಿಯನ್ನು ಸಾರ್ವಜನಿಕವಾಗಿ ಸುಡಬೇಕೆಂದು ಸಮ್ಮೇಲನ ಘೋಷಿಸಿತು. ಮನುಸ್ಮೃತಿಯ ಸೂತ್ರಗಳನ್ನು ಮೀರಿದ ಶೂದ್ರಾತಿಶೂದ್ರರಿಗೆ ಶಿಕ್ಷೆಯೇ ಹೊರತು, ಬ್ರಾಹ್ಮಣರಿಗಲ್ಲ. ಆ ಸೂತ್ರಗಳ ಪ್ರಕಾರ ಬ್ರಾಹ್ಮಣ ವಿದೇಶಯಾತ್ರೆ ಕೈಗೊಳ್ಳಲಾಗದು, ವ್ಯಾಪಾರ ಮಾಡಕೂಡದು, ಹೋಟಲು ನಡೆಸಬಾರದು. ತಿಲಕರೇ ಹತ್ತಿಗಿರಣಿ ವ್ಯವಸ್ಥೆಗೊಳಿಸಿದ್ದುಂಟು. ಅವರಿಗೆ ಯಾವ ಶಿಕ್ಷೆಯೂ ಇಲ್ಲ. ಅಂದ ಮೇಲೆ ಆ ಗ್ರಂಥದ ಪವಿತ್ರತೆ ಏನಾಯಿತು? ಆ ದಿನ ರಾತ್ರಿ ಒಂಬತ್ತು ಗಂಟೆಗೆ ಪಂದರದ ಮುಂದೆ ನಿರ್ಮಿಸಿದ ವೇದಿಕೆಯ ಮೇಲೆ ಆ 'ಪವಿತ್ರ ಗ್ರಂಥವನ್ನಿಟ್ಟು, ಅಗ್ನಿಸ್ಪರ್ಶ ಮಾಡಲಾಯಿತು. ಆ ಸುದ್ದಿ ತಿಳಿದಾಗ ಆ ಈ ಮಠಗಳ ಆಚಾರ್ಯರು ಒಳಗೊಳಗೆ ತತ್ತರಿಸಿದರು, ಹೊರ ಹೊರಗೆ ನಾಲ್ಕು ಗೋಡೆಗಳ ನಡುವೆ ಶಿಷ್ಯ ಮಂಡಲಿಯ ಮುಂದೆ ಅಬ್ಬರಿಸಿದರು, ಕುಳಿತಲ್ಲಿಂದಲೇ ವಿಭೂತಿ ಮಂತ್ರಿಸಿ, ಶಾಪವನ್ನುಚ್ಚರಿಸಿದರು.

ಹಿಂದೂ ಸಮಾಜ ಏಕೈಕ ವರ್ಗವಾಗುಳಿಯಬೇಕೆಂದೂ, ಪ್ರಜಾಸತ್ತಾತ್ಮಕ ರೀತಿಯಲ್ಲಿ ಪುರೋಹಿತ ವೃತ್ತಿ ವ್ಯವಸ್ಥೆಗೊಳ್ಳಬೇಕೆಂದೂ ಸಮ್ಮೇಲನ ತೀರ್ಮಾನಿಸಿತು.

ಮಾರನೆಯ ಬೆಳಗಿನ ಅಧಿವೇಶನದಲ್ಲಿ ಅಂಬೇಡ್ಕರರೇ ಸತ್ಯಾಗ್ರಹ ಸಂಬಂಧವಾದ ನಿರ್ಣಯವನ್ನು ಮಂಡಿಸಿದರು. ಮಂಡಿಸುವಾಗ ಅವರು ಸತ್ಯಾಗ್ರಹದ ರೀತಿನೀತಿಗಳನ್ನೂ ಅದರ ಪರಿಣಾಮಗಳನ್ನೂ ಕೂಲಂಕಷವಾಗಿ ವಿವರಿಸಿದರು. ಸತ್ಯಾಗ್ರಹಿಗಳು ನಿರಾಯುಧರಾಗಿರಬೇಕೆಂದೂ ಶಿಸ್ತಿನಿಂದ ವರ್ತಿಸಬೇಕೆಂದೂ, ಜೈಲಿಗೆ ಹೋಗಲು ಸಿದ್ಧರಾಗಿರಬೇಕೆಂದೂ, ಬಿಡುಗಡೆಯನ್ನು ಬಯಸಿ ಕ್ಷಮಾಪತ್ರವನ್ನು ಬರೆದುಕೊಡಕೂಡದೆಂದೂ ಅವರು ವಿಶದಪಡಿಸಿದರು. ಒಂದು ಗಂಟೆಯೊಳಗಾಗಿ ನಾಲ್ಕುಸಾವಿರ ಪ್ರತಿನಿಧಿಗಳು ಸತ್ಯಾಗ್ರಹಿಗಳಾಗಿ ನೋಂದಾಯಿಸಿಕೊಂಡರು. ಶಾಸನ ಸಭೆಯ ನಿರ್ಣಯದಂತೆ ಸಾರ್ವಜನಿಕ ಶಾಲೆ ಮಾರ್ಗ ತಟಾಕಗಳ ಪ್ರಯೋಜನ ಜಾತಿಮತ ಭೇದವಿಲ್ಲದೆ ಸರ್ವರಿಗೂ ಸಲ್ಲಬೇಕಾಗಿದೆಯೆಂದೂ, ವಿವಾದಾಸ್ಪದವಾದ ಕೆರೆ ಖಾಸಗಿ ಸ್ವತ್ತೆಂಬ ಕಾರಣದ ಮೇಲೆ ಸಿವಿಲ್ ಕೋರ್ಟಿನ ಮುಂದೆ ಮೊಕದ್ದಮೆ ಹೂಡಲಾಗಿದೆಯೆಂದೂ, ಅದು ತೀರ್ಮಾನವಾಗುವ ತನಕ ಸಂಯಮ ಅತ್ಯಗತ್ಯವೆಂದೂ, ಕಾನೂನು ಭಂಗವಾದರೆ ಸೂಕ್ತಕ್ರಮ ತೆಗೆದುಕೊಳ್ಳಬೇಕಾಗುತ್ತದೆಂದೂ, ಮೊದಲೇ ಗೊತ್ತಾಗಿದ್ದಂತೆ ಜಿಲ್ಲಾ ಮ್ಯಾಜಿಸ್ಟ್ರೇಟರು ಸಭೆಯಲ್ಲಿ ಭಾಷಣ ಮಾಡಿದರು. ಆ ಭಾಷಣದ ಪರಿಣಾಮವಾಗಿ ಪ್ರತಿನಿಧಿಗಳು ಕೆರಳಿ ಘೋಷಣೆ ಕೂಗ ತೊಡಗಿದರು. ಮಾರನೆಯ ದಿನ ಬೆಳಗಿನ ತನಕ ಸಭೆಯನ್ನು ಮುಂದೂಡಿ, ಅಂಬೇಡ್ಕರರು ಸಹೋದ್ಯೋಗಿಗಳೊಡನೆ ಇರುಳೆಲ್ಲ ಮಾತುಕತೆ ನಡೆಸಿದರು. ಮತ್ತೆ ಸಭೆ ಸೇರಿದಾಗ ಯುಕ್ತಿ ಯುಕ್ತವಾಗಿ ಮಾತಾಡಿ, ಪ್ರತಿನಿಧಿಗಳ ಕ್ರೋಧಾನಲವನ್ನು ತಂಪುಗೊಳಿಸಿ, ಮಹಾಮುತ್ಸದ್ದಿಯ ಕೌಶಲವನ್ನು ಮೆರೆದರು.

ಸಮ್ಮೇಲನ ಮುಕ್ತಾಯಗೊಳ್ಳುವ ಹೊತ್ತಿಗೆ ರಾತ್ರಿ ಹತ್ತು ಗಂಟೆ ಹೊಡೆದಿತ್ತು. ಸುಮಾರು ಮೂರುಸಾವಿರ ನಿಮ್ನ ವರ್ಗದ ಮಹಿಳೆಯರು ಸಭೆ ಸೇರಿ, ತಮ್ಮ ನೇತಾರನ ಉಪನ್ಯಾಸಾಮೃತವನ್ನು ಸವಿಯಲು ಸಿದ್ಧರಾಗಿದ್ದರು. "ಅಸ್ಪೃಶ್ಯರೆಂಬ ಭಾವನೆಯನ್ನು ನಿಮ್ಮ ಮನಸ್ಸಿನಿಂದ ತೊಲಗಿಸಿ. ನಡೆನುಡಿಗಳು ಶುದ್ಧವಾಗಿರಲಿ, ಉಡುವ ಬಟ್ಟೆ ತೇಪೆಯಾದರೂ ಮಡಿ

ಯಾಗಿರಲಿ ; ತೆಗೆದುಕೊಳ್ಳುವ ಆಹಾರ ಗಂಜಿಯಾದರೂ ಚೊಕ್ಕಟವಾಗಿರಲಿ. ಸವರ್ಣೀಯ ಹೆಂಗಸರಂತೆ ಬಟ್ಟೆಯುಟ್ಟುಕೊಳ್ಳಿ. ನಿಮ್ಮ ಗಂಡಂದಿರು ಮತ್ತು ಮಕ್ಕಳು ಕುಡುಕರಾಗಿದ್ದರೆ, ಊಟ ಹಾಕಬೇಡಿ. ಏನೇ ಕಷ್ಟವಿದ್ದರೂ ಮಕ್ಕಳನ್ನು ಶಾಲೆಗೆ ಕಳಿಸಿ, ನೀವು ಅಕ್ಷರ ಕಲಿಯಿರಿ. ಪ್ರಗತಿಗೆ ವಿದ್ಯೆಯೇ ಮೂಲ." ಎಂದವರು ಮಹಿಳೆಯರಿಗೆ ಬುದ್ಧಿವಾದ ಹೇಳಿದರು. ಸಾಮಾಜಿಕ ಸ್ವಾತಂತ್ರ್ಯ ಮೊದಲು, ರಾಜಕೀಯ ಸ್ವಾತಂತ್ರ್ಯ ಕೊನೆಗೆ ಎನ್ನುವ ಘೋಷಣೆ ಯೊಂದಿಗೆ. ತಾವಿನ್ನು ಅಸ್ಪೃಶ್ಯರಲ್ಲ ಎಂಬ ದೃಢ ನಿರ್ಧಾರದೊಡನೆ ಪ್ರತಿ ನಿಧಿಗಳು ತಂತಮ್ಮೂರುಗಳಿಗೆ ಹಿಂದಿರುಗಿದರು. ಬಾಬಾಸಾಹೇಬ್ ಅಂಬೇ ಡ್ಕರರು ಮಹಾರಾಷ್ಟ್ರದ ಅಥವಾ ನಿಮ್ನ ಜನಾಂಗದ ನಾಯಕ ಮಾತ್ರರಲ್ಲ, ಅವರು ರಾಷ್ಟ್ರನಾಯಕರೆಂಬ ಕೀರ್ತಿಯನ್ನು ಈ ಸಮ್ಮೇಲನ ಜಗತ್ತಿಗೆ ಸಾರಿತು. ಕೀರ್ತಿ ಹರಡಿದಂತೆಲ್ಲ, ಅವರು ತಮ್ಮ ಪ್ರಾಣರಕ್ಷಣೆಯ ಬಗ್ಗೆ ಎಚ್ಚರವಹಿಸಬೇಕಾಯಿತು.

ಮನುಸ್ಮೃತಿಯ ದಹನ ಈ ಸಮ್ಮೇಲನದ ಮಹತ್ಸಾಧನೆಗಳಲ್ಲೊಂದು. ಆ ದಹನ ಕ್ರಿಯೆಯ ಹಿಂದುಗಡೆ ದಾಸ್ಯ ವಿಮೋಚನಾ ಪ್ರವೃತ್ತಿಯಿತ್ತೇ ಹೊರತು ದ್ವೇಷವಿರಲಿಲ್ಲ. ಆ ಬಗ್ಗೆ ಅಂಬೇಡ್ಕರರೇ ಒಮ್ಮೆ ಹೇಳಿದ್ದುಂಟು. "ಅದೊಂದು ಉಗ್ರ ಕಾರ್ಯಕ್ರಮ ನಿಜ. ಸಾವಿರಾರು ವರ್ಷಗಳಿಂದ ಸಂಗ್ರಹವಾಗಿರುವ ಘೋರ ಸಂಕಟವನ್ನು ಪ್ರದರ್ಶಿಸಲು, ಮತ್ತು ಜಗತ್ತಿನ ಗಮನವನ್ನು ಸೆಳೆಯಲು ಅದೊಂದು ಸಾಧನವಾಯಿತು. ಜನ ಜಡವಾದಾಗ ಇಂಥ ಕಾರ್ಯಕ್ರಮ ಅನಿವಾರ್ಯ. ಕದ ಬಡಿಯದಿದ್ದರೆ ಯಾರೂ ತೆಗೆಯು ವುದಿಲ್ಲ. ಮಗು ಅರಚದಿದ್ದರೆ ತಾಯಿ ಹಾಲು ಕುಡಿಸುವುದಿಲ್ಲ. ಮನುಸ್ಮೃತಿ ಯಲ್ಲಿಯೂ ಮೌಲ್ಯ ಸಂಪನ್ನವಾದ ಸೂತ್ರಗಳಿವೆ. ಆದರೆ ಶೂದ್ರಾತಿಶೂದ್ರ ರನ್ನು ಕುರಿತ ಸಂಗತಿಗಳು ತಿರಸ್ಕಾರಾರ್ಹ." ಈ ವಿಷಯದಲ್ಲಿ ವೀರ ಅಂಬೇಡ್ಕರ್ ಅವರ ಮತ್ತು ವೀರ ಸಾವರ್ಕರ್ ಅವರ ಅಭಿಪ್ರಾಯಗಳಲ್ಲಿ ಹೆಚ್ಚು ವ್ಯತ್ಯಾಸವಿರಲಿಲ್ಲ. ಆಹಾರಾಭಾವದಿಂದ ದೇಶದಲ್ಲಿ ತುರ್ತುಪರಿಸ್ಥಿತಿ ಪ್ರಾಪ್ತವಾಗುವ ಪಕ್ಷಕ್ಕೆ ಗೋಮಾಂಸ ಭಕ್ಷಣೆ ಅನಿವಾರ್ಯವೆಂದು ಸಾವರ್ಕರ್ ಸಾರಿ ಸಾರಿ ಹೇಳಿದ್ದುಂಟು. ಹಿಂದೂಗಳ ಪವಿತ್ರ ಗ್ರಂಥಗಳನ್ನು ವೈಜ್ಞಾನಿಕ ಮತ್ತು ವೈಚಾರಿಕ ದೃಷ್ಟಿಯಿಂದ ವಿಮರ್ಶಿಸಿ, ಚಿರಂತನ ಮೌಲ್ಯಗಳುಳ್ಳ ಭಾಗಗಳನ್ನು ನಿತ್ಯಾಧ್ಯಯನಕ್ಕುಳಿಸಿಕೊಂಡು ಉಳಿದುವನ್ನು ವಸ್ತು ಸಂಗ್ರಹಾ

ಲಯಕ್ಕೊಪ್ಪಿಸಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ಮನುಸ್ಮೃತಿಯ ಸೂತ್ರಗಳನ್ನು ನಿಮ್ನವರ್ಗದ ಜನಕ್ಕನ್ವಯಿಸಬಾರದೆಂದು ಅವರು ಸ್ಪಷ್ಟವಾಗಿ ನುಡಿದಿದ್ದರು.

1919ರ ಇಂಡಿಯಾ ಸರ್ಕಾರ ಶಾಸನವನ್ನು ಪರಿಷ್ಕರಿಸಿ. ಸ್ವಾತಂತ್ರ್ಯ ಚಳುವಳಿಯ ಕಾವನ್ನು ತಗ್ಗಿಸುವ ಸಲುವಾಗಿ 1928ರ ಫೆಬ್ರುವರಿ 3 ರಂದು ಸೈಮನ್ ಕಮೀಷನ್ ಮುಂಬಯಿಯ ಬಂದರಿನಲ್ಲಿಳಿಯಿತು. ಭಾರತೀಯ ಪ್ರತಿನಿಧಿಗಳಿಲ್ಲದ ಆ ಕಮೀಷನನ್ನು ಬಹಿಷ್ಕರಿಸಬೇಕೆಂದು ಕಾಂಗ್ರೆಸ್ ಪಕ್ಷ ನಿರ್ಧರಿಸಿತು. "ಸೈಮನ್ನರೇ ಹಿಂದಿರುಗಿ" ಎಂಬ ಘೋಷಣೆ ಗಳೊಡನೆ ಅವರು ಹೋದೆಡೆಯಲ್ಲೆಲ್ಲ ಕಪ್ಪು ಬಾವುಟ ಪ್ರದರ್ಶನ ನಡೆದು ದಲ್ಲದೆ. ದೇಶಾದ್ಯಂತ ಪ್ರತಿಭಟನಾ ಸಭೆ ಮೆರವಣಿಗೆಗಳು ಜರುಗಿದುವು. ಲಾಹೋರಿನಲ್ಲಿ ಅವರಿಗೆ ವಿರುದ್ಧವಾಗಿ ನಡೆದ ಪ್ರದರ್ಶನದಲ್ಲಿ ಲಾಲಾ ಲಜಪತರಾಯರೇ ಮುಂದಾಳುಗಳಾಗಿದ್ದರು. ಪೋಲೀಸಿನವರ ಲಾಠಿಯೇಟಿಗೆ ಅವರು ಬಲಿಯಾದಾಗ ಅಂಬೇಡ್ಕರರು ಗೋಳೋ ಎಂದು ಅತ್ತುಬಿಟ್ಟರು. ಸಾರ್ವಜನಿಕ ಭಾಷಣದಲ್ಲಿ ಪೋಲೀಸರ ದೌರ್ಜನ್ಯವನ್ನು ಖಂಡಿಸಿದರು. ಕಮೀಷನ್ನಿಗೆ ಸಹಾಯವೊದಗಿಸುವ ದೃಷ್ಟಿಯಿಂದ ಕೇಂದ್ರ ಸರ್ಕಾರ ಪ್ರಾಂತ ಸಮಿತಿಗಳನ್ನು ರಚಿಸಿತ್ತು. ಮುಂಬಯಿ ಪ್ರಾಂತೀಯ ಸಮಿತಿಗೆ ಅಂಬೇಡ್ಕರ್ ಅವರನ್ನು ನಾಮಕರಣ ಮಾಡಲಾಗಿತ್ತು.

ಆ ಹೊತ್ತಿಗೆ ಅಂಬೇಡ್ಕರರು ಸರ್ಕಾರಿ ಕಾಲೇಜಿನಲ್ಲಿ ಪ್ರಾಧ್ಯಾಪಕ ರಾಗಿದ್ದರು. ದಿನ ಕಳೆದಂತೆಲ್ಲ ಹೆಚ್ಚುತ್ತಿದ್ದ ಸಾಮಾಜಿಕ ಮತ್ತು ರಾಜಕೀಯ ಕೆಲಸ ಕಾರ್ಯಗಳ ನಡುವೆ ವಕೀಲಿ ವೃತ್ತಿಗೆ ಬಿಡುವು ಸಿಗುತ್ತಿರಲಿಲ್ಲವಾಗಿ, ಜೀವನಯಾಪನೆಗೋಸ್ಕರ ಆ ಹುದ್ದೆಯನ್ನೊಪ್ಪಿಕೊಳ್ಳಬೇಕಾಗಿತ್ತು. ಅವರು ಸೈಮನ್ ಸಮಿತಿಯೊಡನೆ ಸಹಕರಿಸುವ ವಿಷಯ ತಿಳಿದಾಗ ವಿದ್ಯಾರ್ಥಿಗಳು ಅವರನ್ನು ಬ್ರಿಟಿಷರ ಕೈಗೊಂಬೆಯೆಂದು ದೇಶದ್ರೋಹಿಯೆಂದು ಶಾಪ ಹಾಕ ತೊಡಗಿದರು ; ಅಷ್ಟೇ ಅಲ್ಲ, ಅವರ ತರಗತಿಗಳನ್ನು ಬಹಿಷ್ಕರಿಸಿದರು.

ಅಂಬೇಡ್ಕರರು ಸೈಮನ್ ಕಮಿಷನ್ನನೊಡನೆ ಸಹಕರಿಸಿದ್ದು ನಿಮ್ನವರ್ಗ ದವರ ದೃಷ್ಟಿಯಿಂದ ತಪ್ಪೆನಿಸಲಿಲ್ಲ. ಸ್ವರಾಜ್ಯ ರಾಜ್ಯಾಂಗವನ್ನು ರಚಿಸುವ ಸಲುವಾಗಿ 1928ರ ಮೇ ತಿಂಗಳಲ್ಲಿ ಸೇರಿದ್ದ ಸರ್ವಪಕ್ಷ ಸಮ್ಮೇಲನ ಮೋತಿಲಾಲ್ ನೆಹ್ರೂರವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ನೇಮಿಸಿ

ತ್ರಿಷ್ಟೆ. ಮುಸ್ಲಿಮ್. ಪಾರ್ಸಿ. ಕ್ರಿಸ್ತ. ಸೀಖ್. ಆಂಗ್ಲೊ ಇಂಡಿಯನ್ ಸಂಸ್ಥೆಗಳ, ದ್ರಾವಿಡ ಮಹಾಜನ ಸಭೆಯ ಮತ್ತು ಬ್ರಾಹ್ಮಣೇತರ ಸಮಾಜದ ಪ್ರತಿನಿಧಿಗಳಿದ್ದ ಆ ಸಮ್ಮೇಲನದಲ್ಲಿ ಅಸ್ಪೃಶ್ಯ ಸಮಾಜಕ್ಕೆ ಪ್ರಾತಿನಿಧ್ಯವಿರಲಿಲ್ಲ. ಶಾಸನ ಸಭೆಗಳಲ್ಲಿ ಅಸ್ಪೃಶ್ಯ ಪ್ರತಿನಿಧಿಗಳಿಗೆ ಪ್ರತ್ಯೇಕಾವಕಾಶವನ್ನು ನೆಹ್ರೂ ವರದಿ ಕಲ್ಪಿಸಲಿಲ್ಲ. ಈ ಹಿನ್ನೆಲೆಯಲ್ಲಿ ಅಂಬೇಡ್ಕರರ ಆಗಿನ ಮನೋಧರ್ಮವನ್ನು ಗ್ರಹಿಸಬೇಕಾಗಿತ್ತು. ಬಹಿಷ್ಕೃತ ಹಿತಕಾರಿಣಿ ಸಭೆಯನ್ನೊಳಗೊಂಡು ಹದಿನೆಂಟು ನಿಮ್ನ ಜನರ ಸಂಘ ಸಂಸ್ಥೆಗಳು ಕಮಿಷನ್ನಿನ ಮುಂದೆ ಮನವಿಗಳನ್ನರ್ಪಿಸಿದುವು. ತಮ್ಮ ಜನಸಂಖ್ಯೆಗನುಗುಣವಾಗಿ ಶಾಸನ ಸಭೆಗಳಲ್ಲಿ ಪ್ರಾತಿನಿಧ್ಯವಿರಬೇಕೆಂದೂ, ಸದಸ್ಯರನ್ನು ನಾಮಕರಣ ಮಾಡದೆ ಚುನಾವಣೆಯ ಮೂಲಕ ಆರಿಸಬೇಕೆಂದೂ ಆ ಮನವಿಗಳಲ್ಲಿ ಕೋರಲಾಗಿತ್ತು. ತಮ್ಮವರಿಗೆ ಉಚಿತ ಶಿಕ್ಷಣ ಸೌಲಭ್ಯಗಳನ್ನು ಕಲ್ಪಿಸಬೇಕೆಂದೂ, ಸೈನ್ಯ ನೌಕಾ ಮತ್ತು ಪೋಲೀಸು ಖಾತೆಗಳಲ್ಲಿ ಹುದ್ದೆಗಳನ್ನು ಕಾದಿರಿಸಬೇಕೆಂದೂ ಬಿನ್ನವಿಸಲಾಗಿತ್ತು. 1928ರ ಅಕ್ಟೋಬರ್ 23ರಂದು ಅಂಬೇಡ್ಕರರು ಪುಣೆಯಲ್ಲಿ ಸೈಮನ್ ಕಮಿಷನ್ನಿನ ಮುಂದೆ ಹಾಜರಾಗಿ ಸಾಕ್ಷ್ಯ ನೀಡಿದರು.

ಮುಂಬಯಿ ಪ್ರಾಂತೀಯ ಸಮಿತಿ 1929ರ ಮೇ ತಿಂಗಳಲ್ಲಿ ತನ್ನ ವರದಿಯನ್ನು ಸೈಮನ್ ಕಮಿಷನ್ನಿಗೆ ರವಾನಿಸಿತು. ಅಂಬೇಡ್ಕರರು ಆ ವರದಿಗೆ ತಮ್ಮ ಸಹಿ ಹಾಕದೆ, ತಮ್ಮದೇ ಆದ ಪ್ರತ್ಯೇಕ ವರದಿಯನ್ನು ಸಲ್ಲಿಸಿದರು. "ಭಾಷೆಗೊಂದು ಪ್ರಾಂತ್ಯವೆನ್ನುವ ತತ್ತ್ವ ತಪ್ಪು : ಅದು ಪ್ರಯೋಗಾರ್ಹವೂ ಅಲ್ಲ. ಜನತೆಯಲ್ಲಿ ಏಕರಾಷ್ಟ್ರೀಯತಾ ಮನೋಭಾವನೆಯನ್ನು ಮೂಡಿಸಬೇಕಾದ್ದು ಸದ್ಯದ ಅಗತ್ಯವಾಗಿದೆ. ಹಿಂದೂ, ಮಹಮ್ಮದೀಯ. ಸಿಂಧಿ, ಕನ್ನಡಿಗ ಎಂಬ ಪ್ರತ್ಯೇಕತಾಭಾವನೆ ತೊಲಗಿ, ನಾನು ಮೊದಲು ಭಾರತೀಯ, ಕೊನೆಗೂ ಭಾರತೀಯನೆಂದುಕೊಳ್ಳುವಂಥ ವಾತಾವರಣ ಸೃಷ್ಟಿಸಬೇಕು. ಮಹಮ್ಮದೀಯ ಪ್ರಾಂತ್ಯವನ್ನಾಗಿ ಮಾರ್ಪಡಿಸುವ ಪ್ರಯತ್ನ ಸಿಂಧ್‌ಪ್ರಾಂತ ರಚನೆಯ ಹಿನ್ನೆಲೆಯಲ್ಲಿದೆ. ಜಾತಿ ಮತಗಳ ಆಧಾರದಮೇಲೆ ರಾಜ್ಯಗಳನ್ನು ಪುನರ್ವಿಂಗಡಿಸುವ ನೀತಿ ಅಪಾಯಕಾರಿ. ಮುಸ್ಲಿಮರಿಗಾಗಿ ಪ್ರತ್ಯೇಕ ಚುನಾವಣಾ ಕ್ಷೇತ್ರಗಳನ್ನು ಕಲ್ಪಿಸುವ ಯೋಚನೆ ಅಸಂಗತವಾದುದು. ಅಲ್ಪ ಸಂಖ್ಯೆಯ ಮುಸ್ಲಿಮರಿರುವ ರಾಷ್ಟ್ರ ಇಂಡಿಯಾ ಒಂದೆಯಲ್ಲ. ಯುಗೋಸ್ಲಾವಿಯಾ. ರಷ್ಯಾ. ಅಲ್ಬೇನಿಯಾಗಳಲ್ಲಿ ಅವರ ಸಂಖ್ಯೆ ಸಾಕಷ್ಟಿದೆ. ಬಲ್ಗೇರಿಯಾ,

ಗ್ರೀಸ್ ಮತ್ತು ರುಮೇನಿಯಾಗಳಲ್ಲಿ ಅವರು ಅಲ್ಪಸಂಖ್ಯಾತರಾಗಿದ್ದಾರೆ. ಅಲ್ಲೆಲ್ಲ ಅವರಿಗೆ ಪ್ರತ್ಯೇಕ ಚುನಾವಣಾ ಕ್ಷೇತ್ರಗಳಿವೆಯೇ? ಅಥವಾ ಪ್ರತ್ಯೇಕ ಪ್ರಾತಿನಿಧ್ಯವಿದೆಯೆ? ಮತೀಯ ಪ್ರಾತಿನಿಧ್ಯ ರಾಷ್ಟ್ರಾಭ್ಯುದಯಕ್ಕೆ ಮಾರಕ. ಭೌಗೋಳಿಕ ಚುನಾವಣಾ ಕ್ಷೇತ್ರವಾಗಲೀ ಪ್ರತ್ಯೇಕ ಚುನಾವಣಾ ಕ್ಷೇತ್ರವಾಗಲೀ ಪ್ರಜಾಸತ್ತೆಗೆ ವಿರೋಧಿ. ಅನಿವಾರ್ಯ ಕಾರಣಗಳಿಂದಾಗಿ ಕೆಲವರಿಗೆ ಸ್ಥಾನಗಳನ್ನು ಕಾದಿರಿಸಬೇಕಾದ ಸಂದರ್ಭವೊದಗಿದಾಗಲೂ ಜಂಟಿ ಚುನಾವಣಾ ಕ್ಷೇತ್ರಪದ್ಧತಿಯೇ ಶ್ರೇಯಸ್ಕರ." ಈ ಅಭಿಪ್ರಾಯಗಳು ಪತ್ರಿಕೆಗಳಲ್ಲಿ ಪ್ರಕಟಗೊಂಡಾಗ ಅವರ ಗೆಳೆಯರು ಮಾತ್ರವಲ್ಲ, ಕಡುವಿರೋಧಿಗಳೂ ಅವರ ಮುತ್ಸದ್ದಿತನ, ರಾಜನೀತಿ ಕೌಶಲ ಮತ್ತು ದೇಶಾಭಿಮಾನಗಳನ್ನು ಮನಸಾರೆ ಹೊಗಳಿದರು.

ದಾಸ್ಯ ದಾರಿದ್ರ್ಯಗಳಿಗೆ ನಿರಕ್ಷರತೆಯೆ ಮೂಲವೆಂಬ ಕಾರಣದಿಂದ, ನಿಮ್ನವರ್ಗದ ವಿದ್ಯಾರ್ಥಿಗಳ ಶಿಕ್ಷಣಕ್ಕೆ ಭದ್ರ ಬುನಾದಿ ನಿರ್ಮಿಸುವ ದೃಷ್ಟಿಯಿಂದ, ಅವರು 1928ರ ಜುಲೈ ತಿಂಗಳಲ್ಲಿ ನಿಮ್ನವರ್ಗೀಯ ಶಿಕ್ಷಣ ಸೊಸೈಟಿಯನ್ನು ಪ್ರಾರಂಭಿಸಿದರು. ಅವರು ಕಾರ್ಯದರ್ಶಿಯಾಗಿ, ಶಿವತರ್ಕರ್ ಖಜಾಂಚಿಯಾಗಿಯೂ ಇದ್ದ ಧರ್ಮದರ್ಶಿಮಂಡಲಿ ಸೊಸೈಟಿಯ ಆಡಳಿತವನ್ನು ನೋಡಿಕೊಳ್ಳುತ್ತಿತ್ತು. ಅದು ದಾನಿಗಳ ನೆರವಿನ ಜತೆಗೆ ಸರ್ಕಾರದಿಂದ ಧನಸಹಾಯ ಪಡೆದು, ನಾಲ್ಕೈದು ವಿದ್ಯಾರ್ಥಿನಿಲಯಗಳನ್ನು ಅಸ್ತಿತ್ವಕ್ಕೆ ತಂದಿತು. ಊಟವಸತಿಗಳ ಜತೆಗೆ ಶಾಲೆಯ ವೆಚ್ಚದ ಭಾರವನ್ನೂ ಸೊಸೈಟಿ ಹೊತ್ತುಕೊಂಡಿದ್ದುದರಿಂದ, ಆದಾಯ ಸಾಲದೆ ಸಾಲಮಾಡಬೇಕಾಗುತ್ತಿತ್ತು. ಮುಸ್ಲಿಮ್ ಮತ್ತು ಪಾರ್ಸಿಗಳಿಂದ ಸೊಸೈಟಿಗೆ ದೊರೆಯುತ್ತಿದ್ದ ಸಹಾಯ ಸಹಾನುಭೂತಿಗಳು ಸವರ್ಣೀಯರಿಂದ ಲಭಿಸುತ್ತಿರಲಿಲ್ಲ. ಸಹಾಯ ಬೇಡ, ಹಿಂದೂಗಳು ಮನೆಗಳನ್ನು ಸಹ ಬಾಡಿಗೆಗೆ ಕೊಡುತ್ತಿರಲಿಲ್ಲ : ಅನಿವಾರ್ಯವಾಗಿ ಕೊಡಬೇಕಾಗಿ ಬಂದಾಗ ತುಟ್ಟಿಬಾಡಿಗೆ ಕಸಿದುಕೊಳ್ಳುತ್ತಿದ್ದರು.

ಆಗಿನ ಮಧ್ಯಪ್ರಾಂತದ ಜಲಗಾಂ ಎಂಬ ಊರಲ್ಲಿ ನಡೆದ ನಿಮ್ನಜಾತೀಯರ ಸಭೆಯಲ್ಲಿ ಮಾಡಿದ ತಮ್ಮ ಅಧ್ಯಕ್ಷ ಭಾಷಣದಲ್ಲಿ ಗೊತ್ತಾದ ಸಮಯದೊಳಗಾಗಿ ಹಿಂದುಗಳು ತಮ್ಮ ಬೇಡಿಕೆಗಳನ್ನೀಡೇರಿಸದಿದ್ದರೆ ಅಸ್ಪೃಶ್ಯರು ಅನ್ಯಮತವನ್ನಪ್ಪಿಕೊಳ್ಳಬೇಕಾಗುತ್ತದೆಂದು ಅಂಬೇಡ್ಕರರು ಕರೆಕೊಟ್ಟರು. ಕೆಲವು ಹಕ್ಕುಗಳನ್ನು ಕಸಿದುಕೊಳ್ಳುವುದಕ್ಕಾಗಿ ಹೂಡಿದ ಹೂಟವೆಂದು,

ಹಾಕಿದ ಗೊಡ್ಡು ಬೆದರಿಕೆಯೆಂದು ಆ ಊರಿನ ಸವರ್ಣೀಯರು ಅವರ ಭಾಷಣ ವನ್ನು ವ್ಯಾಖ್ಯಾನಿಸಿದರು. ಗೊತ್ತಾದ ದಿನ ಸನ್ನಿಹಿತವಾದಾಗ, ಅಂದರೆ 1929ರ ಜೂನ್ ತಿಂಗಳ ಮೊದಲನೆಯ ವಾರದಲ್ಲಿ ಹನ್ನೆರಡು ಮಂದಿ ಮಹರರು ಇಸ್ಲಾಂ ಮತಕ್ಕೆ ಸೇರಿದರು. ಆ ಕೂಡಲೇ ಹಿಂದುಗಳು ಸಭೆ ಸೇರಿ, ಅವರ್ಣೀಯರು ಎರಡು ಬಾವಿಗಳನ್ನು ಬಳಸಬಹುದೆಂದು ತೀರ್ಮಾನಿಸಿದರು. ನಿಮ್ನ ಜಾತಿಯ ಜನ ಹಿಂದುಗಳಿಂದ ಕೆಲವು ಸವಲತ್ತುಗಳನ್ನು ಗಿಟ್ಟಿಸಿ ಕೊಳ್ಳಲಿಕ್ಕೆ ಕ್ರಿಶ್ಚಿಯನ್ ಮತ್ತು ಮುಸ್ಲಿಮ್ ಮತಗಳ ಒತ್ತಡ ಸಹಾಯಕ ವಾಗಿದೆಯೆಂದು ಕೆಲದಿನಗಳನಂತರ ಅಂಬೇಡ್ಕರರು ಕಟಕಿಯಾಡಿದರು.

ಹರಿಜನಗಿರಿಜನರ ಸಾಮಾಜಿಕಾರ್ಥಿಕ ಶೈಕ್ಷಣಿಕ ಸ್ಥಿತಿಗತಿಗಳನ್ನು ಪರಿ ಶೀಲಿಸಿ ಅವರ ಏಳ್ಗೆಗಾಗಿ ಸಲಹೆಗಳನ್ನು ಕೊಡಲೆಂದು ಮುಂಬಯಿ ಸರ್ಕಾರ ದಿಂದ ನೇಮಕಗೊಂಡಿದ್ದ ಸಾರ್ತೆ ಸಮಿತಿಯ ಕಾರ್ಯ ಕಲಾಪಗಳು ಅಂಬೇ ಡ್ಕರರ ವೇಳೆಯನ್ನು ಸೂರೆಗೊಳ್ಳುತ್ತಿದ್ದುವು. ಆ ಸಮಿತಿಯ ಸದಸ್ಯರಾಗಿ ಅವರು ಅನೇಕ ಜಿಲ್ಲೆಗಳಲ್ಲಿ ಪ್ರವಾಸ ಮಾಡಬೇಕಾಗಿತ್ತು. ಒಂದು ಊರಿನ ಪ್ರಾಥಮಿಕ ಶಾಲೆಯಲ್ಲಿ ನಿಮ್ನ ಜಾತಿಯ ಮಕಳನು ಹೊರಗೆ ಕೂರಿಸು ತ್ತಿದ್ದುದಾಗಿ ದೂರು ಬಂದಿದ್ದರಿಂದ ತಾವೇ ಖುದ್ದಾಗಿ ವಾಸ್ತವಸ್ಥಿತಿಯನ್ನರಿ ಯುವ ಸಲುವಾಗಿ ಆ ಶಾಲೆಗೆ ಹೋದರು. ಅವರು ಶಾಲೆಯೊಳಗೆ ಕಾಲಿಡದಂತೆ ಮುಖ್ಯೋಪಾಧ್ಯಾಯರು ತಡೆದರು. ಪೂರ್ವ ಖಾಂದೇಶದ ಚಾಲಿಸ್‌ಗಾಂ ಹಳ್ಳಿಗೆ ಹೋದಾಗ, ಅಲ್ಲಿಯ ಅಸ್ಪೃಶ್ಯರು ಅವರನ್ನು ತಮ್ಮ ಕೇರಿಗೆ ಆಹ್ವಾನಿಸಿದರು. ಯಾವ ಟಾಂಗಾ ಚಾಲಕನೂ ಅವರನ್ನು ತನ್ನ ಗಾಡಿಯಲ್ಲಿ ಕೂರಿಸಲು ಸಿದ್ಧವಾಗಿರಲಿಲ್ಲ. ಗಾಡಿಯನ್ನು ತಾನೇ ಹೊಡೆಯುವುದಾಗಿ ಕೊನೆಗೊಬ್ಬ ಅಸ್ಪೃಶ ಯುವಕ ಮುಂದೆ ಬಂದ. ಅವನಿಗೆ ಗಾಡಿ ಓಡಿಸಿ ರೂಢಿಯಿರಲಿಲ್ಲ. ಕುದುರೆ ಒದರಾಡಲಾಗಿ ಗಾಡಿ ಓರೆಯಾಯಿತು. ಅಂಬೇ ಡ್ಕರರು ಕೆಳಗೆ ಬಿದ್ದು, ಬಲಗಾಲಿನ ಮೂಳೆ ಮುರಿದು, ಎರಡು ತಿಂಗಳು ಹಾಸುಗೆಯಲ್ಲೊರಗಬೇಕಾಯಿತು. ಈ ಘಟನೆ ನಡೆದದ್ದು 1929ನೆಯ ಅಕ್ಟೋಬರ್ 23ರಂದು. ಹಾಸುಗೆಯಿಂದೆದ್ದ ಮೇಲೆಯೂ ಕೆಲವು ದಿನ ಊರೆಗೋಲು ಹಿಡಿಯಬೇಕಾಯಿತು.

ಅವರು ಹಾಸುಗೆಯ ಮೇಲೊರಗಿಕೊಂಡು ಶಾರೀರಕ ವಿಶ್ರಾಂತಿ ಪಡೆಯುತ್ತಿದ್ದರೂ ಅವರ ಬುದ್ಧಿ ಪಾದರಸದಂತೆ ಚುರುಕಾಗಿತ್ತು. ಆ

ಸಮಯದಲ್ಲಿ ಪುರೋಹಿತಶಾಹಿಗೆ ವಿರುದ್ಧವಾಗಿ ಪಾರ್ಸಿ ಗೃಹಸ್ಥನೊಬ್ಬ ಬರೆದಿದ್ದ ಲೇಖನವೊಂದ ಅವರ ಕಣ್ಗೆ ಬಿತ್ತು. ಅವರು ಆ ಲೇಖನಕ್ಕೆ ಪೂರಕವಾಗಿಯೆಂಬಂತೆ ಪ್ರಬಂಧವೊಂದನ್ನು ಬರೆದು ಪ್ರಕಟಿಸಿದರು. "ನಾಗರಿಕತೆಯ ಚಕ್ರಕ್ಕೆ ಅವನೊಂದು ತಡೆದಿಮ್ಮಿಯಾಗಿದ್ದಾನೆ. ಅವನ ಪೈಶಾಚಿಕ ಪ್ರತಿಭೆಯ ಛಾಯೆ ಸದಾ ಸಾಮಾನ್ಯ ಜನತೆಯನ್ನು ಸುತ್ತುವರಿದಿರುತ್ತದೆ. ಅಗೋಚರ ಶಕ್ತಿಗಳ ಮತ್ತು ಅಸಹಾಯಕ ಮಾನವನ ನಡುವಣ ದಳ್ಳಾಳಿಯಂತೆ ನಟಿಸುತ್ತ ಹೊಟ್ಟೆ ಹೊರೆದುಕೊಳ್ಳುತ್ತಿದ್ದಾನೆ. ಮದುವೆಯಾಗಲಿ ತಿಥಿಯಾಗಲಿ ಅವನ ಸುಲಿಗೆ ಮಾತ್ರ ಏಕರೀತಿಯಾಗಿ ನಡೆಯುತ್ತದೆ. ಅವನ ಪ್ರಾರ್ಥನೆಯ ಗುರಿ ಸಾಮಾನ್ಯರ ಬಲಿ. ಪುರೋಹಿತ ಯಾವ ಮತಕ್ಕೆ ಸೇರಿರಲಿ. ಅವನು ವಂಚಕ ಮತ್ತು ಸಮಾಜ ದ್ರೋಹಿ. ಸರ್ವಮತೀಯರು ಒಟ್ಟಾಗಿ ಕಲೆತು ಈ ಪುರೋಹಿತಶಾಹಿಯ ನಿರ್ಮೂಲನಕ್ಕೆ ಸರ್ವಪ್ರಯತ್ನಗಳನ್ನು ನಡೆಸಬೇಕು". ಇದು ಅವರ ಪ್ರಬಂಧದ ಸಾರಾಂಶ.

## ೪. ಯಶೋವೈಭವ

ಭಾರತೀಯ ಇತಿಹಾಸದಲ್ಲಿ 1930 ನೆಯ ಸಂವತ್ಸರ ಎರಡು ಕಾರಣಗಳಿಂದಾಗಿ ಚಿರಸ್ಮರಣೀಯವಾಗಿದೆ. ಮಾರ್ಚಿ 12 ರಂದು ಕಾಂಗ್ರೆಸ್ಸಿನ ನೇತಾರರಾದ ಮಹಾತ್ಮ ಗಾಂಧಿಯವರು ದಂಡಿ ಸತ್ಯಾಗ್ರಹವನ್ನು ಕೈಗೊಳ್ಳುವ ಮೂಲಕ ನಾಡಿನಾದ್ಯಂತ ಅಹಿಂಸಾತ್ಮಕ ಚಳುವಳಿಗೆ ನಾಂದಿ ಹಾಡಿದರು. ಹನ್ನೆರಡು ದಿನಗಳಿಗೆ ಮುಂಚೆಯೇ ದೀನದಲಿತರ ಬಂಧುವಾದ ಅಂಬೇಡ್ಕರರು ನಾಸಿಕದಲ್ಲಿ ದೇವಾಲಯ ಪ್ರವೇಶ ಚಳುವಳಿಯನ್ನಾರಂಭಿಸುವ ಮೂಲಕ ಭರತಖಂಡದಲ್ಲಿ ಸಾಮಾಜಿಕ ಕ್ರಾಂತಿಗೆ ಚಾಲನೆ ನೀಡಿದರು. ಗೊತ್ತಾದ ಕಾಲದೊಳಗಾಗಿ ಕಲಾರಾಮ ದೇವಾಲಯದೊಳಗೆ ಪ್ರವೇಶಿಸಲು ಅನುಮತಿ ನೀಡದಿದ್ದರೆ ತಾವು ಸತ್ಯಾಗ್ರಹ ಹೂಡುವುದಾಗಿ ನಿಮ್ನ ಜಾತೀಯ ಸತ್ಯಾಗ್ರಹ ಸಮಿತಿಯ ಕಾರ್ಯದರ್ಶಿ ಭಾವುರಾವ್ ಗಾಯಕವಾಡರು ದೇವಾಲಯದ ಧರ್ಮದರ್ಶಿ ಮಂಡಲಕ್ಕೆ ನೋಟೀಸು ಕೊಟ್ಟರು. ಆ ವೇಳೆಗೆ ನಾಸಿಕಕ್ಕೆ ಬಂದು ಶ್ರೀರಾಮನನ್ನು ಪೂಜಿಸುವ ಹಕ್ಕನ್ನು ಚಲಾಯಿಸಬೇಕೆಂದು ಎಲ್ಲ ಕಡೆಯ ಅಂತ್ಯಜರನ್ನು ಆಹ್ವಾನಿಸಲಾಯಿತು. ಆ ಆಹ್ವಾನಕ್ಕೆ ಉತ್ತರವಾಗಿ ಹದಿನೈದು ಸಹಸ್ರ ಸ್ವಯಂ ಸೇವಕರು ಬಂದು, ವಿಶೇಷ ಸಂದರ್ಭಕ್ಕಾಗಿ ಸಮೆದಿದ್ದ ಮಂಟಪದಲ್ಲಿ ಜಮಾಯಿಸಿದರು. ಅವರಲ್ಲಿ ದೇವರಾವ್ ನಾಯಿಕ್, ರಾಜಭೋಜ್, ಪ್ರಧಾನ್, ಶಿವತರ್ಕರ್ ಮತ್ತು ಬಿ. ಜಿ. ಖೇರ್ ಮುಖ್ಯರು. ಮಾರ್ಚಿ ಎರಡರಂದು ಬೆಳಗ್ಗೆ ಹತ್ತು ಗಂಟೆಗೆ ಅಂಬೇಡ್ಕರರ ಅಧ್ಯಕ್ಷತೆಯಲ್ಲಿ ಸಭೆ ಸೇರಿ, ಮುಂದೆ ಅನುಸರಿಸಬೇಕಾದ ಕಾರ್ಯವಿಧಾನ

ವನ್ನು ಕುರಿತು ಚರ್ಚಿಸಲಾಯಿತು. ಮೂರು ಗಂಟೆಗೆ ಮೆರವಣಿಗೆ ಮಂಟಪ ದಿಂದ ದೇವಾಲಯದ ಕಡೆಗೆ ಹೊರಟಿತು. ಪೋಲೀಸು ಪಡೆ ದೇವಾಲಯವನ್ನು ಸುತ್ತುವರಿದಿತ್ತು. ಬಾಗಿಲುಗಳಿಗೆ ಬೀಗಮುದ್ರೆ ಹಾಕಿದ್ದುದರಿಂದ ಅಲ್ಲಿಗೆ ಬಂದ ಮೆರವಣಿಗೆ ಸಭೆಯಾಗಿ ಪರಿವರ್ತನೆ ಹೊಂದಿತು. ಮಾರನೆಯ ದಿನದಿಂದ ಅಹಿಂಸಾತ್ಮಕ ಚಳುವಳಿಯನ್ನು ಪ್ರಾರಂಭಿಸುವುದೆಂದು ತೀರ್ಮಾನವಾಯಿತು.

125 ಪುರುಷರು 25 ಮಹಿಳೆಯರು ಇದ್ದ ಮೊದಲನೆಯ ತಂಡ ದೇವಾಲಯದ ನಾಲ್ಕು ಕಡೆಯ ಬಾಗಿಲುಗಳಲ್ಲಿ ಕುಳಿತದ್ದಾಯಿತು. ತಂಡ ತಂಡವಾಗಿ ಕೂರಲು ಎಂಟು ಸಾವಿರ ಸತ್ಯಾಗ್ರಹಿಗಳು ಸಜ್ಜಾಗಿದ್ದರು. ಸ್ಪೃಶ್ಯರೂ ದೇವಾಲಯದೊಳಗೆ ಪ್ರವೇಶಿಸುವಂತಿರಲಿಲ್ಲ. ಧರ್ಮದರ್ಶಿಗಳು ಬೇರೆ ಕಡೆ ಸಭೆ ಸೇರಿ. ಇಕ್ಕಟ್ಟಿನಿಂದ ಪಾರಾಗುವ ಉಪಾಯ ಹುಡುಕುತ್ತಿದ್ದರು. ಒಂದು ತಿಂಗಳಾದರೂ ಸಮಸ್ಯೆ ಬಗೆಹರಿಯಲಿಲ್ಲ. ಸತ್ಯಾಗ್ರಹ ನಿಲ್ಲಲಿಲ್ಲ. ರಥೋತ್ಸವದ ದಿನವೂ ಸನ್ನಿಹಿತವಾಯಿತು. ಸವರ್ಣೀಯರು ಅನಿವಾರ್ಯ ವಾಗಿ ರಾಜಿ ಮಾಡಿಕೊಳ್ಳಬೇಕಾಯಿತು. ಎರಡು ಕಡೆಯ ಜನ ರಥವನ್ನೆಳೆ ಯುವುದೆಂದು ತೀರ್ಮಾನವಾಯಿತು. ಆ ದೃಶ್ಯವನ್ನು ನೋಡುವ ಸಲುವಾಗಿ ಮಧ್ಯಾಹ್ನದ ಹೊತ್ತಿಗೆ ಸಾವಿರಾರು ಜನರು ದೇವಾಲಯದ ಮಹಾದ್ವಾರ ದಲ್ಲಿ ನೆರೆದರು. ಆ ಗುಂಪಿನಲ್ಲಿ ಅಂಬೇಡ್ಕರರೂ ತಮ್ಮ ಕಡೆಯ ಬಲಿಷ್ಠ ರೊಡನೆ ನಿಂತಿದ್ದರು. ಬೇಕೆಂದೇ ಕೆಲವು ಸವರ್ಣೀಯರು ರಥವೆಳೆಯಲು ಸನ್ನದ್ಧರಾಗಿ ನಿಂತಿದ್ದ ಅವರ್ಣೀಯರೊಡನೆ ವಾಕ್ಕಲಹವಾರಂಭಿಸಿದರು. ಆ ಸಮಯವನ್ನೇ ಕಾದುಕೊಂಡಿದ್ದ ಸವರ್ಣೀಯರ ಬೇರೊಂದು ಗುಂಪು ರಥವನ್ನೆಳೆದುಕೊಂಡು ಮುಳ್ಳಿಡಿದ ಇಕ್ಕಟ್ಟಾದ ರಸ್ತೆಯಲ್ಲಿ ಓಡಿತು. ಕದ್ರೇಕರ್ ಎಂಬ ಭಂಡಾರಿ ಹುಡುಗ ಪೋಲೀಸರ ರಕ್ಷಾವರಣವನ್ನು ಮುರಿದು, ರಥದ ಹಿಂದೆ ಧಾವಿಸಿದನು. ಅಸ್ಪೃಶ್ಯರ ಗುಂಪು ಅವನನ್ನು ಹಿಂಬಾಲಿಸಿತು. ಎರಡು ಕಡೆಯಿಂದಲೂ ಕಲ್ಲು ತೂರಾಟವಾಗಿ ಕದ್ರೇಕರ್ ರಕ್ತದ ಮಡುವಿನಲ್ಲಿ ಮುಳುಗಿದನು. ಅಂಬೇಡ್ಕರರ ರಕ್ಷಣೆಗೆಂದು ಹಿಡಿದಿದ್ದ ಚತ್ರಿ ಛಿದ್ರಛಿದ್ರ ವಾಯಿತಲ್ಲದೆ, ಅವರೂ ಗಾಯಗೊಂಡರು. ಪೋಲೀಸರು ಅಸಹಾಯಕ ರಂತೆ ದೊಂಬಿಗಾಳಗವನ್ನು ವೀಕ್ಷಿಸುತ್ತಿದ್ದರು.

ಈ ಸತ್ಯಾಗ್ರಹದ ಫಲವಾಗಿ ಪ್ರತೀಕಾರ ಮನೋಭಾವ ಇಡೀ ಜಿಲ್ಲೆ ಯಲ್ಲೆಲ್ಲ ಹಬ್ಬಿತು. ಶಾಲೆಗಳಿಂದ ಅಸ್ಪೃಶ್ಯರ ಮಕ್ಕಳನ್ನು ಹೊರದೂಡ

ಲಾಯಿತು. ಅವರು ಬೀದಿಗಳಲ್ಲಿ ಅಡ್ಡಾಡುವಂತಿರಲಿಲ್ಲ. ಅಂಗಡಿ ಮುಂಗಟ್ಟು ಗಳಲ್ಲಿ ಅವರಿಗೆ ಅತ್ಯವಶ್ಯಕವಾದ ಸಾಮಾನುಗಳು ದೊರೆಯುವಂತಿರಲಿಲ್ಲ. ಎಲ್ಲೆಲ್ಲಿಯೂ ಹಾಕಿದ ಬಹಿಷ್ಕಾರದಿಂದಾಗಿ ಅವರ ಬಾಳು ಅಸ್ತವ್ಯಸ್ತ ಗೊಂಡಿತು ; ಜೀವನಯಾಪನೆ ಕಷ್ಟವಾಯಿತು. ಅಷ್ಟಾದರೂ ನಾಸಿಕ್ ಚಳುವಳಿ ಮಾತ್ರ ನಿಲ್ಲಲಿಲ್ಲ. ಡಾ॥ ಮೂಂಜೆ, ಕುರ್ತಕೋಟಿ ಶಂಕರಾಚಾರ್ಯ, ಬಿರ್ಲ ಮೊದಲಾದ ಜ್ಯೇಷ್ಠರು ನಡೆಸಿದ ಸಂಧಾನ ಫಲಕಾರಿಯಾಗಲಿಲ್ಲ. ಇಡೀ ವರ್ಷ ದೇವಾಲಯಕ್ಕೆ ದಿಗ್ಬಂಧನವಾಯಿತು.

ನಾಸಿಕ್ ಸತ್ಯಾಗ್ರಹ ಬಿರುಸಿನಿಂದ ನಡೆಯುತ್ತಿರುವಾಗಲೇ, ಸೈಮನ್ ಕಮಿಷನ್ ವರದಿಯ ಪರಿಶೀಲನಾರ್ಥವಾಗಿ ಅಖಿಲಭಾರತೀಯ ನಿಮ್ನವರ್ಗದ ಜನರ ಸಮ್ಮೇಲನ ನಾಗಪುರದಲ್ಲಿ 1930 ನೆಯ ಆಗಸ್ಟ್ 8 ರಂದು ಅಂಬೇಡ್ಕರರ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡಿತು. "ಸ್ವತಂತ್ರ ಭಾರತದ ರಾಜ್ಯಾಂಗ ರಚನಾವಸರದಲ್ಲಿ ಇಲ್ಲಿಯ ಜನರ ಮತ್ತು ಸ್ಥಿತಿಗತಿಗಳ ಸ್ವರೂಪ ವೈವಿಧ್ಯವನ್ನು ಗಮನಿಸಬೇಕಾಗುತ್ತದೆ. ಒಂದು ದೇಶ ಮತ್ತೊಂದು ದೇಶ ವನ್ನಾಳುವುದು ನೈತಿಕವಾಗಿ ಸಾಧುವಲ್ಲ; ಅಂತೆಯೇ ಒಂದುವರ್ಗ ಮತ್ತೊಂದು ವರ್ಗವನ್ನಾಳುವುದು ತರವಲ್ಲ. ವ್ಯಕ್ತಿ ವಿಕಾಸಕ್ಕೆ ಸೂಕ್ತಾವಕಾಶ ಕಲ್ಪಿಸ ಬೇಕಾದ್ದು ಸರ್ಕಾರದ ಆದ್ಯ ಕರ್ತವ್ಯ. ಸಂಸ್ಕೃತಿ ನಾಗರಿಕತೆಗಳ ಪ್ರಯೋಜನ ಹಲವರಿಗೆ ದೊರೆಯುದ ರೀತಿಯಲ್ಲಿ ರಾಜ್ಯಭಾರ ನಡೆಸಿದ ಜನ ಬರ್ಬರರಿಗಿಂತ ಕಡೆ. ಅಧಿಕಾರ ವರ್ಗಾವಣೆ ನ್ಯಾಯಯುತವಾದ ಅಧಿಕಾರ ಹಂಚಿಕೆಯಲ್ಲಿ ಪರಿಸಮಾಪ್ತಿಗೊಳ್ಳಬೇಕು. ಬ್ರಿಟಿಷರ ಆಗಮನ ಈಶ್ವರೇಚ್ಛೆ ಯೆಂದೇ ತೋರುತ್ತದೆ. ಅವರ ಸಂಪರ್ಕದಿಂದಾಗಿ ಭಾರತೀಯರಲ್ಲಿ ಬೌದ್ಧಿಕ ಜಾಗೃತಿಯುಂಟಾಯಿತು. ಸ್ವಾತಂತ್ರ್ಯ ಸಮಾನತೆ ಭ್ರಾತೃತ್ವಗಳ ಕಲ್ಪನೆ ರೂಪು ಗೊಂಡಂತಾಯಿತು, ಸಾಂಪ್ರದಾಯಿಕ ಮೌಢ್ಯಭಾವನೆಗಳು ತತ್ತರಿಸುವಂತಾ ಯಿತು: ಸಾಮಾಜಿಕ ವ್ಯವಸ್ಥೆಯ ಪುನರ್ಮೌಲ್ಯೀಕರಣ ಸಾಧ್ಯವಾಯಿತು: ಸರ್ಕಾರ ಮತ್ತು ಕಾನೂನಿನ ವ್ಯವಸ್ಥೆಯಲ್ಲಿ ಏಕರೂಪತೆ ಸಾಧಿಸಿದಂತಾಯಿತು. ಇಷ್ಟೆಲ್ಲ ನಿಜವಾದರೂ, ಆಂಗ್ಲರ ಆಳ್ವಿಕೆ ತುಂಬ ದುಬಾರಿ. ಭಾರತದಲ್ಲಿ ತಲೆ ದೋರಿದ ಕ್ಷಾಮಡಾಮರಗಳಿಗೆ ಅದೇ ಕಾರಣವೆಂಬುದನ್ನು ಮರೆಯುವಂತಿಲ್ಲ. ಮನುಷ್ಯನ ಜೀವಿಕೆಗೆ ಕಾನೂನು ವ್ಯವಸ್ಥೆಯಲ್ಲ : ಅನ್ನಬೆಣ್ಣೆ ಮುಖ್ಯ. ರಾಜಕೀಯಾಧಿಕಾರದಿಂದಲೇ ನಮ್ಮವರಿಗೆ ಮೋಕ್ಷ : ಸ್ವರಾಜ್ಯ ಸಂಪಾದನೆ

ಯಾಗದೆ ರಾಜಕೀಯಾಧಿಕಾರವಿಲ್ಲ. ಆದ್ದರಿಂದ ಸ್ವರಾಜ್ಯವೇ ನಮ್ಮ ಗುರಿಯಾಗಬೇಕು. ಅಸ್ಪೃಶ್ಯರ ದುಃಸ್ಥಿತಿಗೆ ಅನ್ಯರು ಮಾತ್ರವಲ್ಲ, ಅವರೂ ಕಾರಣ. ಸರ್ಕಾರವನ್ನಾಗಲೀ ಸುಧಾರಕರನ್ನಾಗಲೀ ದೂರಿ ಪ್ರಯೋಜನವೇನು? ಸಹಸ್ರ ವರ್ಷಗಳ ಮೂಕತೆಯೇ ಅವರ ಅಧೋಗತಿಗೆ ಹೇತು. ಆದರೆ ರಾಜಕೀಯಾಧಿಕಾರವೊಂದೇ ಸರ್ವರೋಗಾಪಹಾರಿಯಾಗದು: ಜತೆ ಜತೆಗೆ ಸಾಮಾಜಿಕೋನ್ನತಿಯೂ ಅತ್ಯಗತ್ಯ." ಇದು ಅವರ ಭಾಷಣದ ಸಾರಾಂಶ.ಅವರು ಗಾಂಧೀಜಿಯ ಅಹಿಂಸಾತ್ಮಕ ಚಳುವಳಿಯನ್ನೊಪ್ಪಿಕೊಳ್ಳದಿದ್ದರೂ, ಸ್ವಾತಂತ್ರ್ಯ ಸಂಪಾದನೆಯ ಅವಶ್ಯಕತೆಯನ್ನು ಸ್ಪಷ್ಟಪಡಿಸಿದರು. ಕಷ್ಟಕ್ಲೇಶಗಳೆಷ್ಟೇ ಬರಲಿ, ಹಿಂದೂ ಧರ್ಮವನ್ನು ತ್ಯಜಿಸುವುದಿಲ್ಲವೆಂದು ಘೋಷಿಸಿದರು.

ಭಾರತೀಯ ಸ್ವಾತಂತ್ರ್ಯೇತಿಹಾಸದಲ್ಲಿ ದುಂಡುಮೇಜಿನ ಪರಿಷತ್ತು ಪ್ರಮುಖ ಮೈಲಿಗಲ್ಲೆಂದೇ ಹೇಳಬೇಕು. ಆ ಪರಿಷತ್ತಿನಲ್ಲಿ ಬ್ರಿಟಿಷ್ ಸರ್ಕಾರ ಇಂಡಿಯಾದ ಎಲ್ಲರಾಜಕೀಯ ಪಕ್ಷಗಳ ಮತ್ತು ಹಿತಾಸಕ್ತಿಗಳ ಪ್ರತಿನಿಧಿಗಳಿಗೆ ಆಹ್ವಾನ ನೀಡಿತ್ತು. ಸಾರ್ವಭೌಮ ಸರ್ಕಾರದ ಉದ್ದೇಶವನ್ನು ಶಂಕಿಸಿದ ಕಾಂಗ್ರೆಸ್ಸು ಆಹ್ವಾನವನ್ನು ತಿರಸ್ಕರಿಸಿತು. ಅಂಬೇಡ್ಕರ್ ಮತ್ತು ರಾವ್ ಬಹದ್ದೂರ್ ಶ್ರೀನಿವಾಸನ್ ನಿಮ್ನಜನರ ಪ್ರತಿನಿಧಿಗಳಾಗಿದ್ದರು. ಅಸ್ಪೃಶ್ಯರ ದೃಷ್ಟಿಯಿಂದ ಇದೊಂದು ಮಹತ್ವಪೂರ್ಣ ಘಟನೆಯಾಗಿತ್ತು. ರಾಜ್ಯಾಂಗ ರಚನೆಯ ವಿಷಯವಾಗಿ ನಡೆಯುವ ಸಮಾಲೋಚನೆಯಲ್ಲಿ ಭಾಗವಹಿಸುವ ಸುವರ್ಣಾವಕಾಶ ಪ್ರಪ್ರಥಮವಾಗಿ ಅವರಿಗೆ ದೊರೆಯಲಿತ್ತು. ಅಂಬೇಡ್ಕರರು ಇಂಗ್ಲೆಂಡಿಗೆ ತೆರಳುವ ಮುನ್ನ ಮುಂಬಯಿಯ ಅಸ್ಪೃಶ್ಯರು ಬೀಳ್ಕೊಡಿಗೆ ಸಮಾರಂಭವೇರ್ಪಡಿಸಿ, ಬಿನ್ನವತ್ತಳೆಯನ್ನೂ ನಿಧಿಯನ್ನೂ ಅರ್ಪಿಸಿದರು. ಡಾಕ್ಟರರು ತಮ್ಮ ಉತ್ತರರೂಪದ ಭಾಷಣದಲ್ಲಿ ತಮ್ಮ ಅನುಯಾಯಿಗಳಿಗೆ ತಮ್ಮ ಕಾರ್ಯದರ್ಶಿ ಶಿವತರ್ಕರ್ ಅವರನ್ನು ಬಳಿಕರೆದು "ನಿಮ್ಮ ನಡೆನುಡಿಗಳಲ್ಲಿ ಎಚ್ಚರಿಕೆಯಿರಲಿ. ರಾತ್ರಿ ಹೊರಗೆ ಹೋಗಬೇಡಿ. ಪಕ್ಷದ ಕಚೇರಿಯ ಬಾಗಿಲನ್ನು ಕಬ್ಬಿಣದ ದಬ್ಬೆಯಿಂದ ಬಲಪಡಿಸಿ. ಯಶವಂತನಿಗೆ ಬ್ಯಾಂಕು ವ್ಯವಹಾರ ಕಲಿಸಿ. ಪ್ರಾಣರಕ್ಷಣೆಯನ್ನಂತು ಮರೆಯಬೇಡಿ, ಕಾಂಗ್ರೆಸ್ಸಿಗರ ಕ್ರೂರ ದೃಷ್ಟಿ ಯಾವಾಗಲೂ ನನ್ನ ಮತ್ತು ನಮ್ಮ ಪಕ್ಷದವರ ಮೇಲೆ ಮಾತ್ರ" ಎಂದು ಮುನ್ನೆಚ್ಚರಿಕೆ ಕೊಟ್ಟರು. 1930ನೆಯ ಅಕ್ಟೋಬರ್ 4 ರಂದು ಅವರು ವೈಸ್‌ರಾಯ್ ಆಫ್ ಇಂಡಿಯಾ ಎಂಬ ಹಡಗಿನಲ್ಲಿ ಮುಂಬಯಿ ಬಿಟ್ಟರು.

ಅಕ್ಟೋಬರ್ 18ರಂದು ಅವರು ಲಂಡನ್ ತಲುಪಿದರು. ಅಂದಿನಿಂದಲೇ ಅವರು ರಾಜಕಾರಣಿಗಳನ್ನು ಸಂದರ್ಶಿಸಿ, ಅಸ್ಪೃಶ್ಯರ ಕುಂದುಕೊರತೆಗಳನ್ನು ಅವರ ಗಮನಕ್ಕೆ ತರುವ ಕಾರ್ಯಕ್ರಮವನ್ನು ಮೊದಲು ಮಾಡಿದರು: ಪತ್ರಿಕೆಗಳಿಗೆ ಲೇಖನ ಬರೆದರು; ಸಭೆ ಸಮಾರಂಭಗಳಲ್ಲಿ ಭಾಗವಹಿಸಿ ತಮ್ಮ ಪಕ್ಷದ ಧ್ಯೇಯ ಧೋರಣೆಗಳನ್ನು ವಿವರಿಸಿದರು. ನವೆಂಬರ್ ಹನ್ನೆರಡರಂದು ಚಕ್ರವರ್ತಿಗಳ ಉದ್ಘಾಟನಾ ಭಾಷಣದನಂತರ ಚಕ್ರಗೋಷ್ಠಿಯ ಕಾರ್ಯ ಕಲಾಪಗಳು ಪ್ರಾರಂಭವಾದುವು. ಬ್ರಿಟಿಷ್ ಪ್ರಧಾನಿ ರ್‍ಯಾಮ್‌ಸೇ ಮ್ಯಾಕ್‌ಡೊನಾಲ್ಡರು ಸಭಾಧ್ಯಕ್ಷರಾಗಿ ಚುನಾಯಿತರಾದರು. ಜಿನ್ನಾ, ಸಪ್ರು, ಮೂಂಜೆ, ಜಯಕರ್ ಮೊದಲಾದ ಪ್ರಭೃತಿಗಳು ರಾಜಕೀಯ ಸಮಾನತೆಯ, ಅಥವಾ ಸ್ವರಾಜ್ಯದ ಪರವಾಗಿ ವಾದಿಸಿದರು. ಭಾರತ ಸಂಯುಕ್ತ ರಾಷ್ಟ್ರವಾಗುವ ಪಕ್ಷಕ್ಕೆ ರಾಜ ಮಹಾರಾಜರೂ ಸಂಯುಕ್ತ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುವುದಾಗಿ ಬಿಕನೀರ್ ಮಹಾರಾಜರು ಘೋಷಿಸಿದಾಗ ಸಭೆಗೆ ಸಭೆಯೇ ಅಚ್ಚರಿ ಸೂಚಿಸಿತು. ದಲಿತ ಮಾನವ ಜನಾಂಗದ ನಾಯಕರು ಭಾಷಣ ಮಾಡಲೆದ್ದಾಗ ಸರ್ವಪಕ್ಷೀಯರು ಸಂಶಯಮನಸ್ಕರಾಗಿ ಅವರ ಕಡೆಗೆ ಕಣ್ಣಾಗಿ ಕಿವಿಯಾಗಿ ಕುಳಿತರು. "ಗುಲಾಮರಿಗಿಂತ ಕೀಳಾಗಿ ಪಶುಗಳಿಗಿಂತ ಕಡೆಯಾಗಿ ಬದುಕು ಸಾಗಿಸುತ್ತಿರುವ ಫ್ರಾನ್ಸ್ ಅಥವಾ ಇಂಗ್ಲೆಂಡಿನಷ್ಟೇ ಜನಸಂಖ್ಯೆ ಪಡೆದಿರುವ, ಭರತಖಂಡದ ಜನಸಂಖ್ಯೆಯಲ್ಲಿ ಐದರಲ್ಲೊಂದು ಭಾಗದಷ್ಟಿರುವ ನಿಮ್ನವರ್ಗದ ಜನರ ಅಭೀಪ್ಸೆ ಅಭಿಪ್ರಾಯಗಳನ್ನು ಪ್ರತಿಬಿಂಬಿಸುವ ಸಲುವಾಗಿ ನಾನಿಂದು ನಿಮ್ಮ ಮುಂದೆ ನಿಂತಿದ್ದೇನೆ. ಜನರಿಂದ ಜನರಿಗಾಗಿ ರಚನೆಗೊಳ್ಳಬಹುದಾದ ಜನಸರ್ಕಾರ ಇಂದಿನ ಸರ್ಕಾರದ ಸ್ಥಾನದಲ್ಲಿ ಪ್ರತಿಷ್ಠೆಗೊಳ್ಳಬೇಕೆಂಬುದೇ ಅಸ್ಪೃಶ್ಯರ ದೃಢಾಭಿಪ್ರಾಯ" ಎಂದವರು ಘೋಷಿಸಿದಾಗ, ಆಂಗ್ಲರು ಮಾತ್ರವಲ್ಲ, ಇಂಡಿಯಾ ಪ್ರತಿನಿಧಿಗಳೂ ವಿಸ್ಮಯ ಮೂಕರಾದರು. ಮಿಂಚುಗಣ್ಣಿನ ಅಂಬೇಡ್ಕರರು ದನಿಯೇರಿಸಿ, ತಮ್ಮ ಭಾಷಣ ಮುಂದುವರಿಸಿದರು: "ಆಂಗ್ಲ ಪೂರ್ವ ಪರಿಸ್ಥಿತಿಯನ್ನು ಇಂದಿನ ಸ್ಥಿತಿಗತಿಗಳೊಡನೆ ಹೋಲಿಸಿ ನೋಡುವಾಗ, ಆಂಗ್ಲರ ಆಡಳಿತದಲ್ಲಿ ಅಸ್ಪೃಶ್ಯರ ಸ್ಥಿತಿ ಉತ್ತಮಗೊಂಡಿದೆಯೆಂದು ಹೇಳುವಂತಿಲ್ಲ. ಅವರು ಬರುವ ಮುನ್ನ ಹಳ್ಳಿಯ ಬಾವಿಗಳಲ್ಲಿ ಈ ಜನ ನೀರು ಸೇದುವಂತಿರಲಿಲ್ಲ. ಬ್ರಿಟಿಷ್ ಸರ್ಕಾರ ಆ ಹಕ್ಕನ್ನು ನಮಗೆ ಗಳಿಸಿಕೊಟ್ಟಿದೆಯೆ? ಅವರು ಬರುವ ಮುನ್ನ ನಾವು ದೇವಾಲಯಗಳನ್ನು ಪ್ರವೇಶಿಸುವಂತಿರಲಿಲ್ಲ. ನಮಗೀಗ ಆ ಅವಕಾಶವಿದೆಯೆ? ಹಿಂದಿನವರು

ನಮ್ಮನ್ನು ಪೋಲೀಸು ಪಡೆಗೆ ಸೇರಿಸುತ್ತಿರಲಿಲ್ಲ. ಈಗಲಾದರೂ ನಮ್ಮವರಿಗಂಥ ಅವಕಾಶವಿದೆಯೆ? ಆಂಗ್ಲರಿಗೆ ಮುನ್ನ ನಾವು ಸೈನ್ಯ ಸೇರುವಂತಿರಲಿಲ್ಲ. ಈಗಲಾದರೂ ನಮಗಲ್ಲಿ ಪ್ರವೇಶವಿದೆಯೆ ? ಈ ಪ್ರಶ್ನೆಗಳಿಗೆ ಸಕಾರಾತ್ಮಕ ಉತ್ತರ ಸಿಗುವುದೆ? ನೂರೈವತ್ತು ವರ್ಷಗಳಿಂದ ರಾಜ್ಯಭಾರ ಮಾಡಿದ ಪ್ರಭುಗಳು ದಲಿತರ ಕಣ್ಣೀರೊರೆಸಿಲ್ಲ, ಅವರ ರೋಗಗಳಿಗೆ ಮದ್ದುಮಾಡಿಲ್ಲ. ಜೀತ. ದಾಸ್ಯ. ಹಸಿವು, ನಗ್ನತೆ, ರಿಕ್ತತೆ, ನೋವು. ನರಳು ಇವೇ ಅವರ ಬದುಕಾಗಿವೆ. ಅಂಥ ಸರ್ಕಾರದಿಂದಾಗುವ ಲಾಭವೇನು ?" ಎಂಬುದಾಗಿ ಪ್ರಶ್ನೆಗಳ ಮಳೆಗರೆದರು. ಆಂಗ್ಲ ಸದಸ್ಯರು ಪರಸ್ಪರ ಮುಖ ನೋಡಿಕೊಂಡರು.

ಅನಂತರ ಸಭೆಯ ಸುತ್ತ ಕಣ್ಣು ಹೊರಳಿಸಿ. ಧ್ವನಿ ಬದಲಾಯಿಸಿ. ಗಂಭೀರ ಮುಖಮುದ್ರೆಯಿಂದ "ಕಾರ್ಮಿಕರ ಹಿತಾಸಕ್ತಿಗಳನ್ನು ಕಡೆಗಣಿಸಿ ಅವರಿಗೆ ಕನಿಷ್ಠ ಜೀವನ ವೆಚ್ಚವನ್ನು ಕೊಡದ ಬಂಡವಾಳಗಾರರನ್ನೂ ಬಡವರನ್ನು ಕೊಳ್ಳೆ ಹೊಡೆದು ದಲಿತರ ವಿಪನ್ನಾವಸ್ಥೆಯನ್ನು ಲೆಕ್ಕಿಸದೆ ಅವರನ್ನು ನರಕಯಾತನೆಗೆ ಗುರಿಮಾಡಿದ ಭೂಮಾಲೀಕರನ್ನೂ ಮಾತಾಡಿಸದೆ. ಅಧಿಕಾರವಿದ್ದರೂ ಅವರನ್ನು ಶಿಕ್ಷಿಸದೆ, ಅವರಿಗೆ ಹೆದರಿಕೊಂಡು ಕಾನೂನನ್ನು ತಿದ್ದುಪಡಿ ಮಾಡದಿರುವ ಸರ್ಕಾರದಿಂದ ನಾವೇನು ತಾನೇ ನಿರೀಕ್ಷಿಸಲಾದೀತು ? ದೇಶದ ಹಿತಾಸಕ್ತಿಗಳನ್ನು ಶ್ರದ್ಧಾನಿಷ್ಠೆಗಳಿಂದ ಪಾಲಿಸುವ ಜನರ ಸರ್ಕಾರ ನಮಗೆ ಬೇಕು. ಭೀತಿ ಪಕ್ಷಪಾತಗಳಿಲ್ಲದೆ ಸರ್ವರಿಗೂ ಸಮಾನ ನ್ಯಾಯ ದೊರಕಿಸುವ ಸಲುವಾಗಿ ಸಾಮಾಜಿಕಾರ್ಥಿಕ ವ್ಯವಸ್ಥೆಯನ್ನು ಬದಲಾಯಿಸಬಲ್ಲ ಜನರುಳ್ಳ ಸರ್ಕಾರ ನಮಗೆ ಬೇಕು." ಎಂದು ವಾಕ್ಪ್ರವಾಹ ಹರಿಸಿದರು. ಸಾಮಾನ್ಯವಾಗಿ ಸಂಪೂರ್ಣ ಸ್ವಾತಂತ್ರ್ಯದ ಕಡೆಗೆ ಅವರ ಒಲವಿರಲಿಲ್ಲ. ಆಗಿನ ಪರಿಸ್ಥಿತಿಯಲ್ಲಿ ಡೊಮಿನಿಯನ್ ಸ್ಟೇಟಸ್ ಸಾಕೆಂಬುದು ಅವರ ಅಭಿಪ್ರಾಯ. ರಾಜ್ಯಾಂಗದಲ್ಲಿ ನಿಮ್ನ ವರ್ಗೀಯರಿಗೆ ವಿಶೇಷ ಸವಲತ್ತುಗಳನ್ನೊದಗಿಸುವುದಾದರೆ ಸಂಪೂರ್ಣ ಸ್ವಾತಂತ್ರ್ಯ ಬೇಡವೆಂದವರಲ್ಲ. ಜನತೆಯ ಯಾವೊಂದು ಅಂಗಕ್ಕಾಗಲೀ ಅನ್ಯಾಯವಾಗುವುದು ಅವರಿಗಿಷ್ಟವಿರಲಿಲ್ಲ. ತಾವು ಬೆಳೆಸಿದ ಸಸಿಯನ್ನು ಬಹುದಿನಗಳನಂತರ ನೋಡಿದ, ತಾವು ಪೋಷಿಸಿ ಪ್ರೋತ್ಸಾಹಿಸಿದ ಅಸ್ಪೃಶ್ಯ ಯುವಕನ ವಾಗ್ವಿಲಾಸಕ್ಕೆ, ವೈಚಾರಿಕ ಮಹೋನ್ನತಿಗೆ ಬೆರಗಾದ, ಸಮ್ಮೇಲನದ ಸಹಸದಸ್ಯರೂ ಬರೋಡೆಯ ಮಹಾರಾಜರೂ ಆದ ಸಯ್ಯಾಜಿರಾವ್ ಗಾಯಕವಾಡರು ಅಂಬೇಡ್ಕರರನ್ನು ಭಾವ

ಮುಗ್ಧರಾಗಿ ಆಲಿಂಗಿಸಿಕೊಂಡು, ಅವರ ಗೌರವಾರ್ಥವಾಗಿ ಭೋಜನ ಕೂಟ ಏರ್ಪಡಿಸಿದರು. ಅವರ ವಿರೋಧಿಗಳಲ್ಲಿ ಹಲವರು ಅವರ ರಾಷ್ಟ್ರಾಭಿಮಾನ ವನ್ನು ಕೊಂಡಾಡಿದರು ; ಕೆಲವರು ಅವರನ್ನು ಕ್ರಾಂತಿಕಾರಿಯೆಂದು ಕರೆದರು. ಆಂಗ್ಲ ರಾಜಕಾರಣಿಗಳ ಮನಸ್ಸಿನಲ್ಲಿಯೂ ಅದೇ ಭಾವನೆ ನಾಟಿಕೊಂಡಿತು.

ಪ್ರಥಮ ಪೂರ್ಣಾಧಿವೇಶನದನಂತರ ವಿವಿಧ ವಿಷಯಗಳ ಸವಿವರ ಚರ್ಚೆಗೆಂದು ಒಂಬತ್ತು ಉಪಸಮಿತಿಗಳು ರಚನೆಗೊಂಡವು. ಅಂಬೇಡ್ಕರರು ಹೆಚ್ಚುಕಡಿಮೆ ಎಲ್ಲ ಸಮಿತಿಗಳಿಗೆ ನಾಮಕರಣಗೊಂಡಿದ್ದರು. ಅಲ್ಪಸಂಖ್ಯಾತ ಸಮಿತಿಯಲ್ಲಿ ಅವರು ಅಭಿನಯಿಸಿದ ಪಾತ್ರ ಮಹತ್ವಪೂರ್ಣವಾದುದು. ನಿಮ್ನವರ್ಗೀಯರ ಸಾಂಸ್ಕೃತಿಕ ಧಾರ್ಮಿಕಾರ್ಥಿಕ ಹಿತಾಸಕ್ತಿಗಳ ಸಂರಕ್ಷಣೆ ಗಾಗಿ ಮೂಲಭೂತ ಹಕ್ಕುಗಳ ಅಂಗೀಕಾರ ಅತ್ಯವಶ್ಯವೆಂದು ಅವರು ವಾದಿ ಸಿದರು. ತಮ್ಮ ವಾದ ಸಮರ್ಥನೆಗಾಗಿ ಸಾಕ್ಷಿ ನಿದರ್ಶನ ಪುರಾವೆಗಳನ್ನು ಸಂಗ್ರಹಿಸಬೇಕಾಗಿ ಬಂದದ್ದರಿಂದ ನಿದ್ದೆಯುಳಿದು ಬಿಡುವಿಲ್ಲದೆ ದುಡಿಯ ಬೇಕಾಯಿತು. ತಾವು ಸಿದ್ಧಪಡಿಸಿದ ದಾಖಲೆಯ ಪ್ರತಿಗಳನ್ನು ಭಾರತಕ್ಕೆ ಕಳಿಸಿ, ನಿಮ್ನವರ್ಗೀಯರ ಸಭೆಗಳಲ್ಲಿ ಚರ್ಚಿಸಿದನಂತರ ಅಂಗೀಕರಿಸಿದ ನಿರ್ಣಯಗಳನ್ನು ಬ್ರಿಟಿಷ್ ಪ್ರಧಾನಿಗೆ ರವಾನಿಸುವಂತೆ ಸಂಬಂಧಪಟ್ಟ ಕಾರ್ಯ ಕರ್ತರಿಗೆ ಪತ್ರ ಬರೆದರು. ವಯಸ್ಕಮತದಾನಪದ್ಧತಿ ಪ್ರಜಾಪ್ರಭುತ್ವದ ಅವಿಭಾಜ್ಯಾಂಗವೆಂದೂ, ಮತದಾನದ ಹಕ್ಕು ಸೀಮಿತಗೊಳ್ಳುವುದಾದರೆ ನಿಮ್ನವರ್ಗದ ಜನ ರಾಜಕೀಯಾಧಿಕಾರವಿಲ್ಲದೆ ಎಂದಿನಂತೆ ಹೀನಸ್ಥಿತಿಯಲ್ಲಿ ಒದ್ದಾಡಬೇಕಾಗುತ್ತದೆಂದೂ ಶಕ್ತಿಯುತವಾಗಿ ವಾದಿಸಿದರು.

ಶ್ರೀನಿವಾಸನ್ ಅವರೊಂದಿಗೆ ಜಂಟಿ ಮನವಿಯೊಂದನ್ನು ಸಿದ್ಧಪಡಿಸಿ, ಸಮಿತಿಯ ಅವಗಾಹನೆಗೊಪ್ಪಿಸಿದರು. ಅಸ್ಪೃಶ್ಯತೆಯನ್ನು ಅಪರಾಧವಾಗಿ ಪರಿಗಣಿಸಬೇಕೆಂದೂ, ಶಾಸನ ಸಭೆಗಳಲ್ಲಿ ನಿಮ್ನವರ್ಗೀಯರಿಗೆ ಸ್ಥಾನಗಳನ್ನು ಮೀಸಲಾಗಿಡಬೇಕೆಂದೂ, ಹತ್ತುವರ್ಷ ಪ್ರತ್ಯೇಕ ಚುನಾವಣಾಕ್ಷೇತ್ರಗಳಿರ ಬೇಕೆಂದೂ, ಅನಂತರ ಜಂಟಿಕ್ಷೇತ್ರಗಳಿರಬಹುದೆಂದೂ, ಸರ್ಕಾರಿ ಸೇವೆಗಳಲ್ಲಿ ಸಾಕಷ್ಟು ಪ್ರಾತಿನಿಧ್ಯವಿರತಕ್ಕದ್ದೆಂದೂ, ಸಚಿವ ಸಂಪುಟದಲ್ಲಿ ಅವರಿಗೊಂದು ಸ್ಥಾನವಿರತಕ್ಕದ್ದೆಂದೂ, ಕೊಂಕು ಕೊಸರುಗಳಿಲ್ಲದ ಸಮಾನತೆ ಅತ್ಯವಶ್ಯಕ ವೆಂದೂ, ಅವರು ಮನವಿಯಲ್ಲಿ ಸ್ಪಷ್ಟಪಡಿಸಿದರು. ಒಂದು ಕೋಮು ಅಲ್ಪ ಸಂಖ್ಯಾತವೇ ಅಲ್ಲವೇ ಎಂದು ನಿರ್ಧರಿಸುವಲ್ಲಿ ಭಾಷೆ, ಮತ, ಜನಾಂಗ

ಮಾತ್ರವಲ್ಲ, ಸಾಮಾಜಿಕ ಭೇದ ವಿಭೇದಗಳೇ ಪ್ರಮುಖವಾದ ಒರೆಗಲ್ಲಾಗ ಬೇಕೆಂಬುದು ಅವರ ವಿಚಾರವಾಗಿತ್ತು.

ಅಂಬೇಡ್ಕರರು ಆಗಾಗ್ಗೆ ಪತ್ರಿಕೆಗಳಿಗೆ ಬರೆಯುತ್ತಿದ್ದ ಲೇಖನ ಹಾಗೂ ಹೇಳಿಕೆಗಳಿಂದ, ಪಾರ್ಲಿಮೆಂಟ್ ಸದಸ್ಯರನ್ನು ಭೇಟಿಮಾಡಿ ನೀಡುತ್ತಿದ್ದ ವಿವರಣೆಗಳಿಂದ ಅಸ್ಪೃಶ್ಯರ ಸ್ಥಿತಿಗತಿ ಅಮೆರಿಕೆಯ ನೀಗ್ರೋಗಳಿಗಿಂತ ಕೆಳ ಮಟ್ಟದಲ್ಲಿವೆಯೆಂಬ ಸಂಗತಿಯನ್ನು ಮೊಟ್ಟಮೊದಲಿಗೆ ಪಾಶ್ಚಾತ್ಯರು ತಿಳಿಯುವಂತಾಯಿತು. ಸ್ವರಾಜ್ಯದ ಪರವಾಗಿ ಅವರು ಮಂಡಿಸಿದ ವಾದ ಆಂಗ್ಲರಿಗೆ ಸರಿಬೀಳಲಿಲ್ಲ. ನಿಮ್ನವರ್ಗದ ಜನರಿಗೆ ಕೆಲವು ಸವಲತ್ತುಗಳನ್ನು ನೀಡುವ ನೆಪವೊಡ್ಡಿ, ಅವರನ್ನು ಮರುಳುಗೊಳಿಸಿ ಸ್ವರಾಜ್ಯದ ಬಗೆಗಿನ ಅವರ ನಿಲುವನ್ನು ಮಾರ್ಪಡಿಸಲು ಮಾಡಿದ ಆಂಗ್ಲ ರಾಜಕಾರಣಿಗಳ ಪ್ರಯತ್ನ ಫಲಿಸಲಿಲ್ಲ. ಸಮ್ಮೇಲನದ ಫಲಶ್ರುತಿ ಅಂಬೇಡ್ಕರರ ದೃಷ್ಟಿಯಿಂದ ತಕ್ಕಮಟ್ಟಿಗೆ ತೃಪ್ತಿಕರವಾಗಿತ್ತು. ನಿಮ್ನ ವರ್ಗದ ಸಮಸ್ಯೆಗಳನ್ನು ಬ್ರಿಟಿಷ್ ಸರ್ಕಾರ ಅರಿಯುವಂತಾಯಿತು. ಸ್ವರಾಜ್ಯದ ಪರವಾಗಿ ಸರ್ವಾಭಿಪ್ರಾಯ ವನ್ನು ರೂಪಿಸಲವಕಾಶವಾಯಿತು. ರಾಜರು ಸಹ ಸಂಯುಕ್ತ ರಾಜ್ಯ ವ್ಯವಸ್ಥೆಗೆ ವಿರೋಧವಾಗಿಲ್ಲವೆಂಬಂತೆ ಮಹತ್ವಪೂರ್ಣ ಸಂಗತಿಯನ್ನು ಜಾಹೀರು ಮಾಡಿ ದಂತಾಯಿತು. ಶಾಸನ ಸಭೆಯ ಸ್ಥಾನಗಳ ಮೀಸಲಾತಿ ಮತ್ತು ಚುನಾವಣಾ ವಿಧಾನಗಳ ಬಗ್ಗೆ ಪ್ರತಿನಿಧಿಗಳಲ್ಲಿ ಏಕಾಭಿಪ್ರಾಯವಿಲ್ಲದ್ದರಿಂದ ಸಮ್ಮೇಲನ ಅರ್ಧಾಂತಿಕವಾಗಿ ಮುಂದೆ ಹೋಯಿತು. ಕಾಂಗ್ರೆಸ್ಸಿನಂಥ ಬೃಹತ್ ಪಕ್ಷದ ಗೈರುಹಾಜರಿಯಲ್ಲಿ ಪಾರಿಣಾಮಕ ನಿರ್ಣಯೀಕರಣ ಸಾಧುವಲ್ಲವೆಂಬ ಅಭಿ ಪ್ರಾಯವೂ ಮುಂದೂಡಿಕೆಗೆ ಕಾರಣವಾಗಿತ್ತು. ಅದೇನೇ ಇರಲಿ, ಸಮ್ಮೇಲನದ ವರದಿಯನ್ನು ಪಾರ್ಲಿಮೆಂಟಿನ ಮುಂದೆ ಮಂಡಿಸಿದಾಗ ಐಸಾಕ್ ಫೂಟ್ ಎಂಬ ಸದಸ್ಯರು 'ಇನ್ನು ಮುಂದೆ ಇವರ ಹಿತರಕ್ಷಣೆ ರಾಜ್ಯಪಾಲರ ಪ್ರಮುಖ ಕರ್ತವ್ಯವಾಗಬೇಕು. ಈ ದಿನ ಅವರು ಅನಾಥರಂತಿರಬಹುದು. ಎಂದಾದ ರೊಂದು ದಿನ ಅವರು ಮಹಾಬಲರಾಗುತ್ತಾರೆ. ಅವರೊಮ್ಮೆ ಮೈ ಕೊಡವಿ ಕೊಂಡು ಮೇಲೆದ್ದರೆಂದರೆ ಜಗತ್ತಿನ ಯಾವ ಶಕ್ತಿಯೂ ಅವರನ್ನು ತಡೆ ಹಿಡಿಯಲಾಗದು' ಎಂದು ನಿಮ್ನವರ್ಗದ ಜನರ ಪರವಾಗಿ ಮಾಡಿದ ಭಾಷಣ ಅಂಬೇಡ್ಕರರ ಸಾಹಸ ಪ್ರಯತ್ನಗಳ ಸಾರ್ಥಕತೆಗೆ ಸಾಕ್ಷಿಯಾಗಿತ್ತು.

ಊರಿಗೆ ಮರಳಿದ ಅಂಬೇಡ್ಕರರಿಗೆ ಮುಂಬಯಿ ಬಂದರಿನಲ್ಲಿ ಅದ್ಭುತ ಸ್ವಾಗತ ದೊರೆಯಿತು. ಅವರು ಹಾರಗಳ ಹೊರೆಯೊಳಗೆ ಮರೆಯಾದರು.

ಅವರ ದರ್ಶನಕ್ಕಾಗಿ ಹಾಗೂ ಹಸ್ತಲಾಘವಕ್ಕಾಗಿ ಅವರೆಡೆಗೆ ನುಗ್ಗುತ್ತಿದ್ದ ಜನ ಸಮೂಹವನ್ನು ತಡೆಗಟ್ಟುವಲ್ಲಿ ಪೋಲೀಸರಿಗೆ ತುಂಬ ಕಷ್ಟವಾಯಿತು. ಅಂಬೇಡ್ಕರ್ ಸೇವಾದಳ ಜನಪ್ರವಾಹವನ್ನು ನಿಯಂತ್ರಿಸಿ, ತನ್ನ ನಾಯಕರಿಗೆ ಗೌರವ ರಕ್ಷೆ ನೀಡಿತು.

ಪ್ರಥಮ ಚಕ್ರಗೋಷ್ಠಿ ನಡೆದಾಗ ಭಾರತೀಯ ಪ್ರತಿನಿಧಿಗಳ ವಾದವಿವಾದಗಳನ್ನು ಕೇಳಿ, ಅವರ ರಾಷ್ಟ್ರಾಭಿಮಾನದ ಕಳಕಳಿಯನ್ನು ತೀವ್ರವಾಗಿ ಪರಿಗಣಿಸಿದ ಬ್ರಿಟಿಷ್ ಸರ್ಕಾರ ದ್ವಿತೀಯ ಚಕ್ರಗೋಷ್ಠಿಯನ್ನು ಕರೆಯುವುದಾಗಿ ಪ್ರಸಿದ್ಧ ಪತ್ರಿಕೆ ಹೊರಡಿಸಿತು. ಶಾಸ್ತ್ರಿ, ಸಪ್ರು, ಜಯಕರ್, ಮಾಳವೀಯ, ಸರೋಜಿನಿನಾಯುಡು, ಗಾಂಧಿ, ಜಿನ್ನ, ಅಂಬೇಡ್ಕರ್ ಮೊದಲಾದವರನ್ನು ಗೋಷ್ಠಿಯಲ್ಲಿ ಭಾಗವಹಿಸುವ ಸಲುವಾಗಿ ಆಹ್ವಾನಿಸಿತು. ಗಾಂಧೀಜಿ ಗೋಷ್ಠಿಯ ಕಾರ್ಯಕಲಾಪಗಳಲ್ಲಿ ಪಾಲ್ಗೊಳ್ಳುವ ಬಗ್ಗೆ ಜನಮನದಲ್ಲಿ ಸಂದೇಹವಿತ್ತು. ಅವರು ಮುಂಬಯಿಯಲ್ಲಿದ್ದಾಗ, 1931 ನೆಯ ಆಗಸ್ಟ್ 6ರಂದು ಅಂಬೇಡ್ಕರರಿಗೊಂದು ಪತ್ರ ಬರೆದು, ಅವರನ್ನು ನೋಡುವ ಅಭಿಲಾಷೆಯನ್ನು ವ್ಯಕ್ತಪಡಿಸಿದರು. ತಮ್ಮಲ್ಲಿಗೆ ಬರಲನಾನುಕೂಲವಾಗುವುದಾದರೆ ಅವರಲ್ಲಿಗೆ ತಾವೇ ಹೋಗುವುದಾಗಿಯೂ ತಿಳಿಸಿದರು. ಅಂಬೇಡ್ಕರರು ಅದೇ ತಾನೇ ಸಾಂಗ್ಲಿಯಿಂದ ಬಂದಿದ್ದರು. ದೇಹದಲ್ಲಿ ಜ್ವರದ ಕಾವಿತ್ತು. ಆದರೂ ಆ ದಿನ ಸಂಜೆ 8 ಗಂಟೆಗೆ ಗಾಂಧೀಜಿಯನ್ನು ಭೇಟಿ ಮಾಡುವುದಾಗಿ ಮಾರುತ್ತರ ಬರೆದರು. ಸಂಜೆಯ ಹೊತ್ತಿಗೆ ಜ್ವರದ ತಾಪ ಏರಿದುದರಿಂದ, ಅದು ವಾಸಿಯಾದ ಕೂಡಲೇ ಭೇಟಿಮಾಡುವುದಾಗಿ ಗಾಂಧೀಜಿಗೆ ಮತ್ತೊಂದು ಪತ್ರ ಬರೆದರು.

ಆಗಸ್ಟ್ 14 ರಂದು ತಮ್ಮ ಕೆಲವು ಗೆಳೆಯರೊಡನೆ ಗಾಂಧಿಯವರನ್ನು ನೋಡಲು ಅವರು ಮಣಿಭುವನಕ್ಕೆ ಹೋದರು. ಮೂರನೆಯ ಮಹಡಿಯಲ್ಲಿ ಗಾಂಧೀಜಿ ಪಕ್ಷದ ಸಹೋದ್ಯೋಗಿಗಳೊಡನೆ ಚರ್ಚಿಸುತ್ತಿದ್ದರು. ಬಾಬಾಸಾಹೇಬರು ತಮ್ಮ ಗೆಳೆಯರೊಡನೆ ಗಾಂಧಿಜಿಯವರನ್ನು ನಮಸ್ಕರಿಸಿ ಹಾಸುಗಂಬಳಿಯ ಮೇಲೆ ಕುಳಿತರು, ಸ್ವಲ್ಪ ಹೊತ್ತಿನ ನಂತರ ಅವರು ಅಂಬೇಡ್ಕರರ ಕಡೆಗೆ ತಿರುಗಿ ಕುಶಲ ಪ್ರಶ್ನೆ ನಡೆಸಿದರು. ಗಾಂಧೀಜಿ ಅಂಬೇಡ್ಕರರ ಬೇಡಿಕೆಗಳನ್ನರಿಯುವ ಸಲುವಾಗಿ "ಸರಿ, ಡಾಕ್ಟರೆ, ಆ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ?" ಎಂದು ಕೇಳಿದರು.

ಅಂ : ನಿಮ್ಮ ಅಭಿಪ್ರಾಯ ತಿಳಿಯಲು ನಾನು ಬಂದದ್ದು. ನೀವು ಪ್ರಶ್ನೆ ಕೇಳುವುದಾದರೆ ನಾನು ಉತ್ತರ ಹೇಳಲು ಸಿದ್ಧ.

ಗಾಂ : ನನ್ನ ಮತ್ತು ಕಾಂಗ್ರೆಸ್ಸಿನ ಮೇಲೆ ನಿಮಗೆ ಅಸಮಾಧಾನವಾಗಿದೆಯೆಂದು ತಿಳಿದೆ. ನನ್ನ ಶಾಲಾದಿನಗಳಿಂದ ಅಸ್ಪೃಶ್ಯರ ಸಮಸ್ಯೆಯನ್ನು ಕುರಿತು ಯೋಚಿಸುತ್ತಿದ್ದೇನೆ. ಪ್ರಾಯಶಃ ಆಗ ನೀವಿನ್ನೂ ಹುಟ್ಟಿರಲಿಲ್ಲ. ಅದನ್ನು ಕಾಂಗ್ರೆಸ್ ಕಾರ್ಯಕ್ರಮದಲ್ಲಿ ಸೇರಿಸಲು ತುಂಬ ಪ್ರಯತ್ನ ನಡೆಸಿದ್ದೇನೆ. ಅದು ಸಾಮಾಜಿಕ ಮತ್ತು ಧಾರ್ಮಿಕ ಪ್ರಶ್ನೆಯಾದ್ದರಿಂದ, ಅದನ್ನು ರಾಜಕೀಯದಲ್ಲಿ ಬೆರೆಸಲಾಗದೆಂದು ಕಾಂಗ್ರೆಸ್ ನಾಯಕರು ವಿರೋಧಿಸುತ್ತಿದ್ದಾರೆ. ಇಷ್ಟೇ ಅಲ್ಲ. ಅಸ್ಪೃಶ್ಯರ ಪ್ರಗತಿಗಾಗಿ ಕಾಂಗ್ರೆಸ್ಸು ಈಗಾಗಲೇ ಇಪ್ಪತ್ತು ಲಕ್ಷಕ್ಕೂ ಹೆಚ್ಚು ಹಣ ಖರ್ಚುಮಾಡಿದೆ. ಆದರೂ ನೀವು ನನ್ನನ್ನೂ ಕಾಂಗ್ರೆಸ್ಸನ್ನೂ ವಿರೋಧಿಸುವುದು ಸರಿಯೆ ? ನಿಮ್ಮ ನಿಲವನ್ನು ಸಮರ್ಥಿಸಿಕೊಳ್ಳುವಲ್ಲಿ ನೀವು ಸ್ವತಂತ್ರರು. ನಿಮ್ಮ ಅಭಿಪ್ರಾಯ ತಿಳಿಸಿ.

ಅಂ : ನಾನು ಹುಟ್ಟುವ ಮುನ್ನವೇ ನೀವು ಈ ಸಮಸ್ಯೆ ಕುರಿತು ಆಲೋಚಿಸಿದ್ದು ನಿಜ, ಮಹಾತ್ಮಾಜಿ. ಹಿರಿಯರು ತಮ್ಮ ನಿಲವನ್ನು ಸಮರ್ಥಿಸಿಕೊಳ್ಳುವ ವಿಧಾನವೇ ಹೀಗೆ. ನೀವಿಲ್ಲದಿದ್ದರೆ ಕಾಂಗ್ರೆಸ್ಸು ಈ ಸಮಸ್ಯೆಯನ್ನು ಗುರುತಿಸುತ್ತಿರಲಿಲ್ಲವೆಂಬುದೂ ಸಹಜ. ಕಾಂಗ್ರೆಸ್ಸು ಅಷ್ಟರಿಂದಲೇ ತೃಪ್ತಿಪಟ್ಟುಕೊಂಡಿದೆ. ಅದು ಖರ್ಚು ಮಾಡಿರುವ ಹಣ ನಿಷ್ಪ್ರಯೋಜಕವೆಂದೇ ನನ್ನ ಭಾವನೆ. ಅಷ್ಟು ಬೆಂಬಲ ನನಗೆ ದೊರೆತಿದ್ದರೆ ನನ್ನ ಜನರ ಆರ್ಥಿಕ ಸ್ಥಿತಿಯಲ್ಲಿ ಅದ್ಭುತ ಪರಿಣಾಮಗಳನ್ನು ಸಾಧಿಸುತ್ತಿದ್ದೆ : ಅವರ ದೃಷ್ಟಿಕೋನವನ್ನೇ ಬದಲಾಯಿಸುತ್ತಿದ್ದೆ. ಕಾಂಗ್ರೆಸ್ಸಿನ ನಡೆನುಡಿ ನಂಬಿಕೆಗಳಲ್ಲಿ ಪ್ರಾಮಾಣಿಕತೆಯಿಲ್ಲ. ಕಾಂಗ್ರೆಸ್ಸಿನ ಸದಸ್ಯಾರ್ಹತೆಗೆ ಖಾದಿಧಾರಣೆ ಕಡ್ಡಾಯ ತಾನೆ ? ಅಸ್ಪೃಶ್ಯತಾ ನಿರ್ಮೂಲನವನ್ನು ಸಹ ಕಡ್ಡಾಯದ ಶರತ್ತಾಗಿ ಅಂಗೀಕರಿಸಬಹುದಿತ್ತು. ತನ್ನ ಮನೆಯಲ್ಲಿ ಅಸ್ಪೃಶ್ಯರಿಗೆ ಕೆಲಸ ಕೊಡದವನು, ಅಸ್ಪೃಶ್ಯಬಾಲರನ್ನು ಸಾಕದವನು, ವಾರಕ್ಕೊಮ್ಮೆಯಾದರೂ ಅವರ ಪಂಕ್ತಿಯಲ್ಲಿ ಭೋಜನ ಮಾಡದವನು ಕಾಂಗ್ರೆಸ್ ಸದಸ್ಯನಾಗುವ ಯೋಗ್ಯತೆ ಪಡೆದಿಲ್ಲವೆಂದು ಘೋಷಿಸಬಹುದಿತ್ತು. ಅಂಥ ಕಡ್ಡಾಯದ ನಿಯಮದಿಂದ ದೇವಾಲಯ ಪ್ರವೇಶ ಪ್ರಶ್ನೆ ಸುಲಭವಾಗುತ್ತಿತ್ತು. ಕಾಂಗ್ರೆಸ್ಸಿನ ಸದಸ್ಯರಾರೂ ಅದನ್ನು ವಿರೋಧಿಸುತ್ತಿರಲಿಲ್ಲ.

"ಅಂಥ ನಿಯಮದಿಂದ ಕಾಂಗ್ರೆಸ್ಸಿನ ಬಲ ಕಡಮೆಯಾಗುತ್ತಿತ್ತೆಂದು ನೀವು ಹೇಳಬಹುದು. ಈ ಮಾತು ನಿಜವಾಗುವುದಾದರೆ ಕಾಂಗ್ರೆಸ್ಸಿಗೆ ಬಲ ಬೇಕಾಗಿದೆಯೇ ಹೊರತು, ತತ್ತ್ವವಲ್ಲವೆಂಬುದು ಸಾಬೀತಾಗುತ್ತದೆ. ಕಾಂಗ್ರೆಸ್ಸಿನ ಮೇಲಣ ನನ್ನ ದೂರಿಗೆ ಇದೇ ಕಾರಣ. ಆಂಗ್ಲರ ಹೃದಯ ಪರಿವರ್ತನೆಯಾಗಿಲ್ಲವೆಂದು ನೀವು ಹೇಳುತ್ತೀರಿ. ಅಸ್ಪೃಶ್ಯರ ಬಗ್ಗೆ ಹಿಂದೂಗಳ ಹೃದಯ ಪರಿವರ್ತನೆಗೊಂಡಿದೆಯೆ ? ಆ ಪರಿವರ್ತನೆ ಸ್ಪಷ್ಟ ಗೋಚರವಾಗುವತನಕ ನಾನು ಕಾಂಗ್ರೆಸ್ಸನ್ನಾಗಲೀ ಹಿಂದೂಗಳನ್ನಾಗಲೀ ನಂಬುವಂತಿಲ್ಲ. ನಮಗೂ ಆತ್ಮಗೌರವವಿದೆ. ನಮಗೆ ಮಹಾತ್ಮರಲ್ಲಾಗಲೀ ನಾಯಕರಲ್ಲಾಗಲೀ ವಿಶ್ವಾಸವಿಲ್ಲ. ನಾನು ಮುಚ್ಚುಮರೆಯಿಲ್ಲದೆ ನನ್ನ ಹೃದಯವನ್ನು ತೆರೆದು ತೋರಿಸುತ್ತಿದ್ದೇನೆ. ನನ್ನನ್ನು ದೇಶದ್ರೋಹಿಯೆಂದು ಕರೆದು, ನಮ್ಮ ಚಳುವಳಿಯನ್ನೇಕೆ ಕಾಂಗ್ರೆಸ್ಸು ವಿರೋಧಿಸಬೇಕು ?"

ಧಾರಾಕಾರವಾಗಿ ಹರಿಯುತ್ತಿದ್ದ ಮಾತು ಹಠಾತ್ತನೆ ನಿಂತಿತು. ಭಾವಾವೇಶ ರಕ್ತದಲ್ಲೆಲ್ಲ ಸಂಚರಿಸಿ, ಮುಖ ಕೆಂಪಾಯಿತು. ಕೆಲವು ನಿಮಿಷಗಳ ನಂತರ ಅವರು "ಗಾಂಧೀಜಿ. ನನಗೊಂದು ತಾಯ್ನೆಲವಿಲ್ಲ" ಎಂದರು

ಗಾಂ : ಏಕಿಲ್ಲ ? ಈ ನೆಲ ನನಗೆಂತೋ ನಿಮಗಂತೆಯೇ ತಾಯ್ನೆಲ. ಚಕ್ರಗೋಷ್ಠಿಯ ವರದಿ ನನ್ನ ಗಮನಕ್ಕೆ ಬಂದಿದೆ. ನೀವಲ್ಲಿ ಮಾಡಿದ ಭಾಷಣ ಓದಿದ್ದೇನೆ. ನಿಮ್ಮ ದೇಶಾಭಿಮಾನ ಅನನ್ಯವಾದದ್ದೆಂದು ನಾನು ತಿಳಿದಿದ್ದೇನೆ.

ಅಂ : ನನಗೆ ತಾಯ್ನೆಲವಿದೆಯೆ ? ಇಲ್ಲ, ಇಲ್ಲ. ಹಂದಿನಾಯಿಗಳಿಗಿಂತ ಕಡೆಯಾಗಿ ಬಾಳು ಸಾಗಿಸುತ್ತಿರುವ, ಕುಡಿಯುವ ನೀರು ಸಿಗದಿರುವ ಈ ನೆಲ ನನ್ನ ತಾಯ್ನೆಲವೆ ? ದೇವಾಲಯ ಪ್ರವೇಶಕ್ಕವಕಾಶ ನೀಡದಿರುವ, ಅಸಮಾನತೆಯೆ ಮೂಲಭೂತ ತತ್ತ್ವವಾಗಿರುವ ಈ ಧರ್ಮ ನನ್ನ ಧರ್ಮವೆ ? ಆತ್ಮಗೌರವವುಳ್ಳ ಯಾವ ಅಸ್ಪೃಶ್ಯನೂ ಈ ನಾಡಿನ ಬಗ್ಗೆ ಹೆಮ್ಮೆ ಪಡುವಂತಿಲ್ಲ. ಕೆಲವರು ನನ್ನನ್ನು ದೇಶದ್ರೋಹಿಯೆಂದು ಕರೆದರೆ ದುಃಖವಿಲ್ಲ; ನಾನು ದೇಶದ್ರೋಹಿ ಎಂಬುದು ನಿಜವಾದರೆ ಅದಕ್ಕೆ ಈ ದೇಶದ ಜನರೇ ಕಾರಣ. ನನ್ನ ಅಂತಸ್ಸಾಕ್ಷಿಗನುಗುಣವಾಗಿ ದೀನದಲಿತರಿಗೆ, ಅವರ ಮೂಲಕ ದೇಶಕ್ಕೆ ಸೇವೆ ಸಲ್ಲಿಸುತ್ತಿದ್ದೇನೆ. ಅವರ ಉದ್ಧಾರವಾಗದೆ ದೇಶೋದ್ಧಾರ

ಸಾಧ್ಯವಿಲ್ಲ. ಅವರ ಉದ್ಧಾರಕಾರ್ಯದಲ್ಲಿ ನಿರತನಾಗಿರುವ ನನ್ನಿಂದ ದೇಶಕ್ಕೆ ಅಹಿತವುಂಟಾಗುವುದಾದರೂ ಅದು ಪಾಪವಾಗುವುದಿಲ್ಲ. ದೇಶಕ್ಕೆ ಕೇಡೆಣಿಸಬೇಕೆಂಬುದು ನನ್ನ ಉದ್ದೇಶವಲ್ಲ; ನನ್ನ ಜನರಿಗೆ ಮಾನವೀಯ ಹಕ್ಕುಗಳನ್ನು ಗಳಿಸಿಕೊಡಬೇಕೆಂಬುದೇ ನನ್ನ ಜೀವನ ಧ್ಯೇಯ.

ಗಾಂ : ನಿಮ್ಮ ಧ್ಯೇಯನಿಷ್ಠೆಯಲ್ಲಿ ನನಗೆ ಎಳ್ಳಷ್ಟೂ ಸಂದೇಹವಿಲ್ಲ. ಆದರೆ ಎಲ್ಲಕ್ಕಿಂತ ದೇಶ ಕಲ್ಯಾಣ ಮಿಗಿಲಲ್ಲವೆ ?

ಅಂ : ಅಂಗಕ್ಕೆ ದೇಹವೆಷ್ಟು ಮುಖ್ಯವೋ, ದೇಹಕ್ಕೆ ಅಂಗವೂ ಅಷ್ಟೇ ಮುಖ್ಯ. ಮುಸ್ಲಿಂ ಮತ್ತು ಸಿಖ್ಖರು ಅಸ್ಪೃಶ್ಯರಿಗಿಂತ ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಮುಂದುವರಿದಿದ್ದಾರೆನ್ನುವುದು ಸುಳ್ಳೆ ? ಕಾಂಗ್ರೆಸ್ಸು ಅವರ ಬೇಡಿಕೆಗಳನ್ನು ಮಾನ್ಯಮಾಡಿದೆ. ಚಕ್ರಗೋಷ್ಠಿ ಮುಸ್ಲಿಮರಿಗೆ ರಾಜಕೀಯರಕ್ಷಣೆ ನೀಡಬೇಕೆಂದು ಶಿಫಾರಸು ಮಾಡಿದೆ, ಅಂತೆಯೇ ಅದು ಅಸ್ಪಶ್ಯರ ಬೇಡಿಕೆಗಳನ್ನು ಮನ್ನಿಸಿದೆ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು ?

ಗಾಂ ಅಸ್ಪೃಶ್ಯರನ್ನು ಹಿಂದುಗಳಿಂದ ರಾಜಕೀಯವಾಗಿ ಪ್ರತ್ಯೇಕಿಸ ಬಾರದೆಂಬುದೇ ನನ್ನ ಮತ. ಅದರಿಂದಾಗುವ ದುಷ್ಪರಿಣಾಮಗಳು ಅನೂಹ್ಯ.

ಅಂ : (ಮೇಲೇಳುತ್ತ) ನಿಮ್ಮ ನಿಷ್ಕಪಟಾಭಿಪ್ರಾಯಕ್ಕಾಗಿ ಧನ್ಯ ವಾದಗಳು. ಅಸ್ಪೃಶ್ಯರ ಸಮಸ್ಯೆ ಬಗ್ಗೆ ನನ್ನ ನಿಮ್ಮ ನಿಲವೇನೆಂಬುದು ಸ್ಪಷ್ಟವಾಗಿದೆ. ನಾನು ಬರುತ್ತೇನೆ.

ಅಂಬೇಡ್ಕರರು ಹೊರಗೆ ಹೊರಡುವಾಗ ಅವರ ಮುಖದಲ್ಲಿ ಸಾಹಸಿಯ ದಿಟ್ಟತನ ಪ್ರತಿಬಿಂಬಗೊಂಡಂತಿತ್ತು. ಯಾವುದೋ ದೃಢನಿರ್ಧಾರ ಅವರ ಕಣ್ಣುಗಳಲ್ಲಿ ಮುಕ್ಕುಳಿಸುವಂತಿತ್ತು. ಕಾಂಗ್ರೆಸ್ಸಿನ ಸರ್ವಾಧಿಕಾರಿಗಳೂ, ಜನನಾಯಕರೂ, ಮಹಾತ್ಮರೆಂಬ ಬಿರುದು ಹೊತ್ತವರೂ ಆದ ಗಾಂಧೀಜಿ ಯನ್ನೆದುರಿಸುವುದೂ, ಅವರ ವಿರೋಧ ಕಟ್ಟಿಕೊಳ್ಳುವುದೂ ಸಾಧಾರಣರಿಗೆ ಸಾಧ್ಯವಾದದ್ದಲ್ಲ. ಅಪಾರ ಆತ್ಮಪ್ರತ್ಯಯವುಳ್ಳ ಆತ್ಮಸಾಕ್ಷಿಗನುಗುಣವಾಗಿ ನಿಷ್ಠೆಯಿಂದ ನಡೆಯುವ ಕೆಚ್ಚೆದೆಯ ಬಂಟನಿಗೆ, ಬಹುಜನರ ಆತ್ಮಶಕ್ತಿಯ ಬೆಂಬಲವಿದ್ದವನಿಗೆ ಮಾತ್ರ ಅದು ಸಾಧ್ಯ. ದುಂಡು ಮೇಜಿನ ಪರಿಷತ್ತಿಗೆ ಹೋಗುವ ಮುನ್ನ ಅಂಬೇಡ್ಕರರು ಬ್ರಾಹ್ಮಣರಾಗಿರಬೇಕೆಂದು ಗಾಂಧೀಜಿ ತಿಳಿದಿದ್ದರಂತೆ. ಅವರ ಆ ತಿಳಿವಳಿಕೆಗೆ ಕೇವಲ ಉತ್ತಮಕುಲದ ಮುಂದಾಳು

ಗಳಲ್ಲಿ ನಿರೀಕ್ಷಿಸಬಹುದಾಗಿದ್ದ ಧೈರ್ಯಧೀಮಂತಿಕೆ ಸಾಹಸ ಪ್ರವೃತ್ತಿಗಳು ಆ ಅಸ್ಪೃಶ್ಯನಾಯಕರಲ್ಲಿ ಕಂಡದ್ದೇ ಕಾರಣವಾಗಿದ್ದಿರಬಹುದು. ಚಕ್ರಗೋಷ್ಠಿಯ ನಂತರ ಅಂಬೇಡ್ಕರರು ಯಾರೂ ಉಪೇಕ್ಷಿಸಲಾಗದ ರಾಷ್ಟ್ರನಾಯಕರೆಂಬ ಅರಿವು ಗಾಂಧೀಜಿ ಮೊದಲಾದ ಕಾಂಗ್ರೆಸ್ ನಾಯಕರ ತಲೆಹೊಕ್ಕಂತೆ ತೋರುತ್ತದೆ.

ಅದೇ ದಿನ ರಾತ್ರಿ ನಿಮ್ನವರ್ಗದ ನಾಯಕರ ದ್ವಿತೀಯ ಚಕ್ರ ಗೋಷ್ಠಿಗೆ ಹೊರಡಲಿದ್ದ ಅಂಬೇಡ್ಕರರಿಗೆ ಬೀಳ್ಕೊಡಿಗೆ ಸಮಾರಂಭ ಏರ್ಪಡಿ ಸಿದ್ದರು. ಅಂಬೇಡ್ಕರರು ತಮ್ಮ ಭಾಷಣದಲ್ಲಿ 'ನಿಮ್ಮ ಪ್ರೀತಿಯೇ ನನಗೆ ಸ್ಫೂರ್ತಿ. ನೂರಿಪ್ಪತ್ತೈದು ಮಂದಿ ಪ್ರತಿನಿಧಿಗಳಿರುವ ಸಮ್ಮೇಳನದಲ್ಲಿ ನಮ್ಮ ಪೈಕಿ ನಾವಿಬ್ಬರೇ. ಆದರೂ ನಮ್ಮ ಬೇಡಿಕೆಗಳ ಈಡೇರಿಕೆಗಾಗಿ ನಮ್ಮ ಸಾಧನ ಸಂಪತ್ತನ್ನೆಲ್ಲ ಬಳಸಿಕೊಂಡು ಹೋರಾಟ ಹೂಡುತ್ತೇನೆ. ಮಧ್ಯಾಹ್ನ ಗಾಂಧಿಯವರ ಬಳಿ ಮಾತಾಡಿದೆ. ಸದ್ಯಕ್ಕೆ ನಮ್ಮ ಹಿತರಕ್ಷಣೆ ಗಾಗಿ ಅವರೇನೂ ಮಾಡಲಾರರು. ನಾವು ಸ್ವಾವಲಂಬಿಗಳಾಗುವ ತನಕ, ಹೋರಾಟ ನಡೆಸುವವರೆಗೆ ಅಧಿಕಾರ ಪ್ರತಿಷ್ಠೆಗಳು ದಕ್ಕುವುದಿಲ್ಲ.' ಎಂದು ವಾಸ್ತವ ಸ್ಥಿತಿಯನ್ನು ವಿವರಿಸಿದರು.

1931ರ ಆಗಸ್ಟ್ 15 ರಂದು ಮುಲ್ತಾನ್ ನೌಕೆಯಲ್ಲಿ ಹೆಚ್ಚು ಕಡಮೆ ಎಲ್ಲ ಭಾರತೀಯ ಪ್ರತಿನಿಧಿಗಳೂ ಹೊರಡುವವರಿದ್ದರು. ಎರಡು ಸಾವಿರ ಮಂದಿ ಸ್ವಯಂಸೇವಕರು ಅಂಬೇಡ್ಕರರಿಗೆ ಗೌರವರಕ್ಷೆ ನೀಡಿ, 'ಅಂಬೇಡ್ಕರರಿಗೆ ಜಯವಾಗಲಿ, ಬಾಬಾ ಸಾಹೇಬ್ ಕಿ ಜೈ' ಎಂದು ಘೋಷಿಸಿದಾಗ ಬಂದರುಕಟ್ಟೆಯಲ್ಲಿ ನೆರೆದಿದ್ದವರೆಲ್ಲ ಅಪ್ರಜ್ಞಾಪೂರ್ವಕವಾಗಿ ಜಯಕಾರ ಹಾಕಿದರು. ಗಾಂಧೀಜಿ, ಸರೋಜಿನಿನಾಯುಡು, ಮಾಳವೀಯರು ಆ ಹಡಗಿ ನಲ್ಲಿ ಕಾಣಲಿಲ್ಲ. ತಮ್ಮ ನಿಲವನ್ನು ಗಾಂಧೀಜಿ ವಿರೋಧಿಸುತ್ತಾರೆಂಬ ಸಂಗತಿ ಡಾಕ್ಟರರಿಗೆ ಮನವರಿಕೆಯಾಗಿತ್ತು. ಆದ್ದರಿಂದ ಅಲ್ಲಲ್ಲಿ ಸಭೆ ಸೇರಿಸಿ, ಗಾಂಧಿಯವರ ಭಾವನೆಗಳನ್ನು ವಿರೋಧಿಸಿ, ನಿರ್ಣಯಗಳನ್ನಂಗೀಕರಿಸಬೇಕೆಂದು ಮಾರ್ಗಮಧ್ಯದಲ್ಲಿ ಶಿವತರ್ಕರಿಗೆ ಪತ್ರಬರೆದು ತಿಳಿಸಿದರು.

ಲಂಡನ್ ತಲುಪುತ್ತಿದ್ದಂತೆ ಅಂಬೇಡ್ಕರ್ ಫ್ಲೂ ಜ್ವರದಿಂದ ಸುಸ್ತಾ ದರು. ವಾಂತಿಭೇದಿಯಿಂದಾಗಿ ದೇಹ ನಿತ್ರಾಣವಾಯಿತು. ಚೈತನ್ಯವುಡು ಗಿತು. ತಮ್ಮ ಆರೋಗ್ಯ ಅಪಾಯದ ದವಡೆಯಲ್ಲಿದೆಯೆಂದೂ, ಆ

ವಿಷಯ ತಮ್ಮ ಪತ್ನಿಗೆ ತಿಳಿಸಕೂಡದೆಂದು ಅವರು ತಮ್ಮ ಕಾರ್ಯದರ್ಶಿಗೆ ಪತ್ರ ಬರೆದು ತಿಳಿಸಿದರು. ಏಳೆಂಟು ದಿನಗಳ ಔಷಧೋಪಚಾರದ ಪರಿಣಾಮ ವಾಗಿ ಜ್ವರದಿಂದ ಮುಕ್ತರಾದರೂ, ನಿಶ್ಶಕ್ತಿಯಿಂದಾಗಿ ಮಂಚದಿಂದಿಳಿಯು ತ್ತಿರಲಿಲ್ಲ. ಆ ಸಮಯದಲ್ಲಿ ಗಾಂಧಿ ಮತ್ತು ಕಾಂಗ್ರೆಸ್ಸು ಅವರ ಮನಸ್ಸನ್ನು ತುಂಬಿಕೊಂಡಿರುತ್ತಿದ್ದುವು. ಗಾಂಧಿಯಂಥ ವ್ಯಕ್ತಿ ಸವರ್ಣೀಯರಿಗೆ ಹಾಗೂ ಸಂಪ್ರದಾಯಬದ್ಧ ಪಟ್ಟಭದ್ರ ಹಿತಾಸಕ್ತ ಜನರಿಗೆ ಹೆದರಿಕೊಂಡು, ವಾಸ್ತವ ಸ್ಥಿತಿಯನ್ನು ಲಕ್ಷಿಸದೆ, ಅಸ್ಪೃಶ್ಯರ ಬಗ್ಗೆ ಕಡುಲೋಭಿಯಂತೆ ವರ್ತಿಸುತ್ತಿದ್ದುದು ಅವರ ಚಿತ್ತದಲ್ಲಿ ವಿಸ್ಮಯ ವ್ಯಾಕುಲಗಳ ವೀಚಿಯೆಬ್ಬಿಸಿತ್ತು.

ಸೆಪ್ಟೆಂಬರ್ 7 ರಂದು ಚಕ್ರಗೋಷ್ಠಿಯ ದ್ವಿತೀಯಾಧಿವೇಶನ ಪ್ರಾರಂಭ ವಾಯಿತು. ಗಾಂಧೀಜಿ, ಸರೋಜಿನಿ, ಮಾಳವೀಯರು 12 ರಂದು ಲಂಡನ್ ಸೇರಿದರು. 15 ರಂದು ಗಾಂಧೀಜಿ ಸಂಯುಕ್ತ ರಚನಾಸಮಿತಿಯ ಮುಂದೆ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಕಾಂಗ್ರೆಸ್ಸು ಜಾತಿ ಮತಾತೀತವಾದ ಸರ್ವ ಪ್ರಾತಿನಿಧಿಕ ಸಂಸ್ಥೆಯೆಂಬುದನ್ನು ಖಚಿತಪಡಿಸಿದರು. ಕಾಂಗ್ರೆಸ್ಸು ಸಂಸ್ಥಾನಿಕರಿಗೆ ವಿರೋಧವಾಗಿಲ್ಲವೆಂದೂ ಸಂಸ್ಥಾನಗಳ ಒಳಾಡಳಿತ ದಲ್ಲಿ ತಲೆಹಾಕುವುದಿಲ್ಲವೆಂದೂ ಅವರು ತಿಳಿಸಿದರು. ಸಂಸ್ಥಾನಿಕರ ಬೇಕು ಬೇಡಗಳ ಈಡೇರಿಕೆಗೆ ಈ ಸಮಿತಿ ಸಿದ್ಧವಾಗಿಲ್ಲವೆಂದು ಅಂಬೇಡ್ಕರ್ ಗರ್ಜಿಸಿ ದಾಗ, ಇತರರು ಕುಣಿಸಿದಂತೆ ಕುಣಿಯಲು ಸಂಸ್ಥಾನಿಕರು ಸಿದ್ಧರಾಗಿಲ್ಲವೆಂದು ಬಿಕನೀರ್ ಮಹಾರಾಜರು ಗುಡುಗಿದರು. ಸಂಪನ್ಮೂಲಗಳಿರುವ ಸಂಸ್ಥಾನ ಗಳು ಮಾತ್ರ ಸಂಯುಕ್ತ ವ್ಯವಸ್ಥೆಯನ್ನು ಸೇರಬಹುದೆಂದೂ, ಅಂಥ ಸಂಸ್ಥಾನಗಳು ಚುನಾಯಿತ ಪ್ರತಿನಿಧಿಯನ್ನು ಮಾತ್ರ ಕೇಂದ್ರ ಶಾಸನಸಭೆಗೆ ಕಳಿಸತಕ್ಕದ್ದೆಂದೂ ಅಂಬೇಡ್ಕರ್ ವಾದಿಸಿದರು. ಶ್ರೀಸಾಮಾನ್ಯರ ಹಿತವನ್ನು ಲಕ್ಷಿಸದ, ಸ್ವಾತಂತ್ರ್ಯ ಪ್ರಗತಿಗಳಿಗೆ ಕಂಟಕವಾಗಿರುವ ಭೂಮಾಲೀಕರಿಗೆ ಮೀಸಲು ಸ್ಥಾನಗಳು ಬೇಕಿಲ್ಲವೆಂದು ಸ್ಪಷ್ಟಪಡಿಸಿದರು. ಮೊದಲನೆಯ ದಿನ ಅದೇ ಸಮಿತಿಯ ಮುಂದೆ ಮಾತಾಡುತ್ತ, ಅಂಬೇಡ್ಕರರ ಅಭಿಪ್ರಾಯದ ಬಗ್ಗೆ ತಮ್ಮ ಸಹಾನುಭೂತಿಯಿದೆಯೆಂದೂ, ರಾಜರ ಪರವಾಗಿ ಮಾತಾಡಿದ ಸುಲ್ತಾನ್ ಅಹಮ್ಮದ್ ಅವರ ವಾದ ಸಕಾರಣವಾಗಿದೆಯೆಂದೂ ಗಾಂಧೀಜಿ ನುಡಿದರು. ಸಂಸ್ಥಾನಗಳ ಭವಿಷ್ಯವನ್ನು ಅಲ್ಲಿಯ ಪ್ರಜೆಗಳಿಗೆ ಬಿಡುವುದರ ಔಚಿತ್ಯವನ್ನವರು ಮನಗಾಣಿಸಿದರು. ಚಾರಿತ್ರಿಕ ಕಾರಣಗಳಿಗಾಗಿ ಮುಸ್ಲಿಮ್

ಸಿಖ್ಖರಿಗೆ ವಿಶೇಷ ಸವಲತ್ತುಗಳನ್ನು ಕೊಡಬೇಕಾಗಿದೆಯೆಂದೂ, ಬೇರೆ ಯಾರಿಗೂ ಅಂಥ ಸೌಲಭ್ಯಗಳನ್ನು ಒದಗಿಸಬೇಕಾಗಿಲ್ಲವೆಂದೂ ಅವರು ವಾದಿಸಿದರು. ದೇವದಾಸ ಗಾಂಧಿಯವರ ದೌತ್ಯದ ಮೂಲಕ ಸರೋಜಿನಿ ನಾಯ್ಡು ಅವರ ಮನೆಯಲ್ಲಿ ಗಾಂಧಿ ಅಂಬೇಡ್ಕರರ ಭೇಟಿ ಏರ್ಪಾಡಾಯಿತು. 'ನನ್ನ ಜನರಿಗೆ ಸಾಕಷ್ಟು ರಾಜಕೀಯ ರಕ್ಷಣೆಗಳನ್ನು ನೀಡುವುದಾದರೆ ನಾನು ಭಾರತಕ್ಕೆ ಸ್ವರಾಜ್ಯ ಬೇಡವೆನ್ನುವುದಿಲ್ಲ'. ಎಂಬುದಾಗಿ ಅಂಬೇಡ್ಕರರು ಮತ್ತೆ ತಮ್ಮ ಪಟ್ಟು ಬಿಡಲಿಲ್ಲ.

ಈ ನಡುವೆ ಗಾಂಧೀಜಿ ಮತ್ತು ಮುಸ್ಲಿಮ್ ನಾಯಕರ ನಡುವೆ ಖಾಸಗಿಯಾಗಿ ಸಂಧಾನ ನಡೆಯುತ್ತಲೇ ಇತ್ತು. ಮುಸ್ಲಿಮರ ಬೇಡಿಕೆಗಳಲ್ಲಿ ಬಹುಪಾಲನ್ನು ಗಾಂಧೀಜಿ ಒಪ್ಪಿಕೊಳ್ಳಬಹುದೆಂಬ ಸುದ್ದಿಯೂ ಪ್ರಕಟವಾಗಿತ್ತು. ಏಳು ದಿನಗಳ ನಂತರ ಸಂಧಾನ ಸಫಲವಾಗಲಿಲ್ಲವೆಂದು ಗಾಂಧೀಜಿ ಪ್ರಕಟಿಸಿದರು. ಭಾರತೀಯ ಆಯೋಗದಲ್ಲಿ ಚುನಾಯಿತ ಪ್ರತಿನಿಧಿಗಳಿಲ್ಲದ್ದರಿಂದ ಸರ್ವಗ್ರಾಹ್ಯ ಪರಿಹಾರ ಸಾಧ್ಯವಾಗಿಲ್ಲವೆಂದೂ, ಅಲ್ಪಸಂಖ್ಯಾತ ಸಮಿತಿಯ ಸಭೆಯನ್ನು ಅನಿರ್ದಿಷ್ಟಕಾಲ ಮುಂದೂಡಬಹುದೆಂದೂ ಅವರು ಸಲಹೆಯಿತ್ತರು. ಆ ಸಲಹೆಯನ್ನು ಅಂಬೇಡ್ಕರರು ಕಟುವಾಗಿ ಟೀಕಿಸಿದರು. 'ಈ ಆಯೋಗದ ಪ್ರತಿನಿಧಿಗಳು ಸರ್ಕಾರದಿಂದ ನಾಮಕರಣಗೊಂಡವರು ನಿಜ. ಚುನಾವಣೆ ನಡೆದಿದ್ದರೂ ನನ್ನ ಜನ ನನ್ನನ್ನೇ ಆರಿಸುತ್ತಿದ್ದರೆಂಬುದರಲ್ಲಿ ಲವಲೇಶವೂ ಸಂದೇಹವಿಲ್ಲ. ಆದ್ದರಿಂದ ನಾನು ಚುನಾಯಿತ ಪ್ರತಿನಿಧಿಯಲ್ಲವೆಂಬ ಮಾತು ಸಲ್ಲದು. ಈ ಆಯೋಗದಲ್ಲಿ ನನ್ನ ಸದಸ್ಯತ್ವ ಎಂಥದೇ ಇರಲಿ, ನಾನಂತು ನನ್ನ ಜನರ ಆಶೋತ್ತರಗಳನ್ನು ಸಂಪೂರ್ಣವಾಗಿ ಪ್ರತಿನಿಧಿಸುತ್ತಿದ್ದೇನೆಂದು ನಿಸ್ಸಂದಿಗ್ಧವಾಗಿ ಹೇಳಬಯಸುತ್ತೇನೆ. ನಿಮ್ನವರ್ಗೀಯರನ್ನು ಕಾಂಗ್ರೆಸ್ಸು ಪ್ರತಿನಿಧಿಸುತ್ತದೆನ್ನುವ ಮಾತು ಬೇಜವಾಬ್ದಾರಿ ಜನರ ಪೊಳ್ಳು ಘೋಷಣೆಯಾಗಿದೆ. ಇದಕ್ಕೆ ಅಸ್ಪೃಶ್ಯರಿಂದ ನನಗೆ ಬರುತ್ತಿರುವ ಸಹಸ್ರ ಸಹಸ್ರ ತಂತಿಗಳೇ ಸಾಕ್ಷಿಯಾಗಿವೆ. ಈ ಸಮಸ್ಯೆಯನ್ನು ಸಮಿತಿ ಬಗೆಹರಿಸದಿದ್ದರೆ ಬ್ರಿಟಿಷ್ ಸರ್ಕಾರವೇ ಪರಿಹಾರ ಕಂಡುಹಿಡಿಯಬೇಕು. ಆ ತನಕ ನಿಮ್ನವರ್ಗ ಅಧಿಕಾರ ವರ್ಗಾವಣೆಗೊಪ್ಪುವುದಿಲ್ಲ. ಹಿಂದೂ ಅಥವಾ ಮುಸ್ಲಿಮರ ಕೈಗೆ ಅಧಿಕಾರ ಹೋಗುವುದನ್ನು ನಾನು ಪ್ರಬಲವಾಗಿ ವಿರೋಧಿಸುತ್ತೇನೆ.'

ಜನ್ಮ ಜಾತಿ ಮತಗಳು ಅಧಿಕಾರ ಗೌರವ ಮತ್ತು ಉದ್ಯೋಗಗಳ ಸಂಪಾದನೆಗೆ, ಪೌರಹಕ್ಕುಗಳ ಅನುಭೋಗಕ್ಕೆ, ವ್ಯಾಪಾರ ವಾಣಿಜ್ಯಾದಿ

ವ್ಯವಹಾರಗಳ ಅನುಷ್ಠಾನಕ್ಕೆ ಅಡ್ಡಿಯಾಗಬಾರದೆಂಬ ಸೂತ್ರವನ್ನು ಅಲ್ಪ ಸಂಖ್ಯಾತ ಸಮಿತಿ ಅಂತಿಮವಾಗಿ ರೂಪಿಸಿತು. ಕೇಂದ್ರ ಮತ್ತು ಪ್ರಾಂತೀಯ ಶಾಸನಸಭೆಗಳಲ್ಲಿ ನಿಮ್ನವರ್ಗೀಯರಿಗೆ ವಿಶೇಷ ಪ್ರಾತಿನಿಧ್ಯವಿರಬೇಕೆಂಬ ಅಂತೆಯೇ ಪ್ರತ್ಯೇಕ ಚುನಾವಣಾ ಕ್ಷೇತ್ರಗಳಿರಬೇಕೆಂಬ ಉಪಸೂತ್ರವನ್ನು ಅಂಬೇಡ್ಕರರೂ ಶ್ರೀನಿವಾಸನ್ ಅವರೂ ಸೇರಿಸಿದರು. ಅಂಬೇಡ್ಕರರ ಸೂತ್ರ ಗಾಂಧೀಜಿಗೆ ಒಪ್ಪಿಗೆಯಾಗಲಿಲ್ಲ. "ಕಾಂಗ್ರೆಸ್ಸು ಸ್ಥಾನ ಮೀಸಲಾತಿಯನ್ನಾಗಲಿ ಪ್ರತ್ಯೇಕ ಚುನಾವಣಾ ಕ್ಷೇತ್ರವನ್ನಾಗಲಿ ಮಾನ್ಯ ಮಾಡುವುದಿಲ್ಲ. ನಿಮ್ನವರ್ಗದ ಜನ ಮತಾಂತರ ಹೊಂದಿದರು ಸರಿಯೆ, ಹಿಂದೂಧರ್ಮ ಎರಡು ಹೋಳು ಗಳಾಗಿ, ಪ್ರತಿಯೊಂದು ಹಳ್ಳಿಯೂ ಸೀಳಾಗಿ ಒಡೆಯುವುದನ್ನು ನಾನು ಸಹಿಸಲಾರೆ. ಅಂಥ ಒಡಕು ಸಂಭವಿಸದಿರಲು ಪ್ರಾಣತ್ಯಾಗಕ್ಕೂ ನಾನು ಸಿದ್ಧ" ಎಂದು ಗಾಂಧೀಜಿ ಹಠ ಹಿಡಿದರು. ಅಲ್ಪಸಂಖ್ಯಾತರ ಸಮಸ್ಯೆಗೆ ಸರ್ವಾನು ಮತದ ಪರಿಹಾರ ದೊರಕುವ ಭರವಸೆ ಹತ್ತಿರದಲ್ಲಿದ್ದಂತೆ ಬ್ರಿಟಿಷ್ ಪ್ರಧಾನಿಗೆ ಕಾಣಲಿಲ್ಲ. ಈ ಸಮಸ್ಯೆಗೆ ಪರಿಹಾರ ಕಂಡುಹಿಡಿಯುವ ಅಧಿಕಾರವನ್ನು ತಮಗೆ ವಹಿಸಬೇಕೆಂದೂ, ತಮ್ಮ ತೀರ್ಪಿಗೆ ಸರ್ವರೂ ಬದ್ಧರಾಗಿರುದಾಗಿ ಪ್ರಮಾಣಪತ್ರ ಬರೆದು ರುಜುಮಾಡಿ ಕೊಡಬೇಕೆಂದೂ ಅವರು ಪ್ರತಿನಿಧಿ ಗಳಿಗೆ ಸಲಹೆ ಮಾಡಿದರು. ಅಂಬೇಡ್ಕರ್ ಹೊರತಾಗಿ ಎಲ್ಲರೂ ಪ್ರಮಾಣ ಪತ್ರಕೆ ಸಹಿ ಹಾಕಿದರು. ತಮ್ಮ ಬೇಡಿಕೆ ನ್ಯಾಯಬದ್ಧವಾದದ್ದೆಂಬ ಮತ್ತು ಅದಕೆ ಮನ್ನಣೆ ದೊರೆಯಲೇಬೇಕೆಂಬ ನಂಬಿಕೆ ಅಚಲವಾದದ್ದರಿಂದ ಅವರು ಸಹಿ ಹಾಕಲಿಲ್ಲ.

ಚಕ್ರಗೋಷ್ಠಿಯ ನಡೆವಳಿಗಳು ಆಗಿಂದಾಗ್ಗೆ ಭಾರತೀಯ ಪತ್ರಿಕೆಗಳಲ್ಲಿ ವರದಿಯಾಗುತ್ತಿದುವು ಗಾಂಧೀಜಿ ಅಸ್ಪೃಶ್ಯರ ವಿರೋಧಿ ಎಂಬ ಭಾವನೆ ಕೆಲವು ಅವರ್ಣೀಯರ ಮನಸ್ಸಿನಲ್ಲಿ ಭೂತಾಕಾರ ಪಡೆದಂತೆ, ಅಂಬೇಡ್ಕರ್ ಸ್ವಾತಂತ್ರ್ಯವಿರೋಧಿ, ಸಾರ್ವಭೌಮ ಸರ್ಕಾರದ ಕೈಗೊಂಬೆ ಎಂಬ ಅಭಿಪ್ರಾಯ ಸವರ್ಣೀಯರ ಭಾವೋದ್ರೇಕಕ್ಕೆ ಕಾರಣವಾಯಿತು. ಗಾಂಧೀಜಿಯನ್ನು ಕುರಿತ ಅಂಬೇಡ್ಕರರ ಟೀಕೆ ಕೆಲವರ ಹೃದಯದಲ್ಲಿ ದ್ವೇಷಲಹರಿಗಳನ್ನೆಬ್ಬಿಸಿತು. ಹೀಗಾಗಿ ಅಂಬೇಡ್ಕರರನ್ನು ಅನಾಗರಿಕ, ದುರಹಂಕಾರಿ, ದ್ರೋಹಿ, ಹಿಂದೂ ಧರ್ಮದ ಕಡುವೈರಿ, ಎಂದು ನಾನಾ ರೀತಿಯಾಗಿ ಅವರ ಮೇಲೆ ಬಯ್ಗುಳಗಳ ಮಳೆಗರೆದದ್ದುಂಟು. ಗಾಂಧೀಜಿಯನ್ನು ವಿರೋಧಿಸಿದ್ದರಿಂದಲೇ ಅವರು

ದೇಶದ್ರೋಹಿಯಾಗುತ್ತಾರೆಯೆ? ಸಾಮಾಜಿಕ ಮತ್ತು ಧಾರ್ಮಿಕ ನಿಷೇಧಗಳನ್ನು ತೊಡೆದುಹಾಕಿ. ಸರ್ವಸಮಾನತೆಯ ಆಧಾರದ ಮೇಲೆ ಹಿಂದೂ ಧರ್ಮವನ್ನು ಪುನಶ್ಚೇತನಗೊಳಿಸಿ. ಪರಿಷ್ಕರಿಸಿ ನವೀಕರಿಸಿರೆಂದು ಹೇಳಿದ್ದು ತಪ್ಪೆ? ದೀನದಲಿತರಿಗಾಗಿ ಕಣ್ಣೀರು ಸುರಿಸಿದ್ದು. ಧಾರ್ಮಿಕ ಕ್ರೋಧ ವ್ಯಕ್ತಪಡಿಸಿದ್ದು ಅಪರಾಧವೆ? ಯುಗಕ್ಕೊಮ್ಮೆ ಲಭ್ಯವಾಗುವ ಸುವರ್ಣಾವಕಾಶವೊಮ್ಮೆ ತಪ್ಪಿಸಿಕೊಂಡದ್ದಾದರೆ ಅದು ಮತ್ತೆ ದಕ್ಕುತ್ತದೆಂಬ ಖಾತರಿಯಾದರೂ ಇದೆಯೆ? ಸವರ್ಣೀಯರಿಗೆ ಬೇಕಾದ್ದು ರಾಜಕೀಯ ಸ್ವಾತಂತ್ರ್ಯ: ಅವರ್ಣೀಯರಿಗೆ ಬೇಕಾದ್ದು ಅದರ ಜತೆಗೆ ಸಾಮಾಜಿಕ ಸ್ವಾತಂತ್ರ್ಯ. ಒಂದು ಆಂಗ್ಲರ ಕೈಯಲ್ಲಿದೆ, ಮತ್ತೊಂದು ಹಿಂದೂಗಳ ಕೈಯಲ್ಲಿದೆ. ನೀರು ಕೊಡದವರು ವಜ್ಜಿಗೆ ಕೊಡುವುದುಂಟೆ? ಇಂದು ಕೊಡದವರು ನಾಳೆ ಕೊಡುವುದುಂಟೆ? ಈ ಪ್ರಶ್ನಾವಳಿಯ ಹಿನ್ನೆಲೆಯಲ್ಲಿ, ಅಂಬೇಡ್ಕರರು ಚಿಕ್ಕಂದಿನಿಂದ ಅನುಭವಿಸಿದ ಚಿತ್ರಹಿಂಸೆಗಳನ್ನು ನೆನಪಿನಲ್ಲಿರಿಸಿಕೊಂಡು ಅವರ ವರ್ತನೆಯನ್ನು ಪರೀಕ್ಷಿಸುವುದಾದರೆ, ಅವರ ಕೋಪತಾಪಗಳು, ವ್ಯಂಗ್ಯ ವಿಡಂಬನೆಗಳು ಸಹಜವೆಂದೂ ಕ್ಷಮ್ಯವೆಂದೂ ತೋರದಿರಲಾರವು. ಅಂಬೇಡ್ಕರರನ್ನು ಸಮಾಜದಿಂದ ಪ್ರತ್ಯೇಕಿಸಿ ಅವರ ಗುಣಶೀಲಗಳನ್ನು ಒರೆಗಿಕ್ಕಿ ನೋಡುವುದರ ಬದಲು, ನಾಡಿನ ಚಾರಿತ್ರಿಕ ಹಿನ್ನೆಲೆಯಲ್ಲಿ, ಅಸ್ಪೃಶ್ಯರ ಮಾನಸಿಕ ಸನ್ನಿವೇಶದಲ್ಲಿ ಅವುಗಳನ್ನು ಪರಿಕಿಸುವುದಾದರೆ ಕಿಸುರು ಕಿನಿಸುಗಳಿಗಾಗಲೀ ಮನಃಕಷಾಯಕ್ಕಾಗಲೀ ಕಾರಣವಿಲ್ಲವೆಂದೇ ಹೇಳಬಹುದು. ಯಾರು ಏನೇ ಮಾಡಲಿ, ಹೇಗೆಯೇ ಟೀಕಿಸಲಿ ಅವರು ಬೆಚ್ಚಲಿಲ್ಲ, ಬೆದರಲಿಲ್ಲ, ಧ್ಯೇಯದಿಂದ ವಿಚಲಿತರಾಗಲಿಲ್ಲ.

1932ರ ಜನವರಿ 29ರಂದು ಅಂಬೇಡ್ಕರ್ ಮುಂಬಯಿಗೆ ಮರಳಿದಾಗ ಅವರಿಗಾಗಿ ಅದ್ಭುತ ಸ್ವಾಗತ ಕಾದಿತ್ತು. ತಮ್ಮ ಶಕ್ತಿಸಾಮರ್ಥ್ಯಗಳ, ಆಶೆ ಆಕಾಂಕ್ಷೆಗಳ ಸಂಕೇತವಾಗಿದ್ದ ಮಹಾನಾಯಕನ ದರ್ಶನಕ್ಕಾಗಿ ಜನ ನಾಡಿನ ನಾನಾ ಮೂಲೆಗಳಿಂದ ಮುಂಬಯಿಗೆ ಧಾವಿಸಿದ್ದರು. ಸಂಜೆ ಪರೇಲಿನಲ್ಲಿ ನಡೆದ ಬಹಸಭೆಯ ವೇದಿಕೆಯನ್ನೇರಿ ಅವರು ಸುತ್ತಲೂ ಕಣ್ಣು ಹಾಯಿಸಿದಾಗ ಜನಶಕ್ತಿಯ ತಮ್ಮ ದೇಹವನ್ನು ಹೊಕ್ಕಂತಾಗಿ ತುಸು ಹೊತ್ತು ಮೌನ ತಾಳಿದರು. "ಯಾವೊಬ್ಬ ವ್ಯಕ್ತಿಯಿಂದ ಮಹಾಕಾರ್ಯ ಸಾಧನೆ ಸಾಧ್ಯವಾಗದು. ಸಾಮುದಾಯಕ ಶಕ್ತಿ ಪ್ರೇರಿಸಿದಾಗ, ನಾಯಕ ಅವರ ಸಂಕೇತವಾದಾಗ ಸರ್ವಸಿದ್ಧಿಗಳು ಪ್ರಾಪ್ತವಾಗುತ್ತವೆ. ಕಾಂಗ್ರೆಸ್ ಮಿತ್ರರು

ನನ್ನನ್ನು ದ್ರೋಹಿ ಎಂದು ಕರೆದಿದ್ದಾರೆ. ಗಾಂಧಿಯವರನ್ನು ವಿರೋಧಿಸಿದ್ದೇ ಅವರ ಕೋಪಕ್ಕೆ ಕಾರಣವಾಗಿದೆ." ಎಂದವರು ತಮ್ಮ ಹ್ರಸ್ವ ಭಾಷಣ ಮುಗಿಸಿದರು.

ಚುನಾವಣಾ ರೀತಿನೀತಿಗಳ ಸಂಬಂಧವಾಗಿ ಭಾರತೀಯರ ಅಭಿಪ್ರಾಯಗಳನ್ನು ಕ್ರೋಢೀಕರಿಸಿ, ಸೂಕ್ತ ಸಲಹೆ ನೀಡುವ ಸಲುವಾಗಿ ಬ್ರಿಟಿಷ್ ಸರ್ಕಾರ ಚಕ್ರಗೋಷ್ಠಿಯ ಅಂಗವಾಗಿ ಮತವಿಧಾನ ಸಮಿತಿಯನ್ನು ನೇಮಿಸಿತ್ತಷ್ಟೆ. ಲಾರ್ಡ್ ಲೋಥಿಯನ್ ಅಧ್ಯಕ್ಷರಾಗಿದ್ದ ಆ ಸಮಿತಿಯಲ್ಲಿ ಅಂಬೇಡ್ಕರ್ ಸದಸ್ಯರಾಗಿದ್ದರು. ಆ ಸಮಿತಿ ಹೋದೆಡೆಯಲ್ಲೆಲ್ಲ ನಿಮ್ನ ವರ್ಗೀಯರು ಬಹು ಸಂಖ್ಯೆಯಲ್ಲಿ ನೆರೆದು, ತಮಗೆ ಪ್ರತ್ಯೇಕ ಚುನಾವಣಾ ಕ್ಷೇತ್ರಗಳಿರಬೇಕೆಂಬುದನ್ನು ಸ್ಪಷ್ಟಪಡಿಸುತ್ತಿದ್ದರು. ಕೇಂದ್ರ ಶಾಸನ ಸಭೆಯ ಸದಸ್ಯರಾಗಿದ್ದ ಎಂ. ಸಿ. ರಾಜಾ ಎಂಬ ಮತ್ತೊಬ್ಬ ನಿಮ್ನ ವರ್ಗೀಯ ನಾಯಕರು ಹಿಂದೂ ಮಹಾಸಭೆಯ ಮೂಂಜೆಯವರೊಂದಿಗೆ ಸೇರಿಕೊಂಡು, ತಮ್ಮವರಿಗೆ ಶಾಸನ ಸಭೆಗಳಲ್ಲಿ ಸ್ಥಾನಗಳನ್ನು ಮೀಸಲಾಗಿರಿಸಬೇಕೆಂದೂ, ಜಂಟಿ ಚುನಾವಣಾ ಪದ್ಧತಿಯೆ ಸಾಕೆಂದೂ ಬ್ರಿಟಿಷ್ ಸರ್ಕಾರಕ್ಕೆ ತಂತಿಯ ಮೂಲಕ ಬಿನ್ನಹ ಸಲ್ಲಿಸಿದರು. ರಾಜಾರವರ ಬದಲಾದ ವರ್ತನೆ ಅಂಬೇಡ್ಕರರ ಮನಸ್ಸಿಗೆ ಕಿರಿಕಿರಿಯುಂಟುಮಾಡಿತು.

ತಮ್ಮ ಸಲಹೆಗೆ ಬೆಂಬಲ ಸಿಕ್ಕಲಿಲ್ಲವಾಗಿ, ಮತವಿಧಾನ ಸಮಿತಿಯ ವರದಿ ಬ್ರಿಟಿಷ್ ಸರಕಾರವನ್ನು ತಲಪುವುದಕ್ಕೆ ಮುಂಚೆ, ತಾವು ಪ್ರಧಾನಿಯವರನ್ನು ಭೇಟಿಮಾಡಿ, ಅವರ ಮನಸ್ಸನ್ನೊಲಿಸಿಕೊಳ್ಳುವುದು ಸೂಕ್ತವೆಂದು ಅಂಬೇಡ್ಕರ್ ನಿರ್ಧರಿಸಿದರು. ಜೂನ್ 7ರಂದು ಅವರು ಲಂಡನ್‌ನಗರ ಸೇರಿದರು. ತಮ್ಮ ಪ್ರಯಾಣ ರಹಸ್ಯವಾಗಿರಲೆಂದು ಮಾಡಿದ ಪ್ರಯತ್ನ ಸಫಲವಾಗಲಿಲ್ಲ. ಪತ್ರಿಕೆಯೊಂದರಲ್ಲಿ ಆ ಸುದ್ದಿ ಪ್ರಕಟವಾಗಿತ್ತು. ಇಂಗ್ಲೆಂಡಿನಲ್ಲಿ ಅವರು ಪಾರ್ಲಿಮೆಂಟ್ ಸದಸ್ಯರನ್ನೂ ಮಂತ್ರಿಗಳನ್ನೂ ಕಂಡು ತಮ್ಮ ನಿಲವನ್ನು ಸ್ಪಷ್ಟವಾಗಿ ವಿವರಿಸಿದರು. ಮನವಿ ಪತ್ರಗಳನ್ನು ಸಲ್ಲಿಸಿದರು. ಸರ್ಕಾರ ಅವರ ಸಲಹೆಗಳನ್ನು ಪುರಸ್ಕರಿಸಬಹುದೆಂಬ ಗಾಳಿಸುದ್ದಿಯೂ ಹಬ್ಬಿತು. ಗೆಳೆಯರ ಒತ್ತಾಯದಿಂದಾಗಿ ಡ್ರೆಸ್ಡನ್ನಿನ ಜರ್ಮನ್ ಆರೋಗ್ಯ ಧಾಮದಲ್ಲಿ ಆರೋಗ್ಯ ಸುಧಾರಣೆಗೆಂದು ತಿಂಗಳೊಪ್ಪತ್ತು ನಿಂತರು. ಕೆಲಸವಿಲ್ಲದೆ ಕಾಲ ಕಳೆಯುವುದೇ ಅವರಿಗೆ ಬೇನೆಯಾಗಿ ಕಂಡಿತು. ತಮ್ಮ ಮತ್ತು ತಮ್ಮ ಅಣ್ಣನ ಮಕ್ಕಳ ಭವಿಷ್ಯದ ಬಗ್ಗೆ ಅವರ ಮನಸ್ಸು ಕಾತರತೆಯಿಂದ ಕುದಿಯುತ್ತಿತ್ತು.

ಊರಲ್ಲಿದ್ದಾಗಲಂತೂ ಅವರೆಂದೂ ಮಕ್ಕಳ ಆಗುಹೋಗುಗಳನ್ನು ವಿಚಾರಿಸಿ ಕೊಂಡವರಲ್ಲ. ಅದಕ್ಕೆಲ್ಲ ಅವರಿಗೆ ಸಮಯವಿದ್ದರೆ ತಾನೆ? ಈ ಮಧ್ಯೆ ರಾಜ ಮತ್ತು ಮೂಂಜೆಯವರು ಲಂಡನ್ನಿಗೆ ಬರುವ ಸುದ್ದಿ ತಿಳಿದು ತುಸು ಉದ್ವಿಗ್ನಗೊಂಡರು. ಆರೋಗ್ಯ ಸುಧಾರಣೆಯ ಚಿಹ್ನೆ ಕಂಡ ಕೂಡಲೇ ಅವರು ಮುಂಬಯಿಗೆ ಹಿಂದಿರುಗಿದರು.

ಬಹು ಬೇಗನೆ ಬ್ರಿಟಿಷ್ ಸರ್ಕಾರ 'ಜಾತಿವಾರು ತೀರ್ಮಾನ'ವನ್ನು ಪ್ರಕಟಿಸಬಹುದೆಂಬ ಸುದ್ದಿ ಯರವಾಡ ಜೈಲಿನಲ್ಲಿದ್ದ ಗಾಂಧಿಯವರನ್ನು ತಳಮಳಗೊಳಿಸಿತು. ಅವರು ಚಕ್ರಗೋಷ್ಠಿಯಿಂದ ಹಿಂದಿರುಗಿದಾಗಲೇ ಸೆರೆಮನೆವಾಸ ಕಾದಿತ್ತು. ಆ 'ತೀರ್ಮಾನ'ದ ಪ್ರಕಾರ ಮುಸ್ಲಿಮರು, ಸಿಖ್ಖರು, ಯುರೋಪೀಯರು, ಕ್ರಿಶ್ಚಿಯನ್ನರು ಮತ್ತು ನಿಮ್ನವರ್ಗೀಯರಿಗೆಲ್ಲ ಮೀಸಲು ಸ್ಥಾನಗಳೂ ಪ್ರತ್ಯೇಕ ಚುನಾವಣಾ ಕ್ಷೇತ್ರಗಳ ಸೌಲಭ್ಯವೂ ದೊರೆಯುವಂತಿದ್ದುವು. ಇಂಡಿಯಾವನ್ನು ಅನೇಕ ಜಾತೀಯ ಘಟಕಗಳಾಗಿ ಛಿದ್ರಿಸುವುದೂ, ಹಿಂದೂಗಳನ್ನು ಅಲ್ಪಸಂಖ್ಯಾತರ ಸ್ಥಾನಕ್ಕೆ ನೂಕುವುದೂ ಆ ತೀರ್ಮಾನದ ಹಿನ್ನೆಲೆಯಲ್ಲಿದ್ದ ಮನೋಧರ್ಮವಾಗಿತ್ತು. ಜಾತಿವಾರು ತೀರ್ಮಾನವನ್ನು ರದ್ದುಗೊಳಿಸದಿದ್ದರೆ ಆಮರಣಾಂತ ಉಪವಾಸ ಮಾಡುವುದಾಗಿ ಗಾಂಧೀಜಿ ಬ್ರಿಟಿಷ್ ಮಂತ್ರಿಮಂಡಲಕ್ಕೆ ಪತ್ರಬರೆದರು. ಕ್ರಿಶ್ಚಿಯನ್ ಮತ್ತು ಮುಸ್ಲಿಮರಿಗೆ ಪ್ರತ್ಯೇಕ ಕ್ಷೇತ್ರಗಳಿರಬಹುದೆಂದು ಒಪ್ಪಿಕೊಳ್ಳುವ ಗಾಂಧಿಯವರು ಅಂತ್ಯಜರ ವಿಷಯ ಬಂದಾಗ ಆಕ್ಷೇಪವೆತ್ತುವುದು ತರವಲ್ಲವೆಂದು ನಿಮ್ನವರ್ಗದ ನಾಯಕರು ಅಸಮಾಧಾನಗೊಂಡಿದ್ದರು.

ಗಾಂಧೀಜಿಯವರ ಘೋಷಣೆ ಭಾರತವನ್ನು ಭೀಕರತೆಯಲ್ಲಿ ಮುಳುಗಿಸಿತು. ಉಪವಾಸ ಕೈಗೊಳ್ಳಬಾರದೆಂದು ಗಾಂಧೀಜಿಗೂ, ಜಾತಿವಾರು ತೀರ್ಪನ್ನು ತಡೆಹಿಡಿಯಬೇಕೆಂದು ಸರ್ಕಾರಕೂ ಸಾರ್ವಜನಿಕ ಮನವಿಗಳು ಲಕ್ಷ ಸಂಖ್ಯೆಯಲ್ಲಿ ಮುಟ್ಟಿದುವು. ಅನೇಕ ನಾಯಕರು ದೇಶದಲ್ಲಿ ಉದ್ಭವಿಸಬಹುದಾದ ಭಯಾನಕ ಪರಿಸ್ಥಿತಿಯನ್ನು ಕುರಿತು ಪತ್ರಿಕೆಗಳಲ್ಲಿ ಹೇಳಿಕೆಗಳನ್ನು ಪ್ರಕಟಿಸಿದರು. ಗಾಂಧೀಜಿಯವರ ಕ್ಷೇಮಕ್ಕಾಗಿ ದೇವಾಲಯಗಳಲ್ಲಿ ವಿಶೇಷ ಪೂಜೆ ನಡೆದುವು. ಪರಿಸ್ಥಿತಿಯ ಪರಿಶೀಲನೆಗಾಗಿ ಸೆಪ್ಟೆಂಬರ್ 19ರಂದು ಮುಂಬಯಿಯಲ್ಲಿ ಹಿಂದೂ ನಾಯಕರ ಸಭೆ ಸೇರುವುದೆಂದು ಪಂಡಿತ ಮಾಳವೀಯರು ಘೋಷಿಸಿದರು. ಬ್ರಿಟಿಷ್ ಪ್ರಧಾನಿಗಳ ತೀರ್ಮಾನವನ್ನೊಪ್ಪಿಕೊಳ್ಳುವುದಾಗಿ ಗಾಂಧೀಜಿ ಚಕ್ರಗೋಷ್ಠಿಯ ಸಮಯದಲ್ಲಿ ಪ್ರಮಾಣಪತ್ರಕ್ಕೆ

ಸಹಿಹಾಕಿದ್ದರು. ಈಗ ಅಂಬೇಡಕರರ ಸಮ್ಮತಿಯಿಲ್ಲದೆ ತೀರ್ಪು ತಿದ್ದುವಂತಿಲ್ಲ ವೆಂದು ತಿಳಿದ ನಾಯಕರು ಅವರ ಮನವೊಲಿಸಿಕೊಳ್ಳಲು ಪ್ರಯತ್ನ ನಡಸಿದರು. ಬಾಬಾಸಾಹೇಬರು ನಾಡಿನ ಕೇಂದ್ರ ವ್ಯಕಿಯಾದರು ; ಜಗತ್ತಿನ ದೃಷ್ಟಿ ಅವರ ಕಡೆಗೆ ತಿರುಗಿತು. ಅವರು ನಿಮ್ನವರ್ಗೀಯರ ಏಕೈಕ ನಾಯಕರೆಂಬ ಭಾವನೆ ನಾಯಕರ ಮನಸ್ಸಿನಲ್ಲಿ ಮೂಡುವಂತಾಯಿತು. "ಅಸ್ಪೃಶ್ಯರ ಹಕ್ಕುಗಳನ್ನು ಮೊಟಕುಗೊಳಿಸುವುದಿಲ್ಲವೆಂದು ಆಶ್ವಾಸನೆ ನೀಡುವುದಾದರೆ ನಾನು ಎಂಥ ತ್ಯಾಗಕ್ಕೂ ಸಿದ್ಧನಾಗಿದ್ದೇನೆ" ಎಂಬುದಾಗಿ ಅವರು ತಮ್ಮಬಳಿ ಬಂದ ಶಾಂತಿದೂತರಿಗೆ ಸ್ಪಷ್ಟಪಡಿಸಿದರು.

ಅಂಬೇಡ್ಕರರ ಬಳಿ ಸಂಧಾನಕೆಂದು ಬಂದ ಶಾಂತಿದೂತರಲ್ಲಿ ಥಕರ್ ಮೊದಲಿಗರು. ಆಗ ಅಂಬೇಡಕರರು ಕ್ರಿಮಿನಲ್ ಮೊಕದ್ದಮೆಯೊಂದರ ದಾಖಲೆಗಳ ಅಧ್ಯಯನದಲ್ಲಿ ಮಗ್ನರಾಗಿದ್ದರು. "ಕೇವಲ ಕೆಲವು ನಿಮಿಷಗಳಲ್ಲಿ ನಿಮ್ಮ ಅಹವಾಲು ಮುಗಿಸುವಿರಾ?" ಎಂದವರು ಬಂದವರನ್ನು ಪ್ರಶ್ನಿಸಿದರು. "ನನಗೆ ಕನಿಷ ಒಂದು ಗಂಟೆಯಾದರೂ ಬೇಕು." "ಐದು ನಿಮಿಷಕ್ಕಿಂತ ಹೆಚ್ಚಿಗೆ ಸಾಧ್ಯವಾಗದು." ಥಕರ್ ಐದು ನಿಮಿಷದಲ್ಲಿ ಸಾಧ್ಯವಾದಷ್ಟು ವಿಷಯ ತಿಳಿಸಿ, ಮಾರನೆಯದಿನ ಬರುವುದಾಗಿ ಹೇಳಿ ಹೋದರು. ನಾಡಿನಾದ್ಯಂತ ಸವರ್ಣೀಯರು ಅಂಬೇಡ್ಕರರ ಮೇಲೆಸೆದ ಶಾಪಮೂದಲಿಕೆಗಳಿಗೆ ಅಂತ್ಯವಿರಲಿಲ್ಲ. ಆದರೆ ಅವರು ಮಾತ್ರ ಸಮತೋಲನ ಕಳೆದುಕೊಳ್ಳಲಿಲ್ಲ. ಸಮ್ಮೇಲನದ ಸಿದ್ಧತೆ ಭರಾಟೆಯಿಂದ ನಡೆಯುತ್ತಿದ್ದಾಗ ಅವರೊಂದು ಹೇಳಿಕೆ ಪ್ರಕಟಿಸಿದರು : "ಕ್ರಿಶ್ಚಿಯನ್ ಮತ್ತು ಮುಸ್ಲಿಮರಿಗೆ ವಿಶೇಷ ಸವಲತ್ತುಗಳನ್ನು ಸಲ್ಲಿಸುವುದರಿಂದ ರಾಷ್ಟ್ರ ಚೂರುಚೂರಾಗಿ ಒಡೆಯುವುದಿಲ್ಲವಾದರೆ, ಅಸ್ಪೃಶ್ಯರು ಪಡೆಯುವ ವಿಶೇಷ ಸೌಲಭ್ಯಗಳಿಂದ ಹಿಂದೂ ಧರ್ಮ ಛಿದ್ರವಾಗುತ್ತದೆನ್ನುವುದರಲ್ಲಿ ಅರ್ಥವಿಲ್ಲ. ಮಹಾತ್ಮ ಚಿರಂಜೀವಿಯಲ್ಲ. ಅನೇಕ ಮಹಾತ್ಮರು ದೀನದಲಿತೋದ್ಧಾರಕ್ಕಾಗಿ ಶ್ರಮಪಟ್ಟಿದ್ದಾರೆ. ಈತನಕ ಅವರ ಶ್ರಮ ಫಲಿಸಲಿಲ್ಲ. ಮಹಾತ್ಮರು ಬಂದಿದ್ದಾರೆ, ಹೋಗಿದ್ದಾರೆ ; ಅಸ್ಪೃಶ್ಯರು ಅಸ್ಪೃಶ್ಯರಾಗಿಯೇ ಉಳಿದಿದ್ದಾರೆ." ಅಸ್ಪೃಶ್ಯತಾ ನಿರ್ಮೂಲನಕ್ಕಾಗಿ ಗಾಂಧಿಯವರೆಂದೂ ಆಮರಣಾಂತ ಉಪವಾಸ ಮಾಡಿಲ್ಲವೆಂಬುದು ಅವರ ವಾದ.

ಇಂಥ ಉದ್ವಿಗ್ನ ಸನ್ನಿವೇಶದಲ್ಲಿ ಹಿಂದೂ ನಾಯಕರ ಸಭೆ ಪಂಡಿತ ಮದನಮೋಹನ ಮಾಳವೀಯರ ಅಧ್ಯಕ್ಷತೆಯಲ್ಲಿ ಕೂಡಿತು. ಅಧ್ಯಕ್ಷರ ಅಕ್ಕಪಕ್ಕದಲ್ಲಿ ಅಂಬೇಡ್ಕರ್ ಮತ್ತು ಸೋಲಂಕಿ ಮಂಡಿಸಿದ್ದರು. ರಾಜೇಂದ್ರ ಪ್ರಸಾದ್, ಕಮಲಾ ನೆಹ್ರೂ, ವಾಲ್‌ಚಂದ್ ಹೀರಾಚಂದ್, ಸೆಟಲ್‌ವಾಡ್, ಸಪ್ರು. ಗಿದ್ವಾನಿ. ಥಕ್ಕರ್, ಸಾವರ್‌ಕರ್, ಆಣೆ. ರಾಜ, ಮೂಂಜೆ ಮೊದಲಾದ ಸರ್ವಪಕ್ಷೀಯ ಹಾಗೂ ಪಕ್ಷೇತರ ನ ಯಕರು ಸಭೆಯಲ್ಲಿ ಹಾಜರಿದ್ದರು. ಪ್ರಪ್ರಥಮವಾಗಿ ಅಂಬೇಡ್ಕರರು ಮಾತಾಡಲೆಂದು ಹೀರಾಚಂದ್ ಸೂಚಿಸಿದರು. ಅಂಬೇಡ್ಕರರು ಶಾಂತಚಿತ್ತರಾಗಿ, ಅಸ್ಖಲಿತ ವಾಣಿಯಿಂದ "ನಿಮ್ನ ವರ್ಗೀಯರ ಹಿತಾಸಕ್ತಿಗಳಿಗೆ ವಿರೋಧವಾಗಿ ಗಾಂಧಿಯವರು ಉಪವಾಸ ಪ್ರಾರಂಭಿಸಿದ್ದು ಶೋಚನೀಯವಾಗಿದೆ. ಅವರ ಅಮೂಲ್ಯ ಜೀವವನ್ನುಳಿಸಬೇಕಾದ್ದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ಪರ್ಯಾಯ ಮಾರ್ಗದ ಸೂಚನೆಯೇನಾದರೂ ಅವರಿಂದ ಬಂದಿದ್ದರೆ ಪರಿಶೀಲನೆ ಮಾಡಬಹುದಿತ್ತು. ಅವರೇನು ಹೇಳುತ್ತಾರೆಯೋ ಕೇಳಿಕೊಂಡು ಬನ್ನಿ. ಆಮೇಲೆ ಚರ್ಚೆ ಮಾಡೋಣ. ಆದರೆ ನನ್ನ ಜನರ ಕಲ್ಯಾಣವನ್ನು ನಿರ್ಲಕ್ಷಿಸಬಹುದಾದ ಸಲಹೆಯನ್ನು ಮರೆತುಬಿಡಿ" ಎಂದು ನುಡಿದರು. ಅವರ ಕೊನೆಯ ಮಾತು ನುಂಗಲಾರದ ತುತ್ತಾಗಿತ್ತು. ಸಭೆಯನ್ನು ಮಾರನೆಯ ದಿನ ಮಧ್ಯಾಹ್ನದ ತನಕ ಮುಂದೂಡಲಾಯಿತು. ಕೆಲವು ನಿಯೋಗಿಗಳು ಗಾಂಧೀಜಿಯನ್ನು ಕಂಡುಬಂದರು. ಸ್ಥಾ ಮೀಸಲಾತಿಯ ಬಗ್ಗೆ ಗಾಂಧಿಯವರ ಆಕ್ಷೇಪವಿಲ್ಲವೆಂದು ಅಂಬೇಡ್ಕರರಿಗೆ ತಿಳಿಸಲಾಯಿತು. "ಈ ನಾಟಕದ ಖಳನಾಯಕನಾಗುವ ದೌರ್ಭಾಗ್ಯ ನನ್ನದು. ಹತ್ತಿರದ ರಸ್ತೆಯ ಕಂಬಕ್ಕೆ ನನ್ನನ್ನು ನೇಣು ಹಾಕಿದರೂ ನಾನು ಕರ್ತವ್ಯ ವಿಮುಖನಾಗಲಾರೆ. ಒಂದು ವಾರದ ತನಕ ಗಾಂಧಿಯವರು ಉಪವಾಸ ನಿಲ್ಲಿಸುವುದಾದರೆ ಪ್ರಸಕ್ತ ಸಮಸ್ಯೆ ಪರಿಹಾರ ಕಂಡುಹಿಡಿಯಲು ಸಾಧ್ಯವಾಗಬಹುದು. ನಿಮ್ಮಂಥ ಪಂಡಿತರು, ನಿಮ್ಮಂಥ ಆದರ್ಶವಾದಿಗಳು, ನಿಮ್ಮಂಥ ದೇಶಭಕ್ತರು ನಿಮ್ಮವರಂತೆಯೇ ನಮ್ಮ ಜನರು ಸಹ ಮಾನವರೆಂಬುದನ್ನು ಕಂಡುಕೊಂಡಿಲ್ಲ. ಹಾಗೆ ಕಾಣುವ ತನಕ ಜಂಟಿ ಚುನಾವಣಾ ಪದ್ಧತಿಯನ್ನು ನಮ್ಮ ಮೇಲೆ ಹೇರುವ ನೈತಿಕ ಧೈರ್ಯ ನಿಮಗಿದೆಯೆ?" ಎಂದವರು ಪ್ರಶ್ನಿಸಿದರು.

ಸಮ್ಮೇಲನ ಮತ್ತೆ ಒಂದು ದಿನ ಮುಂದೆ ಹೋಯಿತು. ನಾಯಕರು ಬಿರ್ಲಾ ಭವನದಲ್ಲಿ ಸಭೆ ಸೇರಿದರು. ಮೀಸಲಾತಿ ಸ್ಥಾನಗಳಿಗೆ ಎರಡು ಹಂತ

ಗಳಲ್ಲಿ ಚುನಾವಣೆ ನಡೆಯಬೇಕೆಂದೂ, ಮೊದಲನೆಯ ಹಂತದಲ್ಲಿ ನಿಮ್ನ ವರ್ಗದ ಜನ ಒಂದೊಂದು ಸ್ಥಾನಕ್ಕೆ ತಲಾ ಮೂವರು ಅಭ್ಯರ್ಥಿಗಳನ್ನು ಆಯ ಬೇಕೆಂದೂ, ಎರಡನೆಯ ಹಂತದಲ್ಲಿ ಆ ಮೂವರ ಪೈಕಿ ಒಬ್ಬರು ಜಂಟಿ ಚುನಾವಣೆಯಲ್ಲಿ ಆಯ್ಕೆಗೊಳ್ಳಬೇಕೆಂದೂ ಸಪ್ರೂ ಅವರು ಒಂದು ಯೋಜನೆ ಸೂಚಿಸಿದರು. ಅಂಬೇಡ್ಕರರು ತಮ್ಮ ಮಿತ್ರರೊಡನೆ ಸಮಾಲೋಚನೆ ನಡೆಸಿ ಬರುವುದಾಗಿ ಎರಡು ಗಂಟೆ ಸಮಯ ಕೇಳಿದರು. ರಾತ್ರಿಯ ವೇಳೆಗೆ ಹಿಂದಿರು ಗಿದ ಅವರು ಆ ಸಲಹೆಗೆ ತಮ್ಮ ಸಮ್ಮತಿಯಿದೆಯೆಂದೂ, ಮೀಸಲಾತಿ ಸ್ಥಾನ ಗಳ ಸಂಖ್ಯೆ ಹೆಚ್ಚಬೇಕೆಂದೂ ಸೂಚಿಸಿದರು. ಸಂಧಾನದ ಫಲಿತಾಂಶವನ್ನು ಗಾಂಧೀಜಿಗೆ ಅರುಹುವ ಸಲುವಾಗಿ ಜಯಕರ್, ಸಪ್ರೂ, ಬಿರ್ಲಾ, ರಾಜ ಗೋಪಾಲಾಚಾರಿ ಮತ್ತು ರಾಜೇಂದ್ರಪ್ರಸಾದರು ರಾತ್ರಿಯೇ ಪೂನಾಕ್ಕೆ ಹೊರಟರು. ಸೆಪ್ಟೆಂಬರ್ 21ರ ಬೆಳಗ್ಗೆ 7 ಘಂಟೆಗೆ ಅವರು ಗಾಂಧೀಜಿಯನ್ನು ಭೇಟಿ ಮಾಡಿದರು. ಮಧ್ಯಾಹ್ನದ ವೇಳೆಗೆ ಗಾಂಧಿಯವರ ಮಂಚವನ್ನು ಅಂಗಳದ ಮಾವಿನ ಮರದ ಕೆಳಗಡೆ ಸಾಗಿಸಲಾಯಿತು. ಪಟೇಲ್ ಮತ್ತು ಪ್ಯಾರೆಲಾಲರು ಮಂಚದ ಬಳಿ ಕುಳಿತಿದ್ದರು. ಪೂನಾಕ್ಕೆ ಬರುವಂತೆ ಸಪ್ರೂ ಅವರು ಅಂಬೇಡ್ಕರರಿಗೆ ಫೋನು ಮಾಡಿದರು.

ಮಾರನೆಯ ಬೆಳಗ್ಗೆ ಗಾಂಧೀಜಿ ಪ್ರಸಾದ್ ಮತ್ತು ರಾಜಗೋಪಾಲಾ ಚಾರಿಯವರೊಡನೆ ಮಾತಾಡುತ್ತ ಚುನಾವಣಾ ವಿಧಾನದಲ್ಲಿ ಏಕರೂಪತೆ ಯಿರಬೇಕೆಂದು ತಿಳಿಸಿದರು. ಆ ಅಭಿಪ್ರಾಯವನ್ನು ಅಂಬೇಡ್ಕರರಿಗೆ ಮುಟ್ಟಿಸ ಲಾಯಿತು. ಪರ್ಯಾಯ ಯೋಜನೆಗಳು ಸ್ಪಷ್ಟಗೊಳ್ಳುವುದಾದರೆ ಪ್ರತ್ಯೇಕ ಚುನಾವಣಾ ಪದ್ಧತಿಯನ್ನು ಕೈಬಿಡುವುದಾಗಿ ಅವರು ಉತ್ತರಿಸಿದರು. ಸಂಜೆ ಅವರು ಜಯಕರ್, ಬಿರ್ಲಾ, ಚುನಿಲಾಲ್ ಮೆಹ್ತಾ ಮತ್ತು ರಾಜಗೋಪಾಲಾ ಚಾರಿಯವರ ಜತೆಯಲ್ಲಿ ಗಾಂಧೀಜಿಯ ಬಳಿ ಹೋದರು. ಗಾಂಧೀಜಿ ಮಂಚದ ಮೇಲೆ ಮಲಗಿದ್ದರು. ಮಂಚದ ಬಳಿ ನೀರು, ಸೋಡಾ ಮತ್ತು ಉಪ್ಪುಗಳಿದ್ದುವು. ಚಕಳ ಮೂಳೆಗಳ ಅವರ ಮೈಯ್ಯನ್ನು ನೋಡಿದಾಗಲೂ ಅಂಬೇಡ್ಕರ್ ಪ್ರಕ್ಷುಬ್ಧಗೊಳ್ಳಲಿಲ್ಲ. ಭರತ ಖಂಡದ ಕೋಟಿ ಕೋಟಿ ಜನರನ್ನು ಸೂಜಿಗಲ್ಲಿನಂತೆ ತಮ್ಮೆಡೆಗೆ ಸೆಳೆದುಕೊಂಡು, ಅವರನ್ನು ಇಂದ್ರ ಜಾಲಿಗನಂತೆ ಸಮ್ಮೋಹನಗೊಳಿಸಿದ್ದ ಮಹಾತ್ಮನೆದುರು ನಿಂತಾಗ ಅವರು ಬೆಚ್ಚಲಿಲ್ಲ, ಮುಗ್ಧರಾಗಲಿಲ್ಲ.

ಗಾಂಧೀಜಿ ನಿತ್ರಾಣಗೊಂಡಿದ್ದುದರಿಂದ ಮೇಲೇಳಲಿಲ್ಲ. ಅಂಬೇಡ್ಕರ್ ನಿಧಾನವಾಗಿ ಮೆದುಧ್ವನಿಯಲ್ಲಿ "ಮಹಾತ್ಮಾಜಿ, ನಮ್ಮ ಬಗ್ಗೆ ನಿಮಗೆ ದಯೆಯಿಲ್ಲ" ಎಂದು ನುಡಿದರು.

ಗಾಂ : ಕೆಲವರಿಗೆ ಹಾಗನಿಸಬಹುದು. ಅದು ನನ್ನ ಹಣೆ ಬರಹ.

ಅಂ: ಈಗಾಗಲೇ ನಿಮಗೆ ನನ್ನ ನಿಲವು ಸ್ಪಷ್ಟವಾಗಿರಬಹುದು. ನಾನೂ ಸ್ವಾತಂತ್ರ್ಯ ವಿರೋಧಿಯಲ್ಲ. ಹಿಂದೂ ಸಮಾಜ ಛಿದ್ರವಾಗಬೇಕೆಂದೂ ನನ್ನ ಇರಾದೆಯಲ್ಲ. ನಮ್ಮ ಬೇಡಿಕೆ ಹಾನಿಕಾರಕವಾದುವೂ ಅಲ್ಲ. ನಾನೊಂದು ಹೆಜ್ಜೆ ಮುಂದೆ ಬಂದಾಗ ನೀವೊಂದು ಹೆಜ್ಜೆ ಮುಂದೆ ಬಂದರೆ ತಾನೆ ಅಂತರ ಕಡಿಮೆಯಾಗುವುದು ?

ಗಾಂ : ನಿಮ್ಮ ಬಗ್ಗೆ ನನಗೆ ಪೂರ್ಣ ಸಹಾನುಭೂತಿಯಿದೆ. ನಿಮ್ಮ ಅನೇಕ ಸಲಹೆಗಳು ನನಗೊಪ್ಪಿಗೆಯಾಗಿವೆ. ನಾನು ಜೀವಂತವಾಗಿರಬೇಕೆಂದು ನೀವೂ ಹೇಳುತ್ತಿದ್ದೀರಿ.

ಅಂ : ನಿಜಕ್ಕೂ, ಮಹಾತ್ಮಾಜಿ, ನಮ್ಮ ಜನರ ಹಿತರಕ್ಷಣೆಗಾಗಿ ನೀವು ಬದುಕಬೇಕು, ನಿಮ್ಮ ಬದುಕನ್ನು ಸಮರ್ಪಿಸಬೇಕು. ಇದು ನನ್ನ ಆಸೆ. ನೀವು ನಮಗೂ ನಾಯಕರಾಗಬೇಕು.

ಗಾಂ : ಸರಿ ಹಾಗಾದರೆ, ನಾನು ಬದುಕಬೇಕು ತಾನೆ ? ನಾನುಳಿಯಬೇಕಾದರೆ ಏನು ಮಾಡಬೇಕೆಂಬುದೂ ನಿಮಗೆ ಗೊತ್ತಿದೆ. ನಾನು ಬದುಕುವಂತೆ ಮಾಡಿ. 'ಜಾತಿವಾರು ತೀರ್ಮಾನ'ದಲ್ಲಿ ದೊರೆತಿರುವ ಸವಲತ್ತುಗಳು ತಪ್ಪಿ ಹೋಗಬಾರದೆಂಬುದು ನಿಮ್ಮ ಇರಾದೆಯಾಗಿದೆಯಲ್ಲವೆ? ನಿಮ್ಮ ಪಂಕ್ತಿ (ಪ್ಯಾನೆಲ್) ವ್ಯವಸ್ಥೆಯನ್ನೊಪ್ಪಿಕೊಳ್ಳುತ್ತೇನೆ. ಅಲ್ಲಿಯ ಒಂದು ವಿಸಂಗತಿ ಮಾತ್ರ ಹೋಗಬೇಕು. ಎಲ್ಲ ಸ್ಥಾನಗಳಿಗೂ ಆ ವ್ಯವಸ್ಥೆ ಅನ್ವಯಿಸುವಂತಾಗಬೇಕು. ನೀವು ಜನ್ಮತಃ ಅಸ್ಪೃಶ್ಯರಾದರೆ ನಾನು ಪುತ್ರೀಕರಣದಿಂದ ಅಸ್ಪೃಶ್ಯ. ನಾವು ಅವಿಭಕ್ತವಾಗಿರಬೇಕು. ಹಿಂದೂ ಸಮಾಜದ ವಿಚ್ಛಿದ್ರತೆಯನ್ನು ತಡೆಗಟ್ಟಲು ಪ್ರಾಣಾರ್ಪಣೆಗೂ ಸಿದ್ಧನಿದ್ದೇನೆ.

ಅಂ : ನನ್ನ ಸಂಕಟ ನಿಮಗರ್ಥವಾಯಿತಲ್ಲ. ಅಷ್ಟೇ ಸಾಕು. ನಿಮ್ಮ ಸೂಚನೆ ನನಗೆ ಹಿಡಿಸಿದೆ.

ಭೇಟಿ ಮುಗಿದನಂತರ ವಿವರಗಳ ಪರಿಶೀಲನೆಗಾಗಿ ನಾಯಕರು ಮಾತುಕತೆ ಪ್ರಾರಂಭಿಸಿದರು. ಅನೇಕ ವಿಷಯಗಳ ಬಗ್ಗೆ ಸರ್ವಾನುಮತ ಸಾಧಿಸಲಾಯಿತು. ಮೀಸಲಾತಿಯ ಅವಧಿಯ ಬಗ್ಗೆ ಏಕಾಭಿಪ್ರಾಯ ಮೂಡಲಿಲ್ಲ. ಇಪ್ಪತ್ತೈದು ವರ್ಷಗಳ ನಂತರ ಅದು ರದ್ದಾಗಬೇಕೆ. ಮುಂದುವರಿಯಬೇಕೆ ಎನ್ನುವ ವಿಷಯದಲ್ಲಿ ನಿಮ್ನ ವರ್ಗದ ಜನರ ಅಭಿಪ್ರಾಯ ಪಡೆಯತಕ್ಕದ್ದೆಂದು ಅಂಬೇಡ್ಕರ್ ಪಟ್ಟು ಹಿಡಿದರು. ಅಸ್ಪೃಶ್ಯತೆ ಗೊತ್ತಾದ ಅವಧಿಯೊಳಗೆ ನಿರ್ಮೂಲನವಾಗುತ್ತದೆಂಬ ವಿಷಯದಲ್ಲಿ ಅವರಿಗೆ ನಂಬಿಕೆಯಿರಲಿಲ್ಲ. ಸವರ್ಣೀಯ ಹಿಂದುಗಳು ನಿಮ್ನ ವರ್ಗೀಯರನ್ನು ಕೇಳಿಕೊಂಡು ಮೀಸಲಾತಿ ಮುಂದುವರಿಸಬೇಕೆನ್ನುವ ವಾದವನ್ನೊಪ್ಪಲಿಲ್ಲ.

23ನೆಯ ತಾರೀಖು ಮಧ್ಯಾಹ್ನ 4 ಗಂಟೆಯತನಕ ಆ ಸಮಸ್ಯೆ ಇತ್ಯರ್ಥವಾಗಲಿಲ್ಲ. ಗಾಂಧಿಯವರ ಆರೋಗ್ಯ ಅಪಾಯದ ಅಂಚಿನಲ್ಲಿತ್ತು. ದೇವದಾಸ ಗಾಂಧಿಯವರು ಸಾಶ್ರುನಯನರಾಗಿ ತಮ್ಮ ತಂದೆಯವರ ಪರಿಸ್ಥಿತಿಯನ್ನು ಅಂಬೇಡ್ಕರರಿಗೆ ವಿವರಿಸಿದರು. ಆ ಸಮಸ್ಯೆಯನ್ನು ಗಾಂಧೀಜಿಯ ತೀರ್ಮಾನಕ್ಕೊಪ್ಪಿಸುವುದೆಂದು ನಿರ್ಧಾರವಾಯಿತು. ಅಂಬೇಡ್ಕರ್ ಕೆಲವು ನಾಯಕರೊಡನೆ ರಾತ್ರಿ 9 ಗಂಟೆ ವೇಳೆಗೆ ಗಾಂಧಿಯವರನ್ನು ಭೇಟಿ ಮಾಡಿದರು. ಐದುವರ್ಷದ ನಂತರ ನಿಮ್ನವರ್ಗೀಯರ ಅಭಿಪ್ರಾಯ ಪಡೆಯಬಹುದೆಂದು ಗಾಂಧೀಜಿ ಪಿಸುಗುಟ್ಟಿದರು. ಅವರ ಸ್ವರ ಮಂತ್ರಗಾಗಿತ್ತು. ಕೂಡಲೆ ಮಾತುಕತೆ ನಿಲ್ಲಿಸಬೇಕೆಂದು ಜೈಲಿನ ವೈದ್ಯರು ಅಪ್ಪಣೆ ಮಾಡಿದರು. ಗಾಳಿಯ ಎಲೆ ಯಿರಲಿಲ್ಲ. ಉಸಿರು ಕಟ್ಟುವ ಮೌನ ಎಲ್ಲೆಡೆ ಪಸರಿಸಿತ್ತು. ಭೇಟಿಕಾರರು ಹಿಂದಿರುಗಿದರು. ಗಂಟೆಗಟ್ಟಲೆ ವಾದವಿವಾದಗಳು ಜರುಗಿದರೂ, ಒಮ್ಮತಾಭಿಪ್ರಾಯ ಸಂಘಟಿಸಲಿಲ್ಲ. ಮತ್ತೊಂದು ದಿನ ಕಳೆಯಿತು. ಪುನಃ ಗಾಂಧೀಜಿಯನ್ನು ಸಂಧಿಸಿದರು. ಕೇವಲ ಕಾನೂನು ರಚನೆಯಿಂದ ರೋಗ ವಾಸಿಯಾಗದೆಂದೂ. ಐದು ವರ್ಷಗಳ ಕೊನೆಯಲ್ಲಿ ಪ್ರಜಾಭಿಪ್ರಾಯ ಸಂಗ್ರಹ ನಡೆಯಬೇಕೆಂದೂ ಅವರು ದುರ್ಬಲ ಧ್ವನಿಯಲ್ಲಿ ನುಡಿದರು. ಹಾಗೂ ಹೀಗೂ ಎಳೆದಾಡಿದನಂತರ ಸಂಧಾನ ಸಫಲವಾಯಿತು. ಆ ಕೂಡಲೇ ಒಪ್ಪಂದದ ಕರಡು ಸಿದ್ಧವಾಯಿತು. 24ನೆಯ ಶನಿವಾರ 5 ಗಂಟೆಗೆ ಅದಕ್ಕೆ ಅಂಬೇಡ್ಕರ್

ಮತ್ತು ಮಾಳವೀಯರ ಸಹಿ ಬಿದ್ದುವು. ಜಯಕರ್, ಪ್ರಸಾದ್, ಶ್ರೀನಿವಾಸನ್ ಮೊದಲಾದ ನಾಯಕರೂ ತಮ್ಮ ರುಜು ಲಗತ್ತಿಸಿದರು. ಆನಂದದ ಸಡಗರದಲ್ಲಿ ರಾಜಗೋಪಾಲಾಚಾರಿಯವರು ತಮ್ಮ ಪೆನ್ನನ್ನು ಅಂಬೇಡ್ಕರ್‌ರ ಪೆನ್ನಿನೊಡನೆ ವಿನಿಮಯ ಮಾಡಿಕೊಂಡರು.

ಔಪಚಾರಿಕ ಕ್ರಮಗಳು ಮುಗಿದಕೂಡಲೇ ವೈಸ್‌ರಾಯರಿಗೂ ಬ್ರಿಟಿಷ್ ಪ್ರಧಾನಿಗೂ ತಂತಿಗಳನ್ನು ರವಾನಿಸಲಾಯಿತು. ಒಪ್ಪಂದವನ್ನು ದೃಢೀಕರಿಸುವ ಸಲುವಾಗಿ ಮಾರನೆಯ ದಿನ ಮುಂಬಯಿಯಲ್ಲಿ ನಾಯಕರ ಸಭೆ ಸೇರಿತು. ಅಸ್ಪೃಶ್ಯತೆಯ ಮೂಲೋತ್ಪಾಟನಕ್ಕಾಗಿ ಸವರ್ಣೀಯರು ಶ್ರಮಿಸಬೇಕೆಂದು ಮಾಳವೀಯರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಕರೆಕೊಟ್ಟರು. ಸಪ್ರೂ ಅವರು ಅಂಬೇಡ್ಕರರ ಶ್ರದ್ಧಾನಿಷ್ಠೆಗಳನ್ನೂ ಅವರ ಧೈರ್ಯಸಾಹಸಗಳನ್ನೂ ವರ್ಣಿಸಿ, ಅಭಿನಂದಿಸಿದರು. ಅಂಬೇಡ್ಕರರು ಒಪ್ಪಂದ ಸ್ಥಿರೀಕರಣ ನಿರ್ಣಯವನ್ನು ಬೆಂಬಲಿಸುತ್ತ, "ಇಂಥ ಘಟನೆ ನಡೆಯುತ್ತದೆಂದು ಹಿಂದೆಂದೂ ನಾನು ಕನಸು ಕಂಡಿರಲಿಲ್ಲ. ನಾನಂತು ತುಂಬ ಇಕ್ಕಟ್ಟಿನ ಕತ್ತರಿಯಲ್ಲಿ ಸಿಕ್ಕಿಕೊಂಡಿದ್ದೆ. ಒಂದು ಕಡೆ ಭಾರತದ ಮಹಾಪುರುಷನೊಬ್ಬನ ಜೀವವುಳಿಸಬೇಕಾಗಿದೆ. ಮತ್ತೊಂದು ಕಡೆ ದಲಿತ ಜನರ ಹಿತರಕ್ಷಣೆಯಾಗಬೇಕಾಗಿದೆ. ನಾನು ಮಾನವ ಕುಲದ ಕರೆಗೆ ಓಗೊಟ್ಟು, ಗಾಂಧಿಯವರ ಪ್ರಾಣವನ್ನುಳಿಸಿದೆ. ಚಕ್ರಗೋಷ್ಠಿಯ ಸಮಯದಲ್ಲಿ ಇದೇರೀತಿ ಏಕಾಭಿಪ್ರಾಯ ರೂಪಿಸಿದ್ದರೆ ಇಷ್ಟೆಲ್ಲ ಕ್ಲೇಶ ಹಾಗೂ ಅಗ್ನಿಪರೀಕ್ಷೆಗಳು ತಪ್ಪುತ್ತಿದ್ದುವು. ಸವರ್ಣೀಯರು ಈ ಒಪ್ಪಂದ ಪವಿತ್ರವಾದದ್ದೆಂದು ಸ್ವೀಕರಿಸಿ, ಅಕ್ಷರಶಃ ಪಾಲಿಸುವರೆಂದು ನಂಬಿದ್ದೇನೆ" ಎಂದು ಅತ್ಯಂತ ಸಂಯಮದಿಂದ ಮಾತಾಡಿದರು. ಪೂನಾ ಒಪ್ಪಂದವನ್ನಂಗೀಕರಿಸುವಂತೆ ಪಾರ್ಲಿಮೆಂಟಿಗೆ ಶಿಫಾರಸು ಮಾಡುವುದಾಗಿ ಬ್ರಿಟಿಷ್ ಸರ್ಕಾರ ಭಾರತೀಯ ನಾಯಕರಿಗೆ ಆಶ್ವಾಸನೆ ನೀಡಿತ್ತು.

ಗಾಂಧೀಜಿಯ ಉಪವಾಸಾವಧಿಯಲ್ಲಿ ಕೆಲವು ದೇವಾಲಯಗಳು ಹರಿಜನರಿಗೆ ಪ್ರವೇಶಾವಕಾಶ ಘೋಷಿಸಿದ್ದುಂಟು. ಆದರೆ ನಾಸಿಕ್ ಮತ್ತು ಗುರುವಾಯೂರ್ ಸತ್ಯಾಗ್ರಹಗಳಂತು ಯಶಸ್ವಿಯಾಗಲಿಲ್ಲ. ಹಿಟ್ಟು ಬಟ್ಟೆಗಳಿಗೆ ಮತ್ತು ರಾಜಕೀಯಾಧಿಕಾರಕ್ಕೆ ಆದ್ಯತೆ ನೀಡಬೇಕಾಗಿದೆಯೆಂದೂ, ದೇವಾಲಯ ಪ್ರವೇಶ ವಿಷಯದ ಬಗ್ಗೆ ತಲೆಕೆಡಿಸಿಕೊಂಡು ಶಕ್ತಿ ವ್ಯಯ ಮಾಡಿಕೊಳ್ಳಬಾರದೆಂದೂ ಅಂಬೇಡ್ಕರ್ ತಮ್ಮ ಜನರಿಗೆ ವಿವೇಕ ಹೇಳಿದರು.

ಅವರು ಮುಂಬಯಿಯ ಒಂದು ಸಭೆಯಲ್ಲಿ ಮಾತಾಡುತ್ತ "ಈ ಲೋಕದಲ್ಲಿ ಸುಲಭವಾಗಿ ಸಿಗಬಹುದಾದ ಸುಖವನ್ನರಸದೆ ಆ ಲೋಕದ ಕಾಣದ ಸುಖಕ್ಕಾಗಿ ಹಾತೊರೆದದ್ದರಿಂದಲೇ ಬಾಳು ಬವಣೆಯ ಬೀಡಾಯಿತು. ಭೌತಿಕ ಸಂಪತ್ತನ್ನು ಬೆಳೆಸುವ ವಿದ್ಯೆಯನ್ನುಪೇಕ್ಷಿಸಿದ್ದರಿಂದ ದೇಶ [ಹಿಂದುಳಿಯುವಂತಾಯಿತು. ನಿಮ್ಮ ಕೊರಲಿನ ತುಲಸಿ ಹಾರ ಸಾಲಗಾರರ ಹಿಡಿತದಿಂದ ನಿಮ್ಮನ್ನು ಬಚಾವು ಮಾಡಲಾರದು. ನಿಮ್ಮ ರಾಮನಾಮ ಸಂಕೀರ್ತನೆಯಿಂದ ಭೂಮಾಲೀಕರಿಗೆ ತೆರುವ ತೆರಿಗೆ ಕಡಿಮೆಯಾಗಲಾರದು. ಫಂಡರಾಪುರದ ಯಾತ್ರೆಯಿಂದಾಗಿ ನಿಮಗೆ ತಿಂಗಳ ಕೊನೆಯಲ್ಲಿ ಸಂಬಳ ದೊರಕದು. ಬುದ್ಧಿವಂತ ಜನ ಬಡವರ ಮೌಢ್ಯವನ್ನು ಬಂಡವಾಳ ಮಾಡಿಕೊಂಡು ಅಮಾನವೀಯ ವ್ಯವಹಾರದಲ್ಲಿ ತೊಡಗುತ್ತಾರೆ. ಆದ್ದರಿಂದ ಮೂಢನಂಬಿಕೆಗಳು ನಿಮ್ಮಿಂದ ದೂರವಿರಲಿ" ಎಂಬುದಾಗಿ ಅಂತ್ಯಜರು ಮಾತ್ರವಲ್ಲ, ನಾಡಿನ ಎಲ್ಲ ಬಡವರು ಬದುಕುವ ದಾರಿಯನ್ನು ತೋರಿಸಿ ಕೊಟ್ಟರು. "ನಿಮ್ಮ ದುಃಖಗಳಿಗೆ ಪ್ರಾರಬ್ಧವೇ ಕಾರಣವೆಂಬ ಮೂಢನಂಬಿಕೆಯನ್ನು ಎಷ್ಟು ಬೇಗ ಮನಸ್ಸಿನಿಂದಾಚೆ ದೂಡುವಿರೋ ಅಷ್ಟು ಬೇಗ ನಿಮಗೆ ಶುಭವಾಗುತ್ತದೆ. ಹಣೆಬರಹದ ನೆಪವೊಡ್ಡಿ ಬಡತನ ಅನಿವಾರ್ಯವೆಂದು ನಂಬುವುದು ತಪ್ಪು. ದಾಸ್ಯವೂ ಅಷ್ಟೆ. ನನಗೆ ಸತ್ಕಾರ ಸಮಾರಂಭಗಳು ಹಿಡಿಸುವುದಿಲ್ಲ. ಪ್ರಜಾಸತ್ತೆಯಲ್ಲಿ ಹೀರೋಪೂಜೆಗವಕಾಶವಿರಬಾರದು. ನನಗೆ ಈ ಜನ್ಮದಲ್ಲಿ ವಿಶ್ರಾಂತಿಯಿಲ್ಲ. ಅದು ನನಗೆ ಬೇಕಿಲ್ಲ. ಕೊನೆಯುಸಿರಿರುವತನಕ ಚುರುಕಾಗಿರಬೇಕು, ಉದ್ಯೋಗಶೀಲನಾಗಿರಬೇಕೆಂಬುದೇ ನನ್ನ ಬಯಕೆ" ಎಂಬುದಾಗಿ ಅವರು ಮತ್ತೊಂದು ಬೀಳ್ಕೊಡಿಗೆ ಭಾಷಣದಲ್ಲಿ ಸ್ಪಷ್ಟಪಡಿಸಿದರು.

1932ರ ನವೆಂಬರ್ 7ರಂದು ಅಂಬೇಡ್ಕರರು ಚಕ್ರಗೋಷ್ಠಿಯ ತೃತೀಯಾಧಿವೇಶನಕ್ಕಾಗಿ ಇಂಗ್ಲೆಂಡಿಗೆ ತೆರಳಿದರು. ಹಡಗಿನ ಪ್ರಯಾಣಿಕರೊಳಗೆ ಪೂನಾ ಒಪ್ಪಂದದ ಹಾಗೂ ಗಾಂಧೀಜಿಯ ಉಪವಾಸದ ಮಾತೇ ಮಾತು. "ಭಾರತೀಯ ಇತಿಹಾಸದಲ್ಲಿ ಹೊಸ ಪುಟಗಳನ್ನು ಬರೆಯುತ್ತಿರುವಾತನೇ ಈ ಯುವಕ ಎಂಬುದಾಗಿ" ಯುರೋಪೀಯ ಪ್ರಯಾಣಿಕರಲ್ಲೊಬ್ಬ ಅಂಬೇಡ್ಕರರ ಕಡೆಗೆ ಕೈತೋರಿಸಿ ತನ್ನ ಗೆಳೆಯನ ಗಮನ ಸೆಳೆದನು. ಪ್ರಯಾಣ ಕಾಲದಲ್ಲಿ ಇತರ ಪ್ರತಿನಿಧಿಗಳೊಂದಿಗೆ ರಾಜಕೀಯ ವಿಷಯಗಳಮೇಲೆ ಚರ್ಚೆ ನಡಸುತ್ತಿದ್ದಾಗ ಅಂಬೇಡ್ಕರರನ್ನು ದಿಗ್ಭ್ರಮೆಗೊಳಿಸುವ ಸಂಗತಿಯೊಂದು

ತಿಳಿಯಿತು. ನಿಮ್ನ ವರ್ಗೀಯರ ಸಮಸ್ಯೆ ಪ್ರಾಂತ ಸರ್ಕಾರಗಳಿಗೆ ಮಾತ್ರ ಸಂಬಂಧಿಸಿದ್ದೆಂಬ ನೆಪವೊಡ್ಡಿ. ಪ್ರಾಂತೀಯ ಶಾಸನ ಸಭೆಗಳಲ್ಲಿ ಅವರಿಗೆ ಸಾಕಷ್ಟು ಸ್ಥಾನಗಳನ್ನು ಕಾದಿರಿಸಿ. ಕೇಂದ್ರ ಶಾಸನಸಭೆಯಲ್ಲಿ ಮುಸ್ಲಿಮರನ್ನೂ ಯೂರೋಪೀಯರನ್ನೂ ತುಂಬುವ ಯೋಜನೆಯನ್ನು ಬ್ರಿಟಿಷ್ ಅಧಿಕಾರಿಗಳೂ ರಾಜಕಾರಣಿಗಳೂ ಸಿದ್ಧಪಡಿಸಿದ್ದರೆಂಬ ಕುತಂತ್ರ ಹೊರಬಿದ್ದಾಗ ಅವರು ಒಳಗೊಳಗೆ ಕುದಿದರು. ಪೂನಾ ಒಪ್ಪಂದ ರೂಪುಗೊಂಡು ಆಂಗ್ಲರ ದುಷ್ಟ ಯೋಜನೆ ಮುರಿದುಬಿದ್ದದ್ದರಿಂದ ಅವರು ಆನಂದಸಾಗರದಲ್ಲಿ ತೇಲಾಡಿದರು.

ಮುಂಬಯಿಯಲ್ಲಿ ಹಡಗು ಹತ್ತಿದಾಗಲೇ ಅಂಬೇಡ್ಕರರ ಕಾಲಿನಲ್ಲಿ ನೋವು ಕಾಣಿಸಿಕೊಂಡಿತು. ಆದ್ದರಿಂದ ಹಡಗಿನ ಅಟ್ಟದಲ್ಲಿ ಅವರ ತಿರುಗಾಟ ಸಾಧ್ಯವಾಗಲಿಲ್ಲ. ನೆಪೋಲಿಯನ್ ಅವರ ಮೆಚ್ಚುಗೆಯ ವ್ಯಕ್ತಿ. ಸ್ಲೋನ್ ರಚಿಸಿದ ಅವನ ಜೀವನಚರಿತ್ರೆಯ ಅಧ್ಯಯನದಲ್ಲಿ ಮಗ್ನರಾದರು. ಹರಿಜನ ಚಳುವಳಿಯ ಸಂಬಂಧವಾಗಿ ಯರವಾಡ ಜೈಲಿನಿಂದ ಗಾಂಧೀಜಿ ಪ್ರಕಾಶ ಪಡಿಸಿದ್ದ ಹೇಳಿಕೆಗಳನ್ನು ಕುರಿತು ಆಲೋಚಿಸುತ್ತಿದ್ದರು. ಅವರ ಧೋರಣೆಯಲ್ಲಿ ಪರಿವರ್ತನೆಯನ್ನು ಗುರುತಿಸಿದರು. ಕಾಲಕ್ರಮೇಣ ತಮ್ಮ ದೃಷ್ಟಿ ಯನ್ನವರು ಸಂಪೂರ್ಣವಾಗಿ ಒಪ್ಪಿಕೊಳ್ಳಬಹುದೆಂದು ಊಹಿಸಿಕೊಂಡರು. ಅಷ್ಟರಲ್ಲಿ ಅಂಬೇಡ್ಕರರ ಭಾವನೆಗಳು ಸಹ ಪರಿಪಕ್ವವಾಗಿದ್ದುವು : ಭಾವೋದ್ರೇಕ ಕ್ಷಯಿಸಿ. ಅವರ ನಡೆನುಡಿಗಳಲ್ಲಿ ನಯ ಮಾಧುರ್ಯ ಗಾಂಭೀರ್ಯಗಳು ಮೂಗದೋರುತ್ತಿದ್ದುವು. "ಸ್ಪೃಶ್ಯಾಸ್ಪೃಶ್ಯರನ್ನು ಕಾನೂನಿನ ಮೂಲಕ ಒಂದುಗೂಡಿಸುವ ಪ್ರಯತ್ನ ಸಾಹಸದ ಮಾತಾಯಿತು. ಅವರ ಒಂದುಗೂಡಿಕೆಗೆ ಪ್ರೀತಿಯೊಂದೇ ಸಾಧನವಾಗಬೇಕು. ಸವರ್ಣ ಹಿಂದುಗಳಲ್ಲಿ ಮಾನಸಿಕ ಕ್ರಾಂತಿಯಾದಾಗ, ಅವರ ಆಲೋಚನೆ ಮತ್ತು ವರ್ತನೆಗಳಲ್ಲಿ ಪೂರ್ಣ ಪರಿವರ್ತನೆ ಸಾಧ್ಯವಾದಾಗ ಮಾತ್ರ ದಲಿತ ಜನರಿಗೆ ಮೋಕ್ಷ ದೊರಕುತ್ತದೆ" ಎಂಬುದಾಗಿ ಅವರು ಅಸ್ಪೃಶ್ಯತಾ ನಿವಾರಣಾ ಸಮಿತಿಯ ಕಾರ್ಯದರ್ಶಿಗಳಾದ ಥಕ್ಕರ್ ಅವರಿಗೆ ಬರೆದ ಪತ್ರದಲ್ಲಿ ತಿಳಿಸಿದರು. ಅವರು ಮುಂದುವರಿದು "ಈಗ ಪ್ರತಿಯೊಂದು ಹಳ್ಳಿಗೂ ಸ್ವಯಂ ಸೇವಕರು ಬೇಕು. ಪೌರ ಹಕ್ಕುಗಳನ್ನು ಪಡೆಯುವಲ್ಲಿ ಅವರು ನಿಮ್ನ ವರ್ಗದ ಜನರಿಗೆ ಸಹಾಯಮಾಡಬೇಕು : ಕಾನೂನು ಕ್ರಮಗಳಲ್ಲಿ ಅವರಿಗೆ ನೆರವು ನೀಡಬೇಕು. ಇಂಥ ವ್ಯವಸ್ಥೆ ಹಿಂಸಾಪ್ರಕರಣಗಳಿಗೂ ವಿರಸಕ್ಕೂ ಕಾರಣವಾಗುತ್ತದೆಂಬುದು ನಿಜ. ಅದು ಅನಿವಾರ್ಯ. ಸಮಾಜದಲ್ಲಿ ಹಲವಾರು ವರ್ಷಗಳಿಂದ ಅಸ್ಥಿಗತವಾಗಿರುವ

ಅಸ್ಪೃಶ್ಯತೆಯನ್ನು ತೊಡೆಯುವಲ್ಲಿ ಪ್ರತಿಭಟನೆ ಇದ್ದೇ ಇರುತ್ತದೆ. ಅವರ ಜತೆಗೆ ಸಮಾಜದಲ್ಲಿ ಪ್ರಕ್ಷುಬ್ಧ ಸ್ಥಿತಿಯೂ ತಲೆದೋರುತ್ತದೆ. ಸವರ್ಣಬಂಧುಗಳ ಸಂಪ್ರದಾಯ ಭಂಗಕ್ಕಾಗಿ ನೇರ ಕಾರ್ಯಕ್ರಮ ಕೈಗೊಳ್ಳಬೇಕಾಗುತ್ತದೆ. ಪರಿಸ್ಥಿತಿ ವಿಷಮವಾದಾಗ ಮಾತ್ರ ಸವರ್ಣೀಯನಿಗೆ ವಾಸ್ತವಸ್ಥಿತಿ ಮನವರಿಕೆಯಾಗುತ್ತದೆ : ಅವನು ಬದಲಾವಣೆಗೆ ಸಿದ್ಧನಾಗುತ್ತಾನೆ." ಎಂದು ತಿಳಿಸಿ. ಆ ದಿಶೆಯಲ್ಲಿ ಕ್ರಿಯಾಶೀಲರಾಗುವಂತೆ ಎಚ್ಚರಿಸಿದರು. "ನನಗೆ ಗೆಳೆಯರು ಕಡಮೆ. ಗೆಳೆತನ ಗಳಿಸುವ ಜಾಣ್ಮೆ ನನ್ನಲ್ಲಿಲ್ಲ. ಗ್ರಂಥಗಳ ಗೆಳೆತನ ನನಗೆ ಅಚ್ಚುಮೆಚ್ಚು. ಅವುಗಳ ಸಂಗದಲ್ಲಿ ನಾನು ನಿಸ್ಸಂಗಿ : ಚಿಂತನೆಯಲ್ಲಿ ಕಾಲ ನನಗರಿವಿಲ್ಲದಂತೆ ಕಳೆದುಹೋಗುತ್ತದೆ. ಆಗ ನನಗೆ ಜಗತ್ತಿನ ಪರಿವೆಯೂ ಇರುವುದಿಲ್ಲ" ಎಂದವರು ಬರೆದ ಮತ್ತೊಂದು ಪತ್ರದಲ್ಲಿ ಅವರ ಮನೋಧರ್ಮ ಪ್ರತಿಫಲಿತವಾಗುತ್ತದೆ.

# ೫. ಅಗ್ನಿದಿವ್ಯ

ಚಕ್ರಗೋಷ್ಠಿಯ ತೃತೀಯಾಧಿವೇಶನದ ಕಾರ್ಯಕಲಾಪಗಳು ಅಂಬೇಡ್ಕರ ರಿಗೆ ತೃಪ್ತಿಕರವಾಗಿ ಕಾಣಲಿಲ್ಲ. ಪ್ರತಿನಿಧಿಗಳಲ್ಲಾಗಲೀ, ಆಂಗ್ಲರಲ್ಲಾಗಲೀ ಉತ್ಸುಕತೆ ಕಂಡುಬರಲಿಲ್ಲ. ಜವಾಬ್ದಾರಿ ಸರ್ಕಾರದ ರಚನೆಯ ಬಗೆಗೆ ಮುಸ್ಲಿಂ ಪ್ರತಿನಿಧಿಗಳು ತಣ್ಣಗಿದ್ದರೆಂದೇ ಹೇಳಬಹುದು ; ರಾಜರೂ ಅಷ್ಟೇ. ಅಂಬೇಡ್ಕರರು 1933ನೆಯ ಇಸವಿ ಜನವರಿ ತಿಂಗಳಲ್ಲಿ ಭಾರತಕ್ಕೆ ಹಿಂದಿರುಗಿದರು.

ಮುಂಬಯಿಯ ಶಾಸನ ಸಭೆಯಲ್ಲಿ ಜರುಗುತ್ತಿದ್ದ ಗ್ರಾಮಪಂಚಾಯಿತಿ ತಿದ್ದುಪಡಿ ಮಸೂದೆಗೆ ಸಂಬಂಧಿಸಿದ ಚರ್ಚೆಯಲ್ಲಿ ಅಂಬೇಡ್ಕರರು ವಿಶೇಷಾಸಕ್ತಿ ವಹಿಸಿ, ಎಂದಿನಂತೆ ಪ್ರತಿಗಾಮಿ ಶಕ್ತಿಗಳನ್ನು ಖಂಡತುಂಡವಾಗಿ ಖಂಡಿಸಿ, ತಮ್ಮ ಅಭಿಪ್ರಾಯಗಳನ್ನು ಸ್ಪಷ್ಟಪಡಿಸಿದರು. ಗ್ರಾಮಪಂಚಾಯಿತಿಗಳಲ್ಲಿ ಮುಸ್ಲಿಮರಿಗೂ ನಿಮ್ನವರ್ಗೀಯರಿಗೂ ಪ್ರಾತಿನಿಧ್ಯ ದೊರಕಿಸಿಕೊಡುವುದೇ ಆ ಮಸೂದೆಯ ಉದ್ದೇಶವಾಗಿತ್ತು. 'ಇಂಡಿಯಾ ಯುರೋಪಲ್ಲ. ಇಂಗ್ಲೆಂಡ್ ಇಂಡಿಯಾ ಅಲ್ಲ. ಜಾತಿವ್ಯವಸ್ಥೆ ಏನೆಂಬುದು ಇಂಗ್ಲೆಂಡಿಗೆ ತಿಳಿದಿಲ್ಲ ಅದು ನಮಗೆ ತಿಳಿದಿದೆ.. ಆದರ ಪರಿಣಾಮವಾಗಿ ಇಂಗ್ಲೆಂಡಿಗೊಗ್ಗ ಬಹುದಾದ ರಾಜಕೀಯ ವ್ಯವಸ್ಥೆ ನಮಗೆ ಸರಿಬೀಳುವುದಿಲ್ಲ. ನಾನು ಮಾತ್ರವಲ್ಲ. ನನ್ನವರು ಸಹ ಈ ಸದನದ ಕಾರ್ಯ ಕಲಾಪಗಳಲ್ಲಿ ಪಾಲ್ಗೊಳ್ಳುವ ಅವಕಾಶ ಪಡೆಯುವಂತಾಗಬೇಕು. ಈ ದೃಷ್ಟಿಯಿಂದ ಜಾತಿವಾರು ಪ್ರಾತಿನಿಧ್ಯ ಕೆಟ್ಟದ್ದಲ್ಲ. ಜಾತೀಯತೆಯ ಸಾಂಕ್ರಾಮಿಕ ರೋಗ ಎಲ್ಲ ಕಡೆಯೂ

ಹಬ್ಬಿಕೊಂಡು ನ್ಯಾಯಲಾಭಕ್ಕೆ ತೊಡಕಾಗಿರುವುದರಿಂದ ನ್ಯಾಯಪೀಠಗಳಲ್ಲಿಯೂ ಜಾತಿವಾರು ಪ್ರಾತಿನಿಧ್ಯವಿರಬೇಕಾಗುತ್ತದೆ" ಎಂದು ನುಡಿದು ವಿರೋಧಿಗಳ ತರ್ಕವನ್ನು ಗಾಳಿಗೆ ತೂರಿದರು. ದೇವಾಲಯ ಪ್ರವೇಶ ಮಸೂದೆಯ ಬಗ್ಗೆ ಪತ್ರಿಕೆಗಳಿಗೆ ಅವರಿತ್ತ ಹೇಳಿಕೆಯ ಸಾರಾಂಶವಿದು : ನಿಮ್ಮ ವರ್ಗದ ಜನ ಈ ಮಸೂದೆಗೆ ಬೆಂಬಲ ನೀಡಲಾರರು. ಏಕೆಂದರೆ ಅಸ್ಪೃಶ್ಯತೆ ಪಾಪವೆಂದು ಪರಿಗಣನೆಗೊಂಡಿಲ್ಲ. ಯಾವುದು ಪಾಪ. ಯಾವುದು ಅನೀತಿ ಯೆಂಬುದನ್ನು ಬಹುಮತಾಭಿಪ್ರಾಯ ನಿರ್ಧರಿಸಲಾರದು. ಅಸ್ಪೃಶ್ಯತೆ ಪಾಪ ವೆನ್ನುವುದಾದರೆ, ಬಹುಸಂಖ್ಯಾತರು ಒಪ್ಪಲಿ, ಬಿಡಲಿ, ಅದನ್ನು ಕಿತ್ತೊಗೆಯ ಬೇಕು. ಯೂರೋಪೀಯರ ಕ್ಲಬ್ಬುಗಳಲ್ಲಿ ನಾಯಿಗಳಿಗೂ ಭಾರತೀಯರಿಗೂ ಪ್ರವೇಶಾವಕಾಶವಿರಲಿಲ್ಲ. ತಮಗೆ ಪ್ರವೇಶಾವಕಾಶ ಬೇಕೆಂದು ಭಾರತೀಯರು ಬೇಡಲಿಲ್ಲ. ಹಿಂದೂಗಳಿಗೆ ಮತ್ತು ನಾಯಿಗಳಿಗೆ ಮಾತ್ರ ಪ್ರವೇಶಾವಕಾಶ ವಿರುವ ದೇವಸ್ಥಾನಗಳಿಗೆ ಪ್ರವೇಶಾನುಮತಿ ಬೇಕೆಂದು ಅಸ್ಪೃಶ್ಯರು ಯಾಚಿಸು ವುದಿಲ್ಲ. ಅನುಮತಿ ಕೊಡಬೇಕೇ, ಬೇಡವೇ ಎಂಬುದನ್ನು ಹಿಂದುಗಳು ನಿರ್ಧರಿಸಬೇಕು. ಮಾನವೀಯತೆಯ ಪಾವಿತ್ರ್ಯವನ್ನು ಗೌರವಿಸುವುದು ಸಭ್ಯ ತನದ ಸಜ್ಜನಿಕೆಯೆಂದು ಭಾವಿಸುವುದಾದರೆ ಅವರು ನಿಮ್ಮ ಜನರನ್ನು ದೇವಾಲಯದೊಳಗೆ ಬಿಡಲಿ ; ಅದಿಲ್ಲ. ಬಾಗಿಲು ಮುಚ್ಚಿಕೊಂಡು ಹಾಳಾ ಗಲಿ." ಅಂಬೇಡ್ಕರರಲ್ಲುಂಟಾದ ಈ ಪರಿವರ್ತನೆ ಅವರ ವಿಚಾರಧೋರಣೆಗೆ ತಕ್ಕಂತಿದೆ. ತಾರ್ಕಿಕತೆಯ ದೃಷ್ಟಿಯಿಂದಾಗಲೀ, ನೈತಿಕತೆಯ ನೆಲೆಯಿಂದಾಗಲೀ ಯಾರೂ ಅವರ ವಾದದಲ್ಲಿ ಹುಳುಕೆತ್ತಿ ತೋರಿಸುವಂತಿರಲಿಲ್ಲ.

ಅದೇ ಹೇಳಿಕೆಯಲ್ಲಿ ಅವರು ಚಾತುರ್ವರ್ಣ್ಯದ ಬಗ್ಗೆ ಮಂಡಿಸಿದ ಅಭಿಪ್ರಾಯಗಳು ದೇಶಕಾಲಾತೀತವಾದ ಸತ್ಯಗಳಾಗಿ ನಿಲ್ಲುತ್ತವೆ. ಅಸಮಾನ ತೆಯ ದುಷ್ಪರಿಣಾಮಗಳಿಗೆ ಬಲಿಯಾದ ಜನ ಸದಾ ವಿದೇಶೀಯರಾಗಿಯೇ ಉಳಿಯುತ್ತಾರೆ. ಹಿಂದೂ ಧರ್ಮ ಸಾಮಾಜಿಕ ಸಮಾನತೆಯ ಧರ್ಮವೆಂಬ ಬಿರುದಿಗೆ ಪಾತ್ರವಾಗಬೇಕಾದರೆ ದೇವಾಲಯ ಪ್ರವೇಶಾನುಮತಿಯೊಂದೆ ಸಾಲದು : ಅದಕ್ಕಿಂತ ಮಿಗಿಲಾಗಿ ಚಾತುರ್ವರ್ಣ್ಯ ಕಲ್ಪನೆಯ ಕಲ್ಮಷದಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದಬೇಕು ಎಲ್ಲ ಅಸಮಾನತೆಗಳಿಗೆ ಅದೇ ತಾಯಿಬೇರು. ಜಾತೀಯತೆ ಮತ್ತು ಅಸ್ಪೃಶ್ಯತೆಗಳಿಗೆ ಅದೇ ಮೂಲಶಕ್ತಿ. ಆ ವ್ಯವಸ್ಥೆಯನ್ನು ನಾಶಪಡಿಸದಿದ್ದರೆ ನಿಮ್ಮ ಜನರಿಗೆ ದೇವಾಲಯ ಪ್ರವೇಶ ಸೌಲಭ್ಯವೂ ಬೇಡ. ಹಿಂದೂ ಧರ್ಮವೂ ಬೇಡ. ಚಾತುರ್ವರ್ಣ್ಯ ನಿರಾಕರಣೆ

ಯಿಂದ ಗಾಂಧೀಜಿಯವರಿಗೆ ಅಸಮಾಧಾನವಾಗುತ್ತದೆನ್ನುವುದನ್ನು ಬಲ್ಲೆ. ಚಾತುರ್ವರ್ಣ್ಯದ ಪರವಾದ ಪಕ್ಷದಲ್ಲಿ ಅವರಿರುವುದಾದರೆ, ನಾನು ಅವರ ಜತೆಯಲ್ಲಿರಲಾರೆ."

ಲೋಕಹಿತವನ್ನು ಮರೆತಿದ್ದರೆ ಅಂಬೇಡ್ಕರರು ಭೋಗ ಜೀವನವನ್ನು ನಡೆಸಬಹುದಿತ್ತು. ವಕೀಲಿ ವೃತ್ತಿಯಿಂದ, ಶಾಸನ ಸಭೆಯ ಕಾರ್ಯಕಲಾಪಗಳಿಂದ, ನಾನಾ ಸಮಿತಿಗಳ ಸಭೆಗಳಿಂದ ಬಿಡುವು ಸಿಕ್ಕುವುದೆ ತಡ, ಅವರು ನಿಮ್ನವರ್ಗದ ಜನರ ಸಭೆ ಕರೆದು, ಅಥವಾ ಬೇರೆಯವರು ವ್ಯವಸ್ಥೆ ಮಾಡಿದ ಸಭೆಗಳಿಗೆ ಹೋಗಿ ಅವರಿಗೆ ಲೋಕಸ್ಥಿತಿಯನ್ನೂ, ನ್ಯಾಯ ಸ್ವರೂಪವನ್ನೂ ವಿವರಿಸಿ, ಅವರಲ್ಲಿ ಕರ್ತವ್ಯಪ್ರಜ್ಞೆಯನ್ನೂ ಸ್ವಾಭಿಮಾನವನ್ನೂ ಕೆರಳಿಸುತ್ತಿದ್ದರು. ನೂತನ ಜೀವನ ತತ್ತ್ವವನ್ನು ಬೋಧಿಸುತ್ತಿದ್ದರು "ಮೇಲಣವರಿಗೆ ಸಕಲ ಸವಲತ್ತು ಭೋಗಗಳು, ಕೆಳಗಣವರಿಗೆ ಸರ್ವದುಃಖ, ದಾರಿದ್ರ್ಯಗಳು ಎನ್ನುವ ನೀತಿ ಕೂಡಲೇ ತೊಲಗಬೇಕು. ಕರ್ಮ ಸಿದ್ಧಾಂತ ವಿಧಿಸಂಕಲ್ಪ ಎಲ್ಲವೂ ನಿಮ್ಮನ್ನು ಹಿಡಿತದಲ್ಲಿಟ್ಟುಕೊಳ್ಳುವುದಕ್ಕಾಗಿ, ನಿಮ್ಮ ಪುರುಷತ್ವವನ್ನು ಶೋಷಿಸುವುದಕ್ಕಾಗಿ ಉತ್ತಮ ಕುಲದ ಧೀಮಂತರು ಸೃಷ್ಟಿಸಿರುವ ಕಗ್ಗದಂತೆ. ಇತರರು ಕಸಿದುಕೊಂಡಿದ್ದರಿಂದ ನಿಮಗೆ ಭೂಮಿ ದಕ್ಕಲಿಲ್ಲ; ಇತರರು ಆಕ್ರಮಿಸಿಕೊಂಡಿದ್ದರಿಂದ ನಿಮಗೆ ಹುದ್ದೆಗಳು ಗಿಟ್ಟಲಿಲ್ಲ. ಸಾವಿರಾರು ವರ್ಷಗಳಿಂದ ಅಸ್ಪೃಶ್ಯತೆಗೆ ವಿರುದ್ಧವಾಗಿ ಯಾರೂ ಚಕಾರ ಎತ್ತಲಿಲ್ಲ. ಈಗ ಸ್ವರಾಜ್ಯ ಸಂಪಾದನೆಯ ಮೂಲಕ ಅಧಿಕಾರ ಕಸಿದುಕೊಂಡು, ಸ್ವಾರ್ಥ ಸಾಧಿಸುವ ಸಲುವಾಗಿ ಸವರ್ಣೀಯರು ಕರುಣಾಳುಗಳಂತೆ ಮುಂದೆ ಬಂದಿದ್ದಾರೆ. ಸ್ವಪ್ರಯತ್ನದಿಂದ ಮಾತ್ರ ಆತ್ಮೋದ್ಧಾರ ಸಾಧ್ಯ. ನಿರಾಶೆಯ, ಅಸಹಾಯಕತೆಯ ಯುಗ ಕಣ್ಮರೆಯಾಗುತ್ತಿದೆ; ಹೊಸ ಆಶಾಕಾಂಕ್ಷೆಗಳ ಸುವರ್ಣಯುಗ ಗೋಚರಿಸುತ್ತಿದೆ. ರಾಜಕೀಯ ಜೀವನದಲ್ಲಿ ಪಾಲ್ಗೊಳ್ಳುವ ಅವಕಾಶ ಲಭಿಸಿದ್ದರಿಂದ ಇದೆಲ್ಲ ಕೈಗೂಡುವಂತಾಗಿದೆ. ನಿಮ್ಮ ಹಕ್ಕುಗಳನ್ನು, ನಿಮ್ಮ ಶಕ್ತಿ ಸಾಮರ್ಥ್ಯಗಳನ್ನು ಮರೆತಿರಾದರೆ ನೀವು ಮತ್ತೆ ಮೇಲೇಳಲಾರಿರಿ. ಕಳೆದುಹೋದ ಕಾಲಾವಕಾಶಗಳು ಹಿಂತಿರುಗಲಾರವು. ನನ್ನನ್ನು ಇಂದ್ರ ಚಂದ್ರ ದೇವೇಂದ್ರನೆಂದು ಹೊಗಳುವುದು ಸರಿಯಲ್ಲ. ನಾನೂ ನಿಮ್ಮಂತೆ ಶ್ರೀ ಸಾಮಾನ್ಯ. ವ್ಯಕ್ತಿಯ ದೈವೀಕರಣದಿಂದ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತೀರಿ, ಪರಾವಲಂಬಿಗಳಾಗುತ್ತೀರಿ, ಕರ್ತವ್ಯ ಚ್ಯುತರಾಗುತ್ತೀರಿ. ಹೀರೋಪೂಜೆ ಮತ್ತು ದೈವೀಕರಣಗಳು ಹಿಂದೂ

ಸಮಾಜವನ್ನು ಹಾಳುಮಾಡಿದೆ. ದೇಶದ ದುರ್ಗತಿಗೆ ಕಾರಣವಾಗಿದೆ. ಸಾಮಾಜಿಕ ವಿಚ್ಛಿದ್ರತೆಯುಂಟಾಗಿ ರಾಷ್ಟ್ರೀಯ ವಿಪತ್ತೊದಗಿದಾಗಲೂ ನಾವು ಒಂದಾಗುವಂತಿಲ್ಲ. ನಿಮ್ಮ ದಾಸ್ಯಕ್ಕೆ ನೀವೇ ಕಾರಣ. ನೀವೇ ಅದನ್ನು ಕೊನೆಗಾಣಿಸಿಕೊಳ್ಳಬೇಕು. ಯಾವುದೋ ಲೋಕದಿಂದ ದೇವರೋ ಅತಿಮಾನವನೋ ಬಂದು ವಿಮೋಚನೆಗೆ ನೆರವಾಗುತ್ತಾರೆಂದು ನಂಬಿಕೊಳ್ಳಬೇಡಿ. ಪವಿತ್ರ ಗ್ರಂಥ ನಿಷ್ಠೆ ನಿಮ್ಮನ್ನು ಜೀತದಾರಿದ್ರ್ಯಗಳಿಂದ ಪಾರುಮಾಡುತ್ತದೆಂದು ತಿಳಿಯಬೇಡಿ. ಹಲವು ತಲೆಮಾರುಗಳಿಂದ ನಮ್ಮ ಹಿರಿಯರು ಅವುಗಳನ್ನು ನಂಬಿಕೊಂಡಿದ್ದರಲ್ಲವೆ ? ಅವರಿಗೆ ಸುಖ ಸಿಕ್ಕಿತೆ ? ಈಗಲೂ ನೀವು ಅವರಿಗಿಂತ ಮೇಲಾಗಿಲ್ಲ. ನಿಮ್ಮ ವ್ರತನಿಯಮ ಪೂಜೆ ಪುರಸ್ಕಾರಗಳಿಂದ ನಿಮಗೆ ಲಾಭವಾಗಿಲ್ಲ.

"ನಿಮಗೆ ಅನ್ನ ಬಟ್ಟೆ ನೆಳಲು ಮದ್ದು ಮತ್ತು ವಿದ್ಯೆಗಳನ್ನೊದಗಿಸಬೇಕಾದ್ದು. ಅಥವಾ ಅವುಗಳ ಸಂಪಾದನಾ ಮಾರ್ಗವನ್ನು ತೋರಿಸಬೇಕಾದ್ದು ಶಾಸನಾಧಿಕಾರದ ಕರ್ತವ್ಯ. ನಿಮ್ಮ ಒಗ್ಗಟ್ಟು. ಸಹಾಯ ಮತ್ತು ಸಂಕಲ್ಪಗಳು ಕಾನೂನು ರಚನೆ ಮತ್ತು ಆಚರಣೆಗಳಿಗೆ ಮೂಲಾಧಾರವಾಗಬೇಕು. ಪ್ರಾಪಂಚಿಕ ಸುಖದ ನೆಲೆ ಕಾನೂನು. ಸದ್ಯಕ್ಕೆ ವ್ರತನಿಯಮಗಳನ್ನು ಕಟ್ಟಿಟ್ಟು ಶಾಸನಾಧಿಕಾರ ಸಂಪಾದಿಸಲು ಸರ್ವ ತ್ಯಾಗಕ್ಕೂ ಸಿದ್ಧರಾಗಿ. ಆಗ ಮಾತ್ರ ನಿಮ್ಮ ಹಸಿವು ನೀಗುತ್ತದೆ".

ಅಂಬೇಡ್ಕರರ ಜೀವನ ದರ್ಶನ ಮತ್ತು ಸಂದೇಶಗಳ ಸಾರ ಸೂತ್ರಪ್ರಾಯವಾದ ಈ ಉಕ್ತಿಗಳಲ್ಲಿ ಹೆಪ್ಪುಗಟ್ಟಿದೆ. ಲೋಕಾನುಭವ. ವಿಶೇಷಾಧ್ಯಯನ ಮತ್ತು ಚಿಂತನಗಳ ರಸಪಾಕವನ್ನಿಲ್ಲಿ ಕಾಣಬಹುದು. ಅವರು ರೂಸೊ. ಬರ್ಕ್. ಮಾರ್ಕ್ಸ್ ಮೊದಲಾದ ಆಧುನಿಕ ಋಷಿಗಳನ್ನು ಹೋಲುವ ಇಪ್ಪತ್ತನೆಯ ಶತಮಾನದ ಮಹಾ ಭಾರತೀಯ ವಿಚಾರವಾದಿಗಳೆಂದರೆ ಅತಿಶಯೋಕ್ತಿಯಾಗಲಾರದು. ಅವರ ಈ ಸಂದೇಶ ನಿಮ್ಮ ವರ್ಗೀಯರಿಗೆ ಮಾತ್ರವಲ್ಲ. ಜಗತ್ತಿನ ಎಲ್ಲ ದಲಿತರಿಗೂ ಸ್ಫೂರ್ತಿದಾಯಕವಾಗುತ್ತದೆ.

1933ರ ಮಾರ್ಚ್ ತಿಂಗಳ ಮಧ್ಯಭಾಗದಲ್ಲಿ ಬ್ರಿಟಿಷ್ ಸರ್ಕಾರ ಭಾರತೀಯ ರಾಜ್ಯಾಂಗ ಸುಧಾರಣೆಗೆ ಸಂಬಂಧಿಸಿದ ಶ್ವೇತಪತ್ರವನ್ನು ಪ್ರಕಟಿಸಿತು. ಬ್ರಿಟಿಷ್ ಪಾರ್ಲಿಮೆಂಟಿನ ಸಂಯುಕ್ತ ಸಮಿತಿ ಆ ಪತ್ರವನ್ನು ಪರಿಶೀಲಿ

ಸ್ಥಬೇಕಾಗಿತ್ತು. ಅಂಬೇಡ್ಕರ್. ಜಯಕರ್ ಮೊದಲಾದ ಕೆಲವು ಭಾರತೀಯ ಪ್ರತಿನಿಧಿಗಳೂ ಆ ಸಮಿತಿಯ ಸದಸ್ಯರಾಗಿದ್ದರು. ಅಂಬೇಡ್ಕರರು ಲಂಡನ್ನಿಗೆ ಹೊರಡುವ ಮುನ್ನ ಗಾಂಧೀಜಿಯನ್ನು ಭೇಟಿ ಮಾಡಿ, ಮೊದಲೇ ರೂಪು ಗೊಂಡಿದ್ದ ಚುನಾವಣಾ ವಿಧಾನವನ್ನು ಕುರಿತು ಚರ್ಚೆ ನಡೆಸಿದರು. ಆ ಹೊತ್ತಿಗೆ ವಂಗೀಯ ಶಾಸನ ಸಭೆ ಪೂನಾ ಒಪ್ಪಂದವನ್ನು ರದ್ದುಗೊಳಿಸ ಬೇಕೆಂದು ಮಾಡಿದ್ದ ನಿರ್ಣಯ ಬ್ರಿಟಿಷ್ ಸರ್ಕಾರವನ್ನು ಮುಟ್ಟಿತ್ತು. ಒಪ್ಪಂದಕ್ಕೆ ಸಹಿ ಹಾಕಿದ್ದ ಹಿಂದೂ ನಾಯಕರೇ ಅದರ ವಿರುದ್ಧವಾಗಿ ತಿರುಗಿ ಬಿದ್ದಿದ್ದರು. ಗಾಂಧಿ-ಅಂಬೇಡ್ಕರರ ಚರ್ಚೆಯಲ್ಲಿ ಈ ವಿಷಯವೂ ಸೇರಿತ್ತು. ಸನಾತನಿಗಳು ತಮಗೆ ದೆವ್ವ ರಾಕ್ಷಸ ಮೊದಲಾದ ಹೆಸರಿಟ್ಟು ದೂರುತ್ತಿರುವುದಾಗಿ ಗಾಂಧೀಜಿ ತಿಳಿಸಿದರು. "ನಿಮ್ಮ ಸ್ಥಿತಿಯೇ ಹೀಗಾದರೆ ನನ್ನ ಗತಿಯೇನು ? ಮೊನ್ನೆ ಬರೋಡೆಯ ಮಹಾರಾಜರಿಗೆ ಸನ್ಮಾನ ಸಮಾರಂಭ ಏರ್ಪಾಡಾಗಿತ್ತು. ಸ್ವಾಗತ ಸಮಿತಿಯ ಪಟ್ಟಿಯಲ್ಲಿ ನನ್ನ ಹೆಸರಿತ್ತು. ಇದ್ದಕ್ಕಿದ್ದಂತೆ ಅದು ಕಾಣೆ ಯಾಯಿತು. ಗುಜರಾತಿನ ವಕೀಲ ಮಿತ್ರನೊಬ್ಬ ತಮ್ಮ ಮಗನ ಮದುವೆಗೆ ನನ್ನನ್ನು ಕರೆಯಬೇಕೆಂದಿದ್ದರು. ಅವರ ಬಂಧುಗಳ ಪ್ರತಿಭಟನೆಯಿಂದಾಗಿ ನನಗೆ ಆಮಂತ್ರಣ ಬರಲಿಲ್ಲವೆಂದು ಅನಂತರ ತಿಳಿಯಿತು. ಇದಕ್ಕೆಲ್ಲ ನನ್ನ ಹುಟ್ಟೇ ಕಾರಣ. ನಾನು ಮತ್ತು ನನ್ನವರು ಪಡುವ ಪಾಡಿನ ಸ್ವರೂಪ ಈಗಲಾದರೂ ನಿಮಗೆ ಅರ್ಥವಾಗಿದೆಯೆ ? ಇಂಥ ಘಟನೆಗಳು ಪ್ರತಿನಿತ್ಯ ನಮ್ಮ ಜೀವನದಲ್ಲೆದುರಾಗುತ್ತವೆ. ಇವನ್ನು ಸಹಸ್ರ ಸಹಸ್ರ ವರ್ಷಗಳಿಂದ ಸಹಿಸಿಕೊಂಡು ಬಂದಿದ್ದೇವೆ. ಈಗಲೂ ಸಹಿಸುತ್ತೇವೆ". "ನಿಜ ಡಾಕ್ಟರೆ, ನನಗೆ ಅರ್ಥವಾಗಿಲ್ಲವೆಂದು ತಿಳಿಯಬೇಡಿ. ನಮ್ಮ ನಾಡಿನ ವಿವಿಧ ಸಮಸ್ಯೆಗಳ ಹೊಂದಾಣಿಕೆ ತುಂಬಾ ತೊಡಕಾಗಿದೆ. ಆಂಗ್ಲರು ಮೊದಲು ಕಾಲ್ತೆಗೆದದ್ದಾದರೆ ಅವುಗಳ ಕಡೆಗೆ ಗಮನ ಹರಿಸುವುದು ಸಾಧ್ಯವಾಗುತ್ತದೆ." ಎಂದು ನುಡಿದು ಗಾಂಧೀಜಿ ಅಂಬೇಡ್ಕರರ ಕೈಗೆ ಹೂವಿನ ತುರಾಯಿ ಕೊಟ್ಟು, ಸುಖ ಪ್ರಯಾಣ ಕೋರಿದರು.

ಅಂಬೇಡ್ಕರರು ಮೇ 6 ರಂದು ಲಂಡನ್ ತಲುಪಿದರು. ಇಷ್ಟಮಿತ್ರರ ಮತ್ತು ರಾಜಕಾರಣಿಗಳ ಭೇಟಿ, ಸಂಯುಕ್ತ ಸಮಿತಿಯ ಕೆಲಸ, ಜತೆಗೆ ಅಧ್ಯಯನ ಇವುಗಳ ನಡುವೆಯೂ ಬಿಡುವು ಮಾಡಿಕೊಂಡು, ಊರಿನ ಮಿತ್ರರಿಗೆ ಪತ್ರ ಬರೆದು ರಾಜಕೀಯ ಚಟುವಟಿಕೆಗಳಿಗೆ ಸಂಬಂಧಿಸಿದ ಮಾಹಿತಿ ಗಳನ್ನು ಸಂಗ್ರಹಿಸುತ್ತಿದ್ದರು. ವೃದ್ಧಾಪ್ಯದಲ್ಲಿದ್ದ ಕೆಲೂಸ್ಕರರ ಹಣಕಾಸಿನ

ಸ್ಥಿತಿಗತಿಗಳು ಉತ್ತಮವಾಗಿಲ್ಲದಿದ್ದುದರಿಂದ. ಅವರಿಗೆ ಮಾಸಾಶನವನ್ನು ಮಂಜೂರು ಮಾಡುವಂತೆ ಬರೋಡೆಯ ಮಹಾರಾಜರಿಗೆ ಪತ್ರ ಬರೆದು ವಿನಂತಿಸಿಕೊಂಡರು. ದಲಿತರ ಚಳುವಳಿಗಳು ಪ್ರಾರಂಭದಲ್ಲಿ ಕೃಶವಾಗಿರುತ್ತವೆಂದೂ, ಕಾಲಕ್ರಮೇಣ ಸಿಡಿಮದ್ದಾಗುತ್ತವೆಂದೂ ಜನತಾ ಸಂಪಾದಕ ಕದ್ರೇಕರ್ ಅವರಿಗೆ ಪತ್ರ ಬರೆದು. ಅವರ ಕಾರ್ಯನಿಷ್ಠೆಯನ್ನೂ, ತ್ಯಾಗ ಶೀಲವನ್ನೂ. ದಕ್ಷತೆಯನ್ನೂ ಪ್ರಶಂಶಿಸಿದರು. ಭಾರತದ ಮಿತ್ರರೊಬ್ಬರಿಂದ ಬಂದಿದ್ದ ಪತ್ರ ಅವರನ್ನು ಚಕಿತಗೊಳಿಸಿತು. ಅವರು ಇಸ್ಲಾಂ ಧರ್ಮ ಸೇರುವುದಾಗಿ ಇಂಡಿಯಾದಲ್ಲಿ ನಡೆಯುತ್ತಿದ್ದ ಪ್ರಚಾರವೇ ಆ ಪತ್ರದ ವಿಷಯವಾಗಿತ್ತು. ಮತಾಂತರ ವಿಷಯ ಕುರಿತು ಮೌಲ್ವಿಯೊಬ್ಬರೊಡನೆ ಪ್ರಸ್ತಾಪವೆತ್ತಿ, ತಾವು ಹಿಂದೂಮತ ಬಿಡುವುದು ಖಚಿತವೆಂದು ತಿಳಿಸಿದ್ದುದಾಗಿ ಆ ಮಿತ್ರರಿಗೆ ಉತ್ತರ ಬರೆದರು. ತಾವು ಇಸ್ಲಾಂ ಧರ್ಮಕ್ಕೆ ಸೇರುವುದಿಲ್ಲವೆಂದೂ, ಬೌದ್ಧಧರ್ಮದ ಕಡೆಗೆ ತಮ್ಮ ಒಲವಿರುವುದೆಂದೂ ಅವರು ಸ್ಪಷ್ಟಪಡಿಸಿದರು. ತಮ್ಮ ರಾಜ ಅಂಬೇಡ್ಕರರು ಅನ್ಯಧರ್ಮ ಸ್ವೀಕರಿಸುವುದಾದರೆ ತಮಗಿನ್ನಾರು ಗತಿಮತಿಯೆಂದು ಅಸ್ಪೃಶ್ಯರು ಆತಂಕಗೊಂಡದ್ದುಂಟು. ಅವರ ಸಮಸ್ಯೆಗಳನ್ನು ಬಗೆಹರಿಸುವ ತನಕ ತಾವು ಅಂತಿಮ ನಿರ್ಧಾರ ಕೈಗೊಳ್ಳುವುದಿಲ್ಲವೆಂದು ಅಂಬೇಡ್ಕರರು ಮಿತ್ರರ ಮೂಲಕ ತಮ್ಮ ಅನುಯಾಯಿಗಳಿಗೆ ಸಂದೇಶ ತಲುಪಿಸಿದರು.

ಮುಸ್ಲಿಮರನ್ನು ತೃಪ್ತಿಪಡಿಸುವ ಸಲುವಾಗಿ ಅವರಿಗನುಕೂಲವಾಗುವಂತೆ ಬ್ರಿಟಿಷ್ ಸರ್ಕಾರ 'ಜಾತಿವಾರು ನಿರ್ಣಯ'ವನ್ನು ರಾಜ್ಯಾಂಗದಲ್ಲಿ ಸೇರಿಸಬಹುದೆಂಬ ಸಂಗತಿ ಅವರ ಕಿವಿಗೆ ಬಿತ್ತು. ಆ ಬಗ್ಗೆ ಅವರು ಪ್ರಾರಂಭದಿಂದಲೂ ವಿರೋಧ ವ್ಯಕ್ತಪಡಿಸುತ್ತಿದ್ದರು. ಪ್ರಾಂತ್ಯಗಳಲ್ಲಿ ಮೇಲ್ಮನೆಗಳಿರಕೂಡದೆಂದು ಪರಿಷತ್ತಿನ ಅಧಿವೇಶನದಲ್ಲಿ ವಾದಿಸಿದರು. ಅಸ್ಪೃಶ್ಯರು ಚುನಾವಣೆಗಳಲ್ಲಿ ಗೆಲ್ಲುವ ಸಂಭವವಿಲ್ಲದಿದ್ದುದೇ ಅವರ ವಿರೋಧಕ್ಕೆ ಕಾರಣವಾಗಿತ್ತು.

1934ರ ಜನವರಿ 8 ರಂದು ಅಂಬೇಡ್ಕರರು ಮುಂಬಯಿಗೆ ಹಿಂದಿರುಗಿದರು. ಮಿತ್ರರು ಮತ್ತು ಪತ್ರಿಕಾಕರ್ತರು "ಶ್ವೇತ ಪತ್ರದ ಬಗ್ಗೆ ನಿಮಗೆ ತೃಪ್ತಿಯಿದೆಯೆ ?" ಎಂದು ಪ್ರಶ್ನಿಸಿದರು. "ಕೈಗೆ ಬಂದದ್ದನ್ನು ಬಾಚಿಕೊಳ್ಳೋಣ ಬರಬೇಕಾದದ್ದನ್ನು ಚಳುವಳಿ ಹೂಡಿ ಪಡೆಯೋಣ, ನಾನಂತು ಕೈಕಟ್ಟಿಕೊಂಡು ಕುಳಿತಿರಲಾರೆ." ಎಂದವರು ಉತ್ತರಿಸಿದರು.

"ಸದ್ಯಕ್ಕೆ ನಿಮ್ಮ ಮುಂದಿನ ಕಾರ್ಯಕ್ರಮವೇನು ?" "ನಾನೊಂದು ಪುಸ್ತಕ ಬರೆಯುತ್ತಿದ್ದೇನೆ. ವಿಷಯ ಭಾರತೀಯ ಸೈನ್ಯಕ್ಕೆ ಸಂಬಂಧಿಸಿದ್ದು. ನಾನು ಇಂಗ್ಲೆಂಡಿನಲ್ಲಿರುವಾಗಲೇ ಅಗತ್ಯವಾದ ಮಾಹಿತಿ ಸಂಗ್ರಹಿಸಿದ್ದೇನೆ." ದೊಡ್ಡವರಿಗೆ ಕಾಲ ಸಾಲದು, ಸಣ್ಣವರಿಗೆ ಹೊತ್ತು ಹೋಗದು. ಪ್ರತಿಯೊಂದು ನಿಮಿಷವನ್ನೂ ಸದುಪಯೋಗ ಪಡಿಸಿಕೊಳ್ಳಬೇಕೆಂಬುದು ಅಂಬೇಡ್ಕರರ ಜೀವನಾದರ್ಶಗಳಲ್ಲೊಂದಾಗಿತ್ತು.

ನಾಲ್ಕೈದು ವರ್ಷಗಳ ಬಿಡುವಿಲ್ಲದ ಶ್ರಮದಾಯಕವಾದ ಕೆಲಸದಿಂದಾಗಿ ಅವರ ಆರೋಗ್ಯ ದಿನೇ ದಿನೇ ಕುಸಿಯತೊಡಗಿತು. ನರನಾಡಿಗಳಲ್ಲಿ ಆಯಾಸ ಕಾಣುತ್ತಿತ್ತು. ಕೈಕಾಲುಗಳು ಸೋತು ಹೋದಂತೆ ತೋರುತ್ತಿತ್ತು. ಅವರು ಏಕಾಕಿಯಾಗಿಯೇ ಕಾಂಗ್ರೆಸ್ಸಿನ ಅತಿರಥಮಹಾರಥರನ್ನು ಎದುರಿಸಬೇಕಾಗಿತ್ತು ; ರಾಜಮಹಾರಾಜರನ್ನೂ ಶ್ರೀಮಂತರನ್ನೂ ವಿರೋಧಿಸಬೇಕಾಗಿತ್ತು. ಮುಸ್ಲಿಂ ಕ್ರಿಶ್ಚಿಯನ್ನರಿಗೂ ಅವರ ಬಗ್ಗೆ ಸಹಾನುಭೂತಿಯಿರಲಿಲ್ಲ. ದ್ವೇಷಾಸೂಯೆ ಶತ್ರುತ್ವಗಳ ಬಿಸಿಲಲ್ಲಿ ಬಾಡಿಸುತ್ತಿದ್ದಂತೆ ಭಾಸವಾಗುತ್ತಿತ್ತು. ಅವರ ದಿನದಿನದ ಬದುಕು ಉದ್ವೇಗಕಾತರತೆಗಳ ಗರ್ಭದಿಂದ ಹೊರಹೊಮ್ಮುತ್ತಿದ್ದಂತೆ ತೋರುತ್ತಿತ್ತು. ಅವರ ದೃಷ್ಟಿ ಸಹ ಮದಗೆಟ್ಟಿತು. ಕನ್ನಡಕ ಬದಲಾಯಿಸಿದರು. ಭಯಂಕರ ರೋಗಗಳೊಡನೆ ಹೋರಾಟ ನಡೆಸಿಯಾರು ! ದೃಷ್ಟಿಘಾತವನ್ನವರು ಸಹಿಸಲಾರರು. ತಾವು ಮಿಲ್ಟನನ ಹಾಗೆ ಕುರುಡಾಗಬಹುದೆಂಬ ಹೆದರಿಕೆಯಿಂದ ಬಹಳ ಗಳಗಳನೆ ಅತ್ತುಬಿಟ್ಟರು. ಅವರಿಂದ ಓದು ನಿಂತು ಹೋಗುತ್ತದೆಂಬ ಅಂಜಿಕೆಯೇ ಅವರ ದುಃಖಕ್ಕೆ ಪ್ರಮುಖ ಕಾರಣ. ಉಸಿರಿನಷ್ಟೇ ಓದು ಅವರ ಬದುಕಿನ ಭಾಗವಾಗಿತ್ತು. ಅವರ ಜೀವಂತಿಕೆಯ ಕುರುಹಾಗಿತ್ತು. ಮೀನಿನ ಉಳಿವಿಗೆಂತು ನೀರು ಅವಶ್ಯಕವೋ ಅಂತೆಯೇ ಅವರ ಬದುಕಿಗೆ ಓದು ಅವಶ್ಯಕವಾಗಿತ್ತು. ಕುರುಡುತನ ಪ್ರಾಪ್ತವಾಗಿ ಓದು ನಿಂತು ಹೋದಾಗ ಬದುಕುವುದಕ್ಕಿಂತ ಸಾಯುವುದೇ ಮೇಲೆಂಬುದು ಅವರ ಅಭಿಪ್ರಾಯವಾಗಿತ್ತು. ಅವರ ದೃಷ್ಟಿ ಅವರು ಊಹಿಸಿಕೊಂಡಿದ್ದಷ್ಟು ಕೆಟ್ಟಿರಲಿಲ್ಲ. ಆರೋಗ್ಯ ರಕ್ಷಣೆಗೆ ವಿಶ್ರಾಂತಿ ಅತ್ಯಗತ್ಯವಾದ್ದರಿಂದ ಸದ್ದುಗದ್ದಲಗಳಿಲ್ಲದ ಜೋಡಿರ್ಯಲ್ಲಿ ಕೆಲವು ದಿನ ತಂಗಿದರು. ಅಲ್ಲಿಂದ ಮಹಾಬಲೇಶ್ವರಕ್ಕೆ ಹೋಗಿ. ಆಯುರ್ವೇದ ವಿಧಾನದಲ್ಲಿ ಅನುಪಾನ ನಡೆಸುತ್ತಿದ್ದರು. ಆಗಾಗ್ಗೆ ಸಮುದ್ರ ಸ್ನಾನ ಮಾಡಿಬರುತ್ತಿದ್ದುದೂ

ಕಿನಿಸಿಕೊಂಡವರಲ್ಲ. ಅವರ ಜೀವನದರ್ಶನವಾಗಲೀ, ವಿದ್ವತ್ತು ಬೌದ್ಧಿಕತೆ ಗಳಾಗಲೀ, ಕಾರ್ಯಕಲಾಪಗಳಾಗಲೀ ಅವರಿಗೆ ಅರ್ಥವಾಗುತ್ತಿರಲಿಲ್ಲ. ದೊಡ್ಡವರ ಕೈಹಿಡಿದ ಮಡದಿಯರಿಗೆ ಸುಖ ಕಡಮೆ. ಅವರು ಯಾವಾಗಲೂ ಒಂಟಿ. ರಮಾಬಾಯಿಯರಿಗೂ ಅದೇ ಅವಸ್ಥೆ. ಕೆಲವು ತಿಂಗಳಿಂದ ಅವರ ಆರೋಗ್ಯ ನೆಟ್ಟಗಿರಲಿಲ್ಲ. ನಾಲ್ವರು ಮಕ್ಕಳು ತೀರಿಕೊಂಡಮೇಲಂತೂ ಅಂಬೇಡ್ಕರರ ಮನಸ್ಸು ವಿರಕ್ತಿಯ ಕಡೆಗೆ ತಿರುಗಿತ್ತು. ಕುಟುಂಬದ ಬಗ್ಗೆ ನಿರ್ಲಿಪ್ತತೆ ಯಿಂದಿರುತ್ತಿದ್ದರು. ಒಂದೆರಡು ಸಾರಿ ಸ್ಥಳಾಂತರಕ್ಕಾಗಿ ಮಡದಿಯನ್ನು ಹೊರಗೆ ಕರೆದೊಯ್ದಿದ್ದರು. ಉತ್ತಮ ವೈದ್ಯರಿಂದ ಔಷಧೋಪಚಾರ ಮಾಡಿಸಿದರು. ಆದರೂ ಅವರ ದೇಹ ದಿನೇ ದಿನೇ ಕೃಶವಾಗುತ್ತಿತ್ತು: ಕೆನ್ನೆ ಗುಳಿಬಿದ್ದುವು; ಕಣ್ಣು ಕಾಂತಿಹೀನವಾದುವು ; ಮುಖ ಬಿಳಿಚಿಕೊಂಡಿತು. ಅವರು ರುಗ್ಣಶಯ್ಯೆಯಲ್ಲೊರಗಿರುವಾಗಲೂ ಪತಿಯ ಕ್ಷೇಮಚಿಂತೆಯೇ ಚಿಂತೆಯಾಗಿತ್ತು.

ಬಡತನದಲ್ಲಿ ಹುಟ್ಟಿ ಬೆಳೆದ ಅವರೆಂದೂ ಆಶೆಬುರುಕಿಯಾಗಿರಲಿಲ್ಲ. ಅವರ ಜೀವನಾವಶ್ಯಕತೆಗಳು ಮಿತ. ರಾಜಗೃಹದಲ್ಲಿ ವಾಸಿಸುವಾಗಲೂ ಅವರು ಹಿಂದಿನ ಬಾಳು ಮರೆತಿರಲಿಲ್ಲ. ಆಧುನಿಕ ಸೌಲಭ್ಯ ಗೃಹೋಪ ಕರಣಗಳನ್ನು ಕಂಡಾಗ ಅವರಿಗೆ ಗಾಬರಿಯಾದದ್ದು ನಿಜ. ತಾವು ಒಂಟಿತನ ವನ್ನನುಭವಿಸುವಾಗ ಬಡತನದಲ್ಲಿ ಬೇಯುವಾಗ ಗಂಡನನ್ನಾಗಲೀ ದೇವರ ನ್ನಾಗಲೀ ಶಪಿಸಲಿಲ್ಲ. ತಮ್ಮ ಬಡತನದ ಬಗ್ಗೆ ದುಃಖವಿರಲಿಲ್ಲ; ಪರರ ಸಿರಿತನದ ಬಗ್ಗೆ ಮಚ್ಚರವಿರಲಿಲ್ಲ. ಮಕ್ಕಳ ಸಾವೊಂದೇ ಅವರ ಕೊರಗಾಗಿತ್ತು. ಆ ಕೊರಗು ಅವರ ಶರೀರವನ್ನು ಬೆಂಡುಮಾಡಿತ್ತು. ಅವರ ಇಡೀ ದೇಹವೇ ಗಂಡನಿಗೆ ಮುಡಿಪಾಗಿತ್ತು : ಅವರ ಮಾತು, ನಗು, ಚಿಂತನೆ, ಕೆಲಸಕಾರ್ಯ ಎಲ್ಲವೂ ಪತಿದೇವರಿಗೆ ನೈವೇದ್ಯವಾಗಿದ್ದುವು. ನಯವೇ ನಡೆನುಡಿಗಳಾದಂತೆ. ಪ್ರೇಮ ಭಕ್ತಿಗಳೇ ದೇಹವಾದಂತೆ ಅವರು ಕಾಣುತ್ತಿದ್ದರು. ಗಂಡ ಎರಡು ದಿನ ಮನೆಯಲ್ಲಿದ್ದರೆ ಐದು ದಿನ ಹೊರಗಿರುತ್ತಿದ್ದರು. ಮನೆಯಲ್ಲಿದ್ದಾಗಲೂ ಕುಟುಂಬದ ಪರಿವೆಯಿಲ್ಲ. ಹೀಗಾಗಿ ಅವರು ಏಕಾಂಗಿಯಾಗಿಯೇ ಸಂಸಾರದ ಹೊರೆ ಹೊರುವ ಧೈರ್ಯ ಕಷ್ಟಸಹಿಷ್ಣುತೆಗಳನ್ನು ಪಡೆದುಕೊಂಡಿದ್ದರು. ದೇವರ ಸಂಬಂಧವಾದ ನಂಬಿಕೆಗಳ ವಿಷಯದಲ್ಲಿ ಅವರ ಮನೋಧರ್ಮ ಧ್ರುವಗಳಷ್ಟು ಅಂತರವುಳ್ಳದ್ದು. ಪತಿಗೆ ದೇವರಲ್ಲಾಗಲೀ ಪವಿತ್ರ ಗ್ರಂಥ ಗಳಲ್ಲಾಗಲೀ ವ್ರತನಿಯಮಗಳಲ್ಲಾಗಲೀ ವಿಶ್ವಾಸವಿಲ್ಲ. ಸತಿಯಾದರೋ

ಪ್ರತಿ ಶನಿವಾರ ಉಪವಾಸ ಮಾಡಬೇಕು, ದೇವರಪೂಜೆ ಮಾಡಬೇಕು. ದೇವರಪೂಜೆಯ ಗುರಿಯಾದರೂ ಏನು ? ಪತಿಯ ಕಲ್ಯಾಣಾಕಾಂಕ್ಷೆ. ಪತಿ ಅವರ ಪೂಜೆ ಪ್ರಾರ್ಥನೆಗಳಿಗೆ ಅಡ್ಡಿಯಾಗಲಿಲ್ಲ. ಪಂಡರಾಪುರ ಯಾತ್ರೆ ಮಾಡಬೇಕೆಂಬುದು ಅವರ ಉತ್ಕಟಾಕಾಂಕ್ಷೆಯಾಗಿತ್ತು. ಅವರಲ್ಲಿಗೆ ಹೋದರೂ ಗುಡಿಯ ಹೊರಗೆ ದೂರ ನಿಂತು ಭಜನೆ ಮಾಡಿ ಪೂಜೆ ಸಲ್ಲಿಸಬೇಕಾಗಿತ್ತು. ಪತಿಗೆ ಅಂಥ ಅವಮಾನದ ಸಂಗತಿ ಹಿಡಿಸುತ್ತಿರಲಿಲ್ಲ: "ನಿಜವಾದ ಭಕ್ತರಿಗೂ ದೇವರದರ್ಶನ ದೊರೆಯದಲ್ಲಿಗೆ ಏಕೆ ಹೋಗಬೇಕು ? ದಲಿತ ಮಾನವರಿಗೆ ಸಲ್ಲಿಸುವ ನಿಸ್ವಾರ್ಥ ಸೇವೆಯಲ್ಲಿ, ಮಾಡುವ ನಿಷ್ಕಳಂಕ ತ್ಯಾಗದಲ್ಲಿ, ಶೀಲ ಸಂಪನ್ನವಾದ ಆಚರಣೆಯಲ್ಲಿ ಪಂಡರಾಪುರವಿದೆ. ಭಕ್ತ ಇರುವಲ್ಲಿಯೇ ಪಂಡರಾಪುರ, ನಡೆವಲ್ಲಿಯೇ ಪಂಡರಾಪುರ" ಎಂದು ಅಂಬೇಡ್ಕರರು ತಮ್ಮ ಪತ್ನಿಗೆ ವಿವೇಕ ಹೇಳುತ್ತಿದ್ದರು. 1935ನೆಯ ಸಂವತ್ಸರದ ಮೇ 27 ರಂದು ಪಂಡರಾಪುರಕ್ಕೆ, ಹಿಂದಿರುಗದ ಊರಿಗೆ ರಮಾಬಾಯಿ ಪ್ರಯಾಣಮಾಡಿದರು ! ಮಹಾಪತಿವ್ರತೆಯಂತೆ ಪತಿಯ ತೊಡೆಯ ಮೇಲೆ ಮಲಗಿಕೊಂಡು ಕೊನೆಯುಸಿರೆಳೆದರು.

ಪತ್ನಿಯ ದೇಹವನ್ನು ಅಗ್ನಿಗರ್ಪಿಸಿ, ಅವರ ಆತ್ಮವನ್ನು ತಮ್ಮ ಹೃನ್ಮಂದಿರದಲ್ಲಿ ಪ್ರತಿಷ್ಠಾಪಿಸಿಕೊಂಡರು. ಆದರೂ ಅವರ ಶಾಶ್ವತ ವಿಯೋಗ ದಿಂದಾಗಿ ಪತಿಯ ದುಃಖ ಅಸಹನೀಯವಾಯಿತು. ಅವರ ನೆನಪು ಮರು ಕಳಿಸಿದಾಗಲೆಲ್ಲ ಮಗುವಿನಂತೆ ಅತ್ತುಬಿಡುತ್ತಿದ್ದರು. ರೆಪ್ಪೆ ಊದಿಕೊಂಡು ಕಣ್ಣು ಕೆಂಪಾಗಿ, ಮುಖ ಸದಾ ಬಾಡಿಕೊಂಡಿರುತ್ತಿತ್ತು. ಕೆಲವು ದಿನಗಳ ತನಕ ತಮ್ಮ ಕೋಣೆಯಿಂದ ಹೊರಗೆ ಕಾಲಿಡುತ್ತಿರಲಿಲ್ಲ. ಗೆಳೆಯರು ಬಂದು ಮಾತಾಡಿಸಿದಾಗ ನಿಟ್ಟುಸಿರು ನಿಡುನೋಟಗಳಿಂದಲೇ ಉತ್ತರ ನೀಡು ತ್ತಿದ್ದರು. ಶ್ರಾದ್ಧಾದಿ ಕರ್ಮಗಳಲ್ಲಿ ನಂಬಿಕೆಯಿಲ್ಲದ, ಪೌರೋಹಿತ್ಯದ ಪ್ರಬಲ ವಿರೋಧಿಯಾದ ಅಂಬೇಡ್ಕರರು ದೈವಭಕ್ತೆಯಾದ ಪತ್ನಿಯ ಆತ್ಮಕ್ಕೆ ಶಾಂತಿಯಾಗಲೆಂಬಂತೆ, ಮಹರ್ ಪುರೋಹಿತನೊಬ್ಬನನ್ನು ಕರೆಸಿ, ಮಗನ ಮೂಲಕ ಉತ್ತರಕ್ರಿಯೆಗಳನ್ನು ಮಾಡಿಸಿದರು. ತಮ್ಮ ಪತ್ನಿಯ ಮೇಲಣ ಪವಿತ್ರ ಪ್ರೇಮಕ್ಕೆ ಅವರ ಈ ಅನಿರೀಕ್ಷಿತವಾದ ವಿಚಿತ್ರ ವರ್ತನೆಯೆ ಸಾಕ್ಷಿ ಯಾಗಿದೆ. ತಲೆ ಬೋಳಿಸಿಕೊಂಡು ಸನ್ಯಾಸಿವಸ್ತ್ರ ಧರಿಸಿದರೆಂದರೆ ಅವರನು ಬಲ್ಲವರಿಗೆ ತುಂಬ ಆಶ್ಚರ್ಯವಾಗಿರಬೇಕು. 1935ನೆಯ ವರ್ಷದ ಜೂನ್

1 ರಿಂದ ಸರ್ಕಾರಿ ಲಾ ಕಾಲೇಜಿನ ಪ್ರಾಚಾರ್ಯರಾಗಿ ಅವರು ನೇಮಕಗೊಂಡದ್ದರಿಂದ ಅವರ ಮನಸ್ಸಿಗೆ ತುಸು ನೆಮ್ಮದಿ ದೊರಕಿತು.

ಅಕ್ಟೋಬರ್ ತಿಂಗಳಲ್ಲಿ ನಿಮ್ನವರ್ಗದ ಜನರ ಸಮ್ಮೇಲನ ಇಯೋಲಾದಲ್ಲಿ ನಡೆಯುವುದಿತ್ತು. ತಾವು ಮತಾಂತರ ಹೊಂದುವ ನಿರ್ಧಾರವನ್ನು ಅಂಬೇಡ್ಕರರು ಆ ಸಮ್ಮೇಲನದಲ್ಲಿ ಪ್ರಕಟಿಸುವರೆಂಬ ಸುದ್ದಿ ದಟ್ಟವಾಗಿ ಹಬ್ಬಿತ್ತು. ಹಿಂದೂ ಧರ್ಮದಲ್ಲುಳಿಯುವ ಸಲುವಾಗಿ ತಾವು ಮಾಡಿದ ಪ್ರಾಮಾಣಿಕ ಪ್ರಯತ್ನಗಳೆಲ್ಲ ವಿಫಲಗೊಂಡದ್ದರಿಂದ, ಮಾರ್ಗಾಂತರವಿಲ್ಲದೆ ಅವರು ಆ ನಿರ್ಧಾರ ಕೈಗೊಂಡಿದ್ದರು. ಆ ಸುದ್ದಿ ಹಿಂದೂಗಳ ಮನಸ್ಸಮುದ್ರದಲ್ಲಿ ಅಲ್ಲೋಲಕಲ್ಲೋಲವುಂಟುಮಾಡಿತು. ಆ ಸುದ್ದಿಯ ಯಥಾರ್ಥತೆಯನ್ನರಿಯುವ ಸಲುವಾಗಿ ಅಂಬೇಡ್ಕರರ ಗೆಳೆಯರು ಕಾತರತೆಯಿಂದ ಪ್ರಯತ್ನಿಸಿದರು. ಆ ನಿರ್ಧಾರವನ್ನು ಬದಲಿಸುವಂತೆ ಕೇಳ್ಕರ್, ಘೊಪಟ್ಕರ್, ಚಿತ್ರಾವ್ ಮೊದಲಾದ ಸಜ್ಜನರು ಅಂಬೇಡ್ಕರರಿಗೆ ಪತ್ರ ಬರೆದು ವಿನಂತಿಸಿಕೊಂಡರು. ಆರು ವರ್ಷಗಳ ಹಿಂದೆ ಜಲಗಾಂ ಸಮ್ಮೇಲನದಲ್ಲಿ ಅವರು ಪ್ರಕಟಿಸಿದ್ದ ಎಚ್ಚರಿಕೆ ಹಿಂದೂ ಜನರ ಕಿವಿಗಳ ಮೇಲೆ ಬಿದ್ದಿರಲಿಲ್ಲ. ತಮ್ಮ ಧ್ಯೇಯಸಾಧನೆಗಾಗಿ ಖರ್ಚುಮಾಡಿದ ದ್ರವ್ಯಶ್ರಮಗಳು ವ್ಯರ್ಥವಾದುವೆಂದೂ, ಅಂತಿಮ ನಿರ್ಣಯಕ್ಕೆ ಕಾಲ ಪರಿಪಕ್ವವಾಗಿದೆಯೆಂದೂ ಅವರು ಇಯೋಲಾ ಸಮ್ಮೇಲನದಲ್ಲಿ ಘೋಷಿಸಿದರು. "ನೀವೀಗ ಹಿಂದೂ ಧರ್ಮವನ್ನು ತ್ಯಜಿಸಿ, ಬೇರೆ ಧರ್ಮವನ್ನು ಸ್ವೀಕರಿಸಿ. ಆತ್ಮಗೌರವವನ್ನು ಕಾಪಾಡಿಕೊಂಡು, ಆತ್ಮತೃಪ್ತಿಯನ್ನು ಸಂಪಾದಿಸಿಕೊಳ್ಳಿ. ಹೊಸ ಧರ್ಮವನ್ನಾರಿಸಿಕೊಳ್ಳುವಾಗ ಎಚ್ಚರಿಕೆಯಿಂದಿರಿ. ಸಮಾನಾವಕಾಶ, ಸಮಾನ ಸ್ಥಾನಮಾನ, ಸಮಾನ ಪುರಸ್ಕಾರಗಳು ದೊರೆಯುವ, [illegible] ಧರ್ಮವನ್ನು ಹಿಡಿಯಿರಿ. ನಾನು ಹಿಂದೂ ಧರ್ಮದಲ್ಲಿ ಹುಟ್ಟಿದ್ದೇ ತಪ್ಪು. ಆದರೆ ಹಿಂದುವಾಗಿ ಸಾಯುವುದಿಲ್ಲವೆಂದು ನಿಮ್ಮ ಮುಂದೆ ಪ್ರಮಾಣಮಾಡಿ ನುಡಿಯುತ್ತೇನೆ. ಇನ್ನು ಮುಂದೆ [illegible] ಹಿಂದೂ ಧರ್ಮದ ಹೊರಗೆ ನಿಮ್ಮ ನಿಮ್ಮ ಭವಿಷ್ಯ ರೂಪಿಸಿಕೊಳ್ಳಿ. ಈಗ ನಿಮ್ಮ ನಿಮ್ಮ ಶಕ್ತಿ ಸಾಮರ್ಥ್ಯಗಳನ್ನು ಅನ್ಯತ್ರ ಪೋಲು ಮಾಡದೆ ರಾಜಕೀಯಾಧಿಕಾರ ಪಡೆಯಲು ವಿನಿಯೋಗಿಸಿ" ಎಂದವರು ನಿಮ್ನವರ್ಗೀಯರಿಗೆ ಹೊಸಕರೆ ಕೊಟ್ಟರು.

ಮತಾಂತರೀಕರಣದಲ್ಲಿ ಆಸ್ಥೆಯುಳ್ಳ ಕೆಲವು ಧರ್ಮಗುರುಗಳ ಕಿವಿ ಅಂಬೇಡ್ಕರರ ಘೋಷಣೆಯಿಂದ ನೆಟ್ಟಗಾದುವು. ಹಿಂದೂ ಧರ್ಮದ ಸತ್ವವನ್ನು ಕುಗ್ಗಿಸಿ. ಅದರ ಅನುಯಾಯಿಗಳ ಸಂಖ್ಯೆಯನ್ನು ತಗ್ಗಿಸಲು ಸದವಕಾಶ ದೊರಕುತ್ತಿದೆಯೆಂದು ಅವರೆಲ್ಲ ಹಿಗ್ಗಿದರು. ಮುಸ್ಲಿಮ್ ಸಿಕ್ ಕ್ರಿಶ್ಚಿಯನ್ ನಾಯಕರು ತಂತಮ್ಮ ಧರ್ಮಗಳಿಗೆ ಅಂಬೇಡ್ಕರ್ ಮತ್ತು ಅವರ ಹಿಂಬಾಲಕರನ್ನು ಸ್ವಾಗತಿಸಲು ಸಿದ್ಧರಾದರು. ಮುಸ್ಲಿಮ್ ಮತಕ್ಕೆ ಸೇರುವುದಾದರೆ ನಿಮ್ನವರ್ಗೀಯರಿಗೆ ಸರ್ವಸಮಾನತೆಯನ್ನು ದೊರಕಿಸಿಕೊಡುವುದಾಗಿ ಮುಸ್ಲಿಮ್ ನಾಯಕರೂ, ಶಾಸಕರೂ ಆದ ಕೆ.ಎಲ್. ಗೌಬರು ಬಹಿರಂಗವಾಗಿ ಆಮಂತ್ರಣ ಕೊಟ್ಟರು. ಕಾಶಿಯ ಮಹಾಬೋಧಿ ಸೊಸೈಟಿಯ ಕಾರ್ಯದರ್ಶಿಗಳು ಅಂಬೇಡ್ಕರರಿಗೊಂದು ತಂತಿ ಕಳಿಸಿ, "ಬೌದ್ಧರಲ್ಲಿ ಧಾರ್ಮಿಕ ಅಥವಾ ಸಾಮಾಜಿಕ ನ್ಯೂನತೆಗಳಿಲ್ಲ. ಎಲ್ಲರಿಗೂ ಸಮಾನ ಸ್ಥಾನವುಂಟು. ಜಾತಿ ಭೇದವಿಲ್ಲ. ಭಿಕ್ಕುಗಳನ್ನು ಕಳಿಸಿಕೊಡುತ್ತೇವೆ" ಎಂಬುದಾಗಿ ಆಶ್ವಾಸನೆ ನೀಡಿದರು. ಸಿಖ್ಖರ ಕಡೆಯಿಂದಲೂ ಅದೇ ತೆರನ ಆಶ್ವಾಸನೆ ಸಿಕ್ಕಿತು. ಕಜ್ರೋಳ್ಕರ್ ಅಂಥ ನಿಮ್ನವರ್ಗದ ನಾಯಕರು ಮತಾಂತರ ವಿರೋಧಿಗಳಾಗಿದ್ದರು. ಬೇರೆ ಕಡೆ ಹೋಗಿ ಅಸ್ಪೃಶ್ಯರಾಗುಳಿಯುವುದಕ್ಕಿಂತ, ಇದ್ದ ಕಡೆ ವಿಮೋಚನಾಂದೋಳನಕ್ಕೆ ಸಿದ್ಧರಾಗುವುದು ಮೇಲೆಂದು ಅವರು ಅಭಿಪ್ರಾಯಪಟ್ಟರು. ನಿಮ್ನವರ್ಗೀಯರು ಆ ಈ ಕಡೆ ಚದುರಿ ಹೋಗಿ, ಸಂಖ್ಯಾಬಲವನ್ನು ಕಳೆದುಕೊಂಡು. ನಿಸ್ಸಹಾಯಕರಾಗುವುದಕ್ಕಿಂತ, ಒಟ್ಟಿಗಿರುವುದರಲ್ಲಿ ಸುಖವುಂಟೆಂದು ಶ್ರೀನಿವಾಸನ್ ಸಲಹೆ ನೀಡಿರು. ಅಂಬೇಡ್ಕರರು ಹಿಂದೂ ಧರ್ಮತ್ಯಜಿಸುವುದಾದರೆ ತಾನು ಜೀವ ಸಹಿತ ಬದುಕುವುದಿಲ್ಲವೆಂದು ಸಿಂಧಿಯುವಕನೊಬ್ಬ ರಕ್ತದಲ್ಲಿ ಪತ್ರ ಬರೆದಿದ್ದನು.

ಮತಾಂತರ ಪರವಿರೋಧವಾಗಿ ಪ್ರತಿನಿತ್ಯ ಅಂಬೇಡ್ಕರರಿಗೆ ನೂರಾರು ಪತ್ರಗಳು ಬರಲಾರಂಭಿಸಿದವು. "ಅಸ್ಪೃಶ್ಯರಾಗಿ ಹುಟ್ಟಿದ್ದರಿಂದಲೇ ನಿಮ್ಮ ಹೆಸರು ಎಲ್ಲೆಲ್ಲಿಯೂ ಕೇಳಿಬರುತ್ತಿದೆ. ನಿಮ್ಮಂಥ ವಿದ್ವಾಂಸರು ಬೇರೆ ಕೋಮುಗಳಲ್ಲಿ ಬಹಳವಾಗಿದ್ದಾರೆ. ಅವರು ಅಜ್ಞಾತವಾಗುಳಿದಿದ್ದಾರೆ. ಅನ್ಯಧರ್ಮ ಸ್ವೀಕರಿಸಿದ ಕೂಡಲೇ ನಿಮ್ಮನ್ನು ನಿಮ್ಮವರು ಮರೆಯುತ್ತಾರೆ, ಅನ್ಯಧರ್ಮೀಯರು ಉಪೇಕ್ಷಿಸುತ್ತಾರೆ. ನೀವು ವ್ಯಕ್ತಿತ್ವವನ್ನು ಕಳೆದುಕೊಂಡು ಸೊನ್ನೆಯಾಗುತ್ತೀರಿ". ಈ ಮಾತುಗಳಲ್ಲಿ ಕೆಲವು ಪತ್ರಗಳ ಸಾರಾಂಶ ಅಡಕ

ಗೊಂಡಿತ್ತು. ಅಂಥವರಿಗೆ ಅವರು ಕೊಟ್ಟ ಉತ್ತರ ವಿಶಿಷ್ಟವಾಗಿತ್ತು, ಆತ್ಮ ಪ್ರತ್ಯಯದಿಂದ ಕೂಡಿತ್ತು. "ನನ್ನ ಯಶಸ್ಸು ಮತ್ತು ಸಾಮರ್ಥ್ಯಗಳಿಗೆ ನನ್ನ ದುಡಿಮೆ ಮತ್ತು ಬುದ್ಧಿಶಕ್ತಿಗಳೇ ಕಾರಣ. ನಾನು ಸಾಹಿತಿಗಳ ಅಥವಾ ರಾಜಕಾರಣಿಗಳ ಸಂಘದಲ್ಲಿಯೇ ಇರಲಿ. ಬ್ರಾಹ್ಮಣರ ಅಥವಾ ಬ್ರಾಹ್ಮಣೇತರರ ಕಂಪನಿಯಲ್ಲಿಯೇ ಇರಲಿ, ನನ್ನ ವ್ಯಕ್ತಿತ್ವನ್ನುಳಿಸಿಕೊಳ್ಳುವ ಶಕ್ತಿ ನನಗಿದೆ. ಆದರೆ ನನಗೆ ಸಾಮಾನ್ಯರಿಗಿಲ್ಲದ ಉತ್ತಮೋತ್ತಮ ಸ್ಥಾನ ಬೇಕಿಲ್ಲ. ದಲಿತ ಜನ ಮೇಲೆ ಬಂದದ್ದಾದರೆ, ನನಗೆ ಅಜ್ಞಾತ ವಾಸವೇ ಲೇಸು." "ಮತಾಂತರವೆಂದ ಕೂಡಲೇ ಎರಡು ಮೂರು ಮತ ನಮ್ಮ ಕಣ್ಣೆದುರು ನಿಲ್ಲುತ್ತವೆ. ಅವೇ ಏಕಾಗಬೇಕು? ಹೊಸ ಧರ್ಮವನ್ನೇಕೆ ಸ್ಥಾಪಿಸಬಾರದು? ಅದೂ ಬೇಡ, ಆರ್ಯರು ಬರುವ ಮುನ್ನ ಆದಿ ದ್ರಾವಿಡರಲ್ಲಿ ರೂಢಿಯಲ್ಲಿದ್ದ ಆಚರಣೆಗಳನ್ನು ಪರಿಷ್ಕರಿಸಿ ವ್ಯವಸ್ಥೆಗೊಳಿಸಬಾರದೇಕೆ? ಮತಾಂತರದಲ್ಲಿ ಮಾಂತ್ರಿಕ ಶಕ್ತಿಯಿದೆಯೆಂದಾಗಲೀ, ಅದು ಕೂಡಲೇ ನಿಮ್ಮನ್ನು ನರಕದಿಂದ ಸ್ವರ್ಗಕ್ಕೊಯ್ಯುತ್ತದೆಂದಾಗಲೀ ನಾನು ಹೇಳುತ್ತಿಲ್ಲ. ಎಲ್ಲಿ ಹೋದರೂ ಸ್ವಾತಂತ್ರ್ಯ ಸಮಾನತೆಗಳಿಗಾಗಿ ಹೋರಾಡಬೇಕಾಗುತ್ತದೆ: ಅಶನ ವಸತಿಗಳಿಗಾಗಿ ಸಮರ ಹೂಡಬೇಕಾಗುತ್ತದೆ. ಮುಸ್ಲಿಮ್ ಮತಕ್ಕೆ ಸೇರುತ್ತೇವೆಂದರೆ ನಿಜಾಮ ಐದು ಕೋಟಿ ರೂಪಾಯಿ ಕೊಡಬಹುದು, ಕ್ರಿಸ್ತ ಮತಕ್ಕೆ ಸೇರುತ್ತೇವೆಂದರೆ ಪಾಶ್ಚಾತ್ಯ ರಾಷ್ಟ್ರಗಳಿಂದ ಹತ್ತು ಕೋಟಿ ರೂಪಾಯಿ ಸಿಗಬಹುದು; ಆದರೆ ಮತಾಂತರಿಗಳೆಲ್ಲರೂ ನವಾಬರಾಗುವುದಿಲ್ಲ, ಪೋಪರಾಗುವುದಿಲ್ಲ. ಆದರೆ ಹಿಂದೂ ಮತದ ಕಾಠಿನ್ಯವಾಗಲೀ, ನಿರ್ದಯೆಯಾಗಲೀ ಬೇರೆ ಕಡೆ ಇಲ್ಲವೆಂಬುದು ಸದ್ಯ ಗಮನಿಸಬೇಕಾದ ಸಂಗತಿ"—ಮತಾಂತರ ಸಮಸ್ಯೆ ಅವರ ತಲೆಯನ್ನು ಹೊಕ್ಕಾಗಿನಿಂದ ಅವರು ಸಭೆಸಮಾರಂಭಗಳಲ್ಲಿ ಆಗಾಗ್ಗೆ ವ್ಯಕ್ತಪಡಿಸುತ್ತಿದ್ದ ಅಭಿಪ್ರಾಯಗಳಿವು.

ಲಾಹೋರಿನ ಜಟ್ ಪಟ್ ತೋಡಕ್ ಮಂಡಲ 1936ರಲ್ಲಿ ನಡೆಯಲಿದ್ದ ವಾರ್ಷಿಕ ಸಮ್ಮೇಲನದ ಅಧ್ಯಕ್ಷ ಪದವಿಗೆ ಅಂಬೇಡ್ಕರರನ್ನು ಆಹ್ವಾನಿಸಿತ್ತು. ಜಾತಿ ವಿನಾಶಕ್ಕೆಂದು ಹುಟ್ಟಿಕೊಂಡ ಸವರ್ಣ ಹಿಂದೂ ಸಮಾಜ ಸುಧಾರಕರ ಸಂಸ್ಥೆಯದು. ಅಭಿಪ್ರಾಯ ಭೇದದಿಂದಾಗಿ ತಾವು ಸವರ್ಣೀಯರು ನಡಸುವ ಚಳುವಳಿಯಲ್ಲಿ ಪಾಲ್ಗೊಳ್ಳುವುದಿಲ್ಲವೆಂದು ಅಂಬೇಡ್ಕರರು ಕಾರ್ಯಕರ್ತರಿಗೆ ಉತ್ತರ ಬರೆದರು. ಮಂಡಲಿ ತನ್ನ ಕಾರ್ಯದರ್ಶಿಯನ್ನು

ಮುಂಬಯಿಗೆ ಕಳಿಸಿ. ಅವರ ಮೂಲಕ ಅಂಬೇಡ್ಕರರ ಸಮ್ಮತಿಯನ್ನು ಪಡೆಯಿತು. ಅಂಬೇಡ್ಕರರು 'ಜಾತಿವಿನಾಶ' ಎಂಬ ವಿಷಯದ ಮೇಲೆ ಭಾಷಣ ಸಿದ್ಧಪಡಿಸತೊಡಗಿದರು. ಅಷ್ಟರಲ್ಲಿ ಅಂಬೇಡ್ಕರರ ಆಗಮನದ ಬಗ್ಗೆ ಪಂಜಾಬಿನ ಹಿಂದುಗಳಲ್ಲಿ ವಿವಾದ ಪ್ರಾರಂಭವಾಯಿತು. ಅದರ ಪರಿಣಾಮ ವಾಗಿ ಭಾಯಿ ಪರಮಾನಂದ, ನಾರಂಗ್ ಮೊದಲಾದ ಸತ್ಯ ನಿಷ್ಠರಾದ ಸುಧಾರಕರು ಮಂಡಲದಿಂದ ಹೊರಬರಬೇಕಾಯಿತು. ಆದರೂ ಅಂಬೇಡ್ಕರರೇ ಅಧ್ಯಕ್ಷರಾಗಬೇಕೆಂದು ಮಂಡಲ ಪಟ್ಟು ಹಿಡಿಯಿತು. ಮುಂಬಯಿಗೆ ಬಂದಿದ್ದ ಹರ್ ಭಗವಾನ್ ಎಂಬ ಮಂಡಲದ ಸದಸ್ಯರು ಡಾಕ್ಟರರ ಭಾಷಣದ ಮೇಲೆ ಕಣ್ಣಾಡಿಸಿದರು. ಅದನ್ನು ತೆಗೆದುಕೊಂಡು ಲಾಹೋರಿಗೆ ಹಿಂದಿರುಗಿದರು. ಮೂರನೆಯ ದಿನವೇ ಅಂಬೇಡ್ಕರರು ಸಿಖ್ ಸಮ್ಮೇಲನದಲ್ಲಿ ಭಾಗವಹಿಸುವ ಸಲುವಾಗಿ ಅಮೃತಸರಕ್ಕೆ ಹೋದರು. ಆ ಸುದ್ದಿ ಮಂಡಲದ ಮಂಡೆಯಲ್ಲಿ ಬಿರುಗಾಳಿಯೆಬ್ಬಿಸಿತು. ಜತೆಗೆ ಅಂಬೇಡ್ಕರರು ತಮ್ಮ ಅಧ್ಯಕ್ಷ ಭಾಷಣದ ಹಸ್ತ ಪ್ರತಿಯಲ್ಲಿ ವೇದಗಳ ಬಗ್ಗೆ ಮಾಡಿದ್ದ ಟೀಕೆ ಅವರ ತಲೆಯ ಕಾವು ಹೆಚ್ಚಿಸಿತು. ಆ ಭಾಗವನ್ನಳಿಸಿ ಅಚ್ಚು ಹಾಕಿಸುವುದಾಗಿ ಕಾರ್ಯದರ್ಶಿ ಅಂಬೇಡ್ಕರ ರಿಗೆ ಪತ್ರ ಬರೆದರು.

ಅಂಬೇಡ್ಕರರು 27–4–1936ರಂದು ಹರ್ ಭಗವಾನರಿಗೆ ಬರೆದ ಪ್ರತ್ಯುತ್ತರದ ಸಾರಾಂಶವಿದು :

ಪ್ರಿಯ ಹರ್ ಭಗವನ್,

22ರಂದು ನೀವು ಬರೆದಪತ್ರ ತಲುಪಿದೆ. ನನ್ನ ಭಾಷಣದಲ್ಲಿ ನಿರ್ದಿಷ್ಟ ಭಾಗಗಳನ್ನು ತೆಗೆಯಲಾಗದಿದ್ದರೆ ಸಮ್ಮೇಲನವನ್ನು ಮುಂದೂಡುವುದಾಗಿ ಸ್ವಾಗತ ಸಮಿತಿಯ ಪರವಾಗಿ ತಿಳಿಸಿದ್ದೀರಿ. ಅದರಿಂದ ನನಗೆ ವ್ಯಥೆಯಾಗಿದೆ. ಸಮ್ಮೇಲನವನ್ನು ರದ್ದುಗೊಳಿಸುವುದೇ ಮೇಲು. ಅಧ್ಯಕ್ಷ ಪದವಿಯ ಗೌರವ ಕ್ಕಾಗಿ ಅಧ್ಯಕ್ಷರ ಭಾಷಣ ಸ್ವಾತಂತ್ರ್ಯವನ್ನು ಕಳೆದುಕೊಳ್ಳಲಾರೆ. ನಾನು ಸಂತ್‌ರಾಮ ಅವರಿಗೆ ಬರೆದಿದ್ದ ಪತ್ರವೊಂದರಲ್ಲಿ ಸ್ಪಷ್ಟವಾಗಿ ತಿಳಿಸಿದ್ದೆ. ಜಾತೀಯತೆಗೆ ತಳಹದಿಯಾದ ಧಾರ್ಮಿಕ ಭಾವನೆಗಳನ್ನು ನಿರ್ಮೂಲ ಮಾಡ ದಿದ್ದರೆ ಜಾತಿವಿನಾಶ ಸಾಧ್ಯವಿಲ್ಲವೆಂದು. ಅಂತರ್ಜಾತೀಯ ವಿವಾಹಾಚರಣೆ ಯಾಗಲೀ, ಸಹಪಂಕ್ತಿ ಭೋಜನವಾಗಲೀ ಜಾತಿವಿನಾಶಕ್ಕೆ ದಾರಿಯಾಗಲಾರ

ದೆಂದು. ಈ ಭಾವನೆಗಳನ್ನೇ ನನ್ನ ಭಾಷಣದಲ್ಲಿ ವಿಸ್ತರಿಸಲಾಗಿದೆ. ಅವು ಅಸಂಗತವೆಂದೂ ಅನುಚಿತವೆಂದೂ ನೀವು ಬರೆದಿದ್ದೀರಿ. ಅವು ಅತ್ಯುಚಿತ ಮಾತ್ರವಲ್ಲ, ಬಹು ಮುಖ್ಯವೂ ಅಹುದು. ನನ್ನ ವಿಶ್ಲೇಷಣೆ ನಿಮಗೊಪ್ಪಿಗೆಯಾಗಲಿಲ್ಲವೆಂದು ಹೇಳಬಹುದೇ ಹೊರತು, ನನ್ನ ಅಭಿಪ್ರಾಯ ಸ್ವಾತಂತ್ರ್ಯವನ್ನು ಮೊಟಕುಮಾಡುವ ಅಧಿಕಾರ ನಿಮಗಿಲ್ಲ.

ಭಾಷಣ ದೀರ್ಘವಾಯಿತೆಂದು ನೀವು ದೂರಿದ್ದೀರಿ. ಜಾತಿ ಸಮಸ್ಯೆಯನ್ನು ಸಮಗ್ರವಾಗಿ ಸಮರ್ಪಕವಾಗಿ ಚರ್ಚಿಸಬೇಕೆಂದು ಸೂಚಿಸಿದ್ದು ನಿಮ್ಮ ಮಂಡಲ. ಅಷ್ಟೇ ಅಲ್ಲ, ನಿಮ್ಮ ಸಂಸ್ಥೆ ನನಗೊಂದು ಪ್ರಶ್ನಾವಳಿ ಕಳಿಸಿ, ನನ್ನ ಭಾಷಣದಲ್ಲಿಯೇ ಉತ್ತರಗಳನ್ನು ಸೇರಿಸಬೇಕೆಂದು ತಿಳಿಸಿತ್ತು. ಆದ್ದರಿಂದ ಇದು ಉದ್ದವಾಗಿದ್ದರೆ ತಪ್ಪು ನಿಮ್ಮದು.

ನಿಮ್ಮವರ್ಗೀಯರ ಮತಾಂತರ ವಿಷಯದಲ್ಲಿ ನಾನು ಚಕಾರವೆತ್ತುವುದಿಲ್ಲವೆಂದು ನೀವು ನನ್ನನ್ನು ಭೇಟಿಮಾಡಿದಾಗ ವಾಗ್ದಾನ ಮಾಡಿದ್ದೆ. ನಾನದನ್ನು ಮುರಿದಿಲ್ಲ. 'ನಿಮ್ಮೊಡನೆ ನಾನಿರುವುದಿಲ್ಲ' ಎಂಬೊಂದು ಪುಟ್ಟ ವಾಕ್ಯ ಮಾತ್ರ ಅನಿವಾರ್ಯವಾಗಿ ಅದರೊಳಗೆ ಸೇರಿಕೊಂಡಿದೆ. ಅದು ಸರಿಯಲ್ಲವೆಂದು ತೋರಿಸಿದ್ದೀರಿ. ಅಧ್ಯಕ್ಷ ಪದವಿ ದೊಡ್ಡದೆಂದು ನಾನು ಭಾವಿಸಿಲ್ಲ. ಆ ಪದವಿಗಾಗಿ ನನ್ನ ಸಂಕಲ್ಪವನ್ನೂ ನನ್ನ ಧರ್ಮವನ್ನೂ ತೊರೆಯಲು ಸಿದ್ಧನಾಗಿಲ್ಲ.

ಹಸ್ತಪ್ರತಿಯಲ್ಲಿಲ್ಲದ ಕೆಲವು ಸಂಗತಿಗಳು ಮುದ್ರಿತ ಪ್ರತಿಯಲ್ಲಿವೆಯೆಂದು ಉದ್ಗಾರವೆತ್ತಿದ್ದೀರಿ. ಭಾಷೆ ವ್ಯತ್ಯಾಸವಾಗಿರಬಹುದೇ ಹೊರತು, ಭಾವನೆಗಳಲ್ಲ. ನನ್ನ ಮನಸ್ಸಿನಲ್ಲಿದ್ದದ್ದನ್ನು ಹೇಳಲೇಬೇಕು. ನಾನೊಂದು ಅರ್ಧ ವಿರಾಮ ಸಹ ಬದಲಾಯಿಸಲಾರೆನೆಂದು ನಿಮಗೆ ಮೊದಲೇ ತಿಳಿಸಿದ್ದೆ. ನನ್ನ ಭಾಷಣದಲ್ಲಿ ಮೂಡುವ ಅಭಿಪ್ರಾಯಗಳಿಗೆ ನಾನು ಹೊಣೆಯೇ ಹೊರತು ಮಂಡಲವಲ್ಲವೆಂಬುದನ್ನೂ ಖಚಿತಪಡಿಸಿದ್ದೇನೆ. ಅವುಗಳನ್ನು ಖಂಡಿಸಿ ಸಮ್ಮೇಲನ ನಿರ್ಣಯಮಾಡಬಹುದಾದರೂ ನಾನು ಆಕ್ಷೇಪವೆತ್ತುವುದಿಲ್ಲ, ಅಂಜುವುದಿಲ್ಲ. ನನ್ನ ಭಾಷಣವನ್ನು ಉದ್ಘಾಟನಾ ಭಾಷಣವೆಂದು ತಿಳಿದು, ಬೇರೆಯವರಿಂದ ಅಧ್ಯಕ್ಷ ಭಾಷಣ ಮಾಡಿಸುವಂತೆಯೂ ನಿಮಗೆ ಸಲಹೆ ಕೊಟ್ಟಿದ್ದೆ. ಆಗ ನನ್ನ ಭಾಷಣದ ಬಗ್ಗೆ ಪ್ರತಿಕ್ರಿಯೆ ವ್ಯಕ್ತಪಡಿಸಲು

ಸಾಕಷ್ಟು ಅವಕಾಶ ಸಿಗುತ್ತಿತ್ತು. ಮುಂಚೆಯೇ ನಿಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಿದ್ದರೆ ಮುದ್ರಣದ ಖರ್ಚು ಉಳಿಯುತ್ತಿತ್ತು.

ಸಿಖ್ ಪ್ರಚಾರ ಸಮ್ಮೇಲನದಲ್ಲಿ ನಾನು ಭಾಗವಹಿಸಿದ್ದೇ ಇಷ್ಟೆಲ್ಲ ರಾದ್ಧಾಂತಕ್ಕೆ ಕಾರಣವಾಗಿದೆಯೆಂಬುದನ್ನು ಬಲ್ಲೆ. ನನ್ನ ಭಾಷಣದ ಪೂರ್ಣ ಪಾಠ ವನ್ನು ವಾಚಿಸಬಹುದೆಂದು ನಿಮ್ಮ ಸಮಿತಿ ತೀರ್ಮಾನ ಮಾಡುವುದಾದರೂ, ನಾನು ಆ ಕಡೆ ಮುಖಹಾಕಲು ಸಿದ್ಧನಿಲ್ಲ. ಆದ್ದರಿಂದ ದಯೆಯಿಟ್ಟು ಸಮ್ಮೇ ಲನವನ್ನು ರದ್ದುಪಡಿಸಿ. ನೀವು ಹೇಳಿರುವಂತೆ ನನಗೆ ಶ್ರಮವಾಗಿದೆ ನಿಜ. ಆ ಶ್ರಮದಿಂದ ನನಗೆ ಲಾಭವಾಗಿದೆ. ಒಂದೇ ಒಂದು ವ್ಯಥೆಯೆಂದರೆ ಆರೋಗ್ಯವಿಲ್ಲದಾಗ ದುಡಿದು, ಆಯಾಸ ಹೆಚ್ಚಿಸಿಕೊಂಡದ್ದು.

ಇಂತು ನಿಮ್ಮವ,
ಬಿ. ಆರ್. ಅಂಬೇಡ್ಕರ್

ಸವರ್ಣ ಹಿಂದೂಗಳ ಕುತ್ಸಿತ ವರ್ತನೆಯಿಂದಾಗಿ ಅಂಬೇಡ್ಕರರ ಭಾಷಣ ನಿಂತುಹೋಯಿತು. ಆದರೆ ಅದರ ಪ್ರಕಟನೆಯನ್ನು ಯಾರೂ ತಡೆಯುವಂತಿರಲಿಲ್ಲ. ಅದರ ಪ್ರಭಾವ ಜನಮನವನ್ನು ಮುಟ್ಟದಿರಲಿಲ್ಲ. ಅದರಲ್ಲಿ ನಿವಿಷ್ಟಗೊಂಡಿದ್ದ ಭಾವನೆಗಳು ನಾಡನ್ನೆಲ್ಲ ವ್ಯಾಪಿಸಲು ಬಹು ದಿನ ಹಿಡಿಯಲಿಲ್ಲ. ಲೇಖಕರ ಶ್ರಮ ವ್ಯರ್ಥವಾಗಲಿಲ್ಲ ; ಸವರ್ಣೀಯರ ಅಲ್ಪ ತನ ಪ್ರಚುರಗೊಂಡಿತು. ಬಾಬಾ ಸಾಹೇಬರ ಗರುಡ ದೃಷ್ಟಿಗೆ, ವಿಶ್ಲೇಷಣ ಸಾಮರ್ಥ್ಯಕ್ಕೆ ಮತ್ತು ವಿದ್ವತ್ತಿಗೆ ಈ ಗ್ರಂಥ ಉಜ್ವಲ ನಿದರ್ಶನವಾಗಿದೆ. ಅಂತ್ಯಜರು ಪಂಡಿತರಾದರೂ ಗುರುಸ್ಥಾನಕ್ಕೆ ಯೋಗ್ಯರಲ್ಲವೆಂದು ರಾಮ ದಾಸರು ಹೇಳಿರುವಾಗ, ಹಿಂದೂಗಳು ತಮ್ಮ ಬಗ್ಗೆ ಜುಗುಪ್ಸೆ ಹೊಂದಿರುವಾಗ, ಇಂಡಿಯಾದಲ್ಲಿ ಸಮಾಜ ಸುಧಾರಣೆ ಸ್ನೇಹಿತರಿಗಿಂತ ಹೆಚ್ಚಾಗಿ ಖಂಡನಕಾರ ರನ್ನು ಸೃಷ್ಟಿಸುವಾಗ, ಸಮ್ಮೇಲನಕ್ಕೆ ತಮ್ಮನ್ನು ಆಹ್ವಾನಿಸಿದ್ದೇ ವಿಚಿತ್ರ ವೆಂದು ಅವರು ಪ್ರಾರಂಭದಲ್ಲಿ ಮನಬಿಚ್ಚಿ ಮಾತಾಡುತ್ತಾರೆ. ಪ್ರಾಚೀನ ರೋಮ್ ಚಕ್ರಾಧಿಪತ್ಯದಲ್ಲಿ ಚಾಲ್ತಿಯಲ್ಲಿದ್ದ ಸಾಮಾಜಿಕ ವರ್ಗಭೇದಗಳನ್ನು ವಿವರಿಸಿ, ಆ ಭೇದಗಳಿಗೂ ಇಂಡಿಯಾದ ಜಾತಿಭೇದಗಳಿಗೂ ಇರುವ ವ್ಯತ್ಯಾಸಗಳನ್ನು ಉಲ್ಲೇಖಿಸಿ, ರಾಜಕೀಯ ಕ್ರಾಂತಿಯ ಸಫಲತೆಗೆ ಸಾಮಾಜಿಕ

ಧಾರ್ಮಿಕ ಕ್ರಾಂತಿ ಅನಿವಾರ್ಯವೆಂಬುದನ್ನು ಚಂದ್ರಗುಪ್ತ ಮಹಮ್ಮದ್ ಲೂಥರ್ ಮೊದಲಾದವರ ಕಾಲದ ಚಾರಿತ್ರಿಕ ಸಂಗತಿಗಳಿಂದ ಸಮರ್ಥಿಸುತ್ತಾರೆ. ಮತ, ಸಾಮಾಜಿಕ ಸ್ಥಾನ ಮತ್ತು ಸಂಪತ್ತುಗಳು ಅಧಿಕಾರದ ಗಣಿಗಳಾದ್ದರಿಂದ, ಆ ಕ್ಷೇತ್ರಗಳಲ್ಲಿ ಕ್ರಾಂತಿಯಾಗದ ಹೊರತು ಸಮಾನತೆಯಾಗಲೀ ಮಾನವೀಯತೆಯಾಗಲೀ ವಿಜೃಂಭಿಸಲಾರವೆಂಬುದು ಅವರ ಖಚಿತಾಭಿಪ್ರಾಯ.

ಜಟ್‌ಪಟ್ ತೊಡಕ್ ಹಗರಣದನಂತರ ಹಿಂದೂ ಧರ್ಮದ ಬಗೆಗಿದ್ದ ಅಂಬೇಡ್ಕರರ ವಿಶ್ವಾಸ ಸಂಪೂರ್ಣವಾಗಿ ಬತ್ತಿಹೋಯಿತು. ಪಟ್ಟಬದ್ಧ ಹಿತಾಸಕ್ತರಾದ ಹಠವಾದೀ ಸವರ್ಣೀಯರ ಮನಸ್ಸನ್ನು ತಿದ್ದಲಾಗದೆಂಬ ಅವರ ಭಾವನೆ ದೃಢವಾಯಿತು. ಮತಾಂತರವೊಂದೇ ತಮ್ಮ ಮುಂದಿದ್ದ ಮಾರ್ಗವೆಂಬುದು ಸ್ಪಷ್ಟವಾಯಿತು. ಮಹರ್ ಜನರ ಮನೋಗತವನ್ನರಿಯುವ ಮತ್ತು ಅವರ ಬೆಂಬಲಗಳಿಸುವ ಸಲುವಾಗಿ ಮೇ ತಿಂಗಳ ಕೊನೆಯಲ್ಲಿ ಸಮ್ಮೇಲನ ಕರೆದರು. ಅದು ಸಮಾವೇಶಗೊಂಡದ್ದು ದಾದರ್‌ನಲ್ಲಿ. "ಹಿಂದೂ ಮತದಿಂದ ಪಾರಾಗದೆ ನಾವು ನಾಗರಿಕ ಜೀವನ ನಡೆಸಲಾರೆವು. ಅದರಿಂದ ನಮಗಾಗುವ ನಷ್ಟವೇನು? ನಮ್ಮದು ಮೇಲ್ನೋಟಕ್ಕೆ ಜಾತೀಯ ಹೋರಾಟವೆಂದು ತೋರಿದರೂ ಅದು ವಾಸ್ತವವಾಗಿ ವರ್ಗ ಸಂಘರ್ಷವಾಗಿದೆ. ಉಳ್ಳವರ ಮತ್ತು ಇಲ್ಲದವರ ನಡುವಣ ಹೋರಾಟವಾಗಿದೆ." ಎಂದವರು ವಸ್ತುಸ್ಥಿತಿಯನ್ನು ವಿವರಿಸಿದರು. ಅವರು ತಮ್ಮ ಭಾಷಣವನ್ನು ಮುಂದುವರಿಸಿ ಅಸ್ಪೃಶ್ಯತೆಯನ್ನು ಪೋಷಿಸುವ, ದಲಿತರನ್ನು ಶೋಷಿಸುವ ಧರ್ಮ ಧರ್ಮವಲ್ಲ. ಜಾತೀಯತೆಯ ಸೆರೆಯಿಂದ ಬಿಡಿಸಿಕೊಳ್ಳಲಾರದ ಸಮಾಜ ಸುಧಾರಕರ ಪ್ರಾಮಾಣಿಕತೆ ಸಂಶಯಾಸ್ಪದವಾಗಿದೆ. ನಿಮ್ನವರ್ಗೀಯರ ಪರವಾಗಿ ಸವರ್ಣೀಯರ ವಿರೋಧವಾಗಿ ಹೋರಾಡುವ ಮನಸ್ಸು ಗಾಂಧಿಯವರಿಗಿಲ್ಲ. ಮತಾಂತರದಿಂದ ನಮ್ಮ ರಾಜಕೀಯ ಜೀವನದಲ್ಲಿ ಏರುಪೇರುಗಳಾಗುತ್ತವೆನ್ನುವುದು ತಪ್ಪು. ನಾನು ಹಿಂದೂಮತ ತ್ಯಜಿಸಲು ಸಿದ್ಧನಾಗಿದ್ದೇನೆ ಈ ನನ್ನ ಮತಾಂತರದ ಹಿನ್ನೆಲೆಯಲ್ಲಿ ಸ್ವಾರ್ಥ ಎಳ್ಳಿನಿತೂ ಇಲ್ಲ. ಅದು ಇದ್ದರೆ, ಇದ್ದ ಕಡೆಯೇ ಸುಲಭವಾಗಿ ಪೂರೈಸಿಕೊಳ್ಳುತ್ತಿದ್ದೆ. ಮನುಜನಿಗಾಗಿ, ಮತವೇ ಹೊರತು. ಮತಕ್ಕಾಗಿ ಮನುಜನಿರಬೇಕಾಗಿಲ್ಲ. ನಾವು ಮಾನವರೆಂದು ಗಣಿಸದ ಮತದಿಂದಾಗಬೇಕಾದ್ದೇನು? ಅಜ್ಞಾನಿಗಳು ಅಜ್ಞಾನಿಗಳಾಗಿಯೇ ದರಿದ್ರರು ದರಿದ್ರರಾಗಿಯೇ ಉಳಿಯಬೇಕೆನ್ನುವ ಧರ್ಮ ಧರ್ಮವಲ್ಲ." ಎಂಬು

ದಾಗಿ ತಮ್ಮ ಅಭಿಪ್ರಾಯಗಳನ್ನು ತರ್ಕಬದ್ಧವಾಗಿ ನಿರೂಪಿಸಿದರು. ಇಡೀ ಮಹರ್ ಜನಾಂಗ ಮತಾಂತರಕ್ಕೆ ಸಿದ್ಧವಾಗಬೇಕೆಂದೂ, ಹಿಂದೂ ದೇವಾಲಯಗಳಿಗೆ ಹೋಗಕೂಡದೆಂದೂ, ಹಿಂದೂ ಹಬ್ಬಗಳನ್ನು ಆಚರಿಸಕೂಡದೆಂದೂ ಸಮ್ಮೇಲನ ನಿರ್ಣಯವನ್ನಂಗೀಕರಿಸಿತು.

ಮತ್ತೆ ಅನ್ಯಮತೀಯ ಗುರುಗಳು ಮತ್ತು ಪ್ರಚಾರಕರು ಅಂಬೇಡ್ಕರರ ಬೆನ್ನು ಹತ್ತಿದರು. ಭೋಜನಕೂಟ ಸಮಾರಂಭಗಳ ನೆಪವೊಡ್ಡಿ ತಂತಮ್ಮ ಮಠ ಗುರುದ್ವಾರ ಮಸೀದಿಗಳಿಗೆ ಕರೆದಾಗ ಅವರು ವಿಧಿಯಿಲ್ಲದೆ ಹೋಗಬೇಕಾಗುತ್ತಿತ್ತು. ಅಂಥ ಸಂದರ್ಭದಲ್ಲಿ ದೇಹಾಯಾಸವೆಂದೋ ಗಂಟಲು ನೋವೆಂದೋ ಹೇಳಿ ಮಾತಾಡದೆಯೇ ಹೊರಬರುತ್ತಿದ್ದರು. ಒಮ್ಮೆ ಅವರ ಮಗನಿಗೂ ಅಣ್ಣನ ಮಗನಿಗೂ ಅಮೃತಸರದ ಗುರುದ್ವಾರದಿಂದ ಕರೆ ಬಂದಿತ್ತು. ಅವರಲ್ಲಿಗೆ ಹೋದಾಗ, ಒಂದೂವರೆ ತಿಂಗಳು ಕಾಲ ಸಿಖ್ಖರು ಅವರನ್ನು ತಮ್ಮ ಬಳಿಯಿರಿಸಿಕೊಂಡು, ರಾಜಾತಿಥ್ಯವನ್ನು ನೀಡಿ, ಕಳಿಸಿಕೊಟ್ಟರು. ಈ ಪ್ರಕರಣದಿಂದಾಗಿ ಅಂಬೇಡ್ಕರರು ಸಿಖ್ಖಮತ ಸೇರಬಹುದೆಂದು ಹಿಂದುಗಳು ಊಹಿಸಿಕೊಂಡರು, ಸಿಖ್ಖರು ಆಸೆಬುರುಕಿಗಳಾದರು.

ಅಸ್ಪೃಶ್ಯರು ಇಸ್ಲಾಂ ಅಥವಾ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿದರೆ ಅವರು ಹಿಂದೂ ಸಂಸ್ಕೃತಿಯಿಂದ ಪ್ರತ್ಯೇಕಗೊಳ್ಳುತ್ತಾರೆಂದೂ, ಸಿಖ್‌ಮತ ಸೇರಿದರೆ ಹಿಂದೂ ಸಂಸ್ಕೃತಿಯ ಕಕ್ಷೆಯಲ್ಲುಳಿಯುತ್ತಾರೆಂದೂ ಅಂಬೇಡ್ಕರರು ಮತ್ತೊಮ್ಮೆ ತಮ್ಮ ನಿಲವನ್ನು ಸ್ಪಷ್ಟಪಡಿಸಿದರು. ಕ್ರಿಶ್ಚಿಯನ್ ಮತ್ತು ಮುಸ್ಲಿಮರು ಭಾರತದ ನೆಲದಲ್ಲಿ ನಿಂತಿದ್ದರೂ ಅವರ ದೃಷ್ಟಿಯೆಲ್ಲ ಪಶ್ಚಿಮದ ಕಡೆಗಿದೆ : ನಿಮ್ಮ ಜನರು ಮುಸ್ಲಿಮ್ ಮತಕ್ಕೆ ದಾಖಲಾದರೆ ಹಿಂದೂ ಭಾರತಕ್ಕೆ ಅಪಾಯ ಒದಗುತ್ತದೆ ; ಅವರು ಕ್ರಿಶ್ಚಿಯನ್ ಮತ ಸೇರಿದರೆ ಭಾರತದ ಮೇಲೆ ಇಂಗ್ಲೆಂಡಿನ ಹಿಡಿತ ಬಿಗಿಯಾಗುತ್ತದೆ ; ಅವರು ಸಿಖ್‌ಮತಕ್ಕಂಟಿಕೊಂಡರೆ ನಾಡಿನ ಭವಿಷ್ಯ ಉಜ್ವಲವಾಗುತ್ತದೆ ; ಹಿಂದೂ ಧರ್ಮದ ಒಂದು ಶಾಖೆ ಸಿಖ್‌ಮತ. ಅವರ ಗುರುಗಳೂ ಅವರ ಪವಿತ್ರ ಗ್ರಂಥಗಳೂ ಇಲ್ಲಿಯೇ ಉಗಮಗೊಂಡದ್ದು. ಹಿಂದೂಗಳಿಗೆಂತೊ ಅಂತೆಯೇ ಅವರಿಗೂ ಭಾರತ ಭೂಮಿ ಪವಿತ್ರವಾದದ್ದು. ಅಂಬೇಡ್ಕರರ ಈ ವಾದದಲ್ಲಿ ಅವರ ಪ್ರಾಮಾಣಿಕತೆಯೂ, ಔದಾರ್ಯವೂ, ದೇಶಾಭಿಮಾನವೂ ಹೊನಲಾಗಿ ಹರಿಯುತ್ತವೆ.

ಅವರ 'ಜಾತಿವಿನಾಶ' ಭಾಷಣ ಇಡೀ ದೇಶದ ಗಮನವನ್ನು ಸೆಳೆದಿತ್ತು; ಕೆಲವರು ಅದನ್ನು ಮೆಚ್ಚಿದರು, ಮತ್ತೆ ಕೆಲವರು ಅದನ್ನು ಖಂಡತುಂಡವಾಗಿ ಖಂಡಿಸಿದರು. ಸಾವರ್ಕರ್ ಆ ಭಾಷಣದ ಬಹು ಭಾಗವನ್ನೊಪ್ಪಿಕೊಂಡರು. ಗಾಂಧಿಯವರು "ಡಾ॥ ಅಂಬೇಡ್ಕರರ ಆಪಾದನೆ" ಎಂಬ ಶೀರ್ಷಿಕೆಯಲ್ಲಿ ಎರಡು ಲೇಖನ ಬರೆದು, ಅವರ ಅಭಿಪ್ರಾಯಗಳನ್ನು ಖಂಡಿಸಿದರು. 'ಮಹಾತ್ಮರಿಗೆ ಉತ್ತರ' ಎಂಬ ತಮ್ಮ ಸುದೀರ್ಘ ಲೇಖನದಲ್ಲಿ ಅಂಬೇಡ್ಕರರು ಗಾಂಧೀಜಿಯವರ ವಾದದಲ್ಲಿ ತೋರುವ ದೋಷಗಳನ್ನು ಬಯಲಿಗೆಳೆದಿದ್ದಾರೆ.

"ಸಾಮಾಜಿಕ ನೀತಿಸೂತ್ರಗಳನ್ನು ಗಮನಿಸಿದಾಗ ಒಂದು ಜನಾಂಗದ ಮತ್ತು ಅದರ ಧರ್ಮದ ಮೌಲ್ಯಗಳನ್ನರಿಯಬಹುದಾಗಿದೆ. ಜಗತ್ತಿನಲ್ಲಿ ಲೋಪದೋಷಗಳಿವೆಯೆಂಬುದನ್ನು ಬಲ್ಲೆ. ಅವುಗಳನ್ನು ಸಹಿಸಿಕೊಂಡು ಮಾನವ ಬಾಳು ಸಾಗಿಸಬೇಕಾಗುತ್ತದೆಯೆಂಬುದನ್ನೂ ಬಲ್ಲೆ. ಆದರೆ ಮಿಥ್ಯಾ ದರ್ಶಗಳನ್ನು ಪೋಷಿಸುವ ಅಥವಾ ಶುದ್ಧಾದರ್ಶಗಳನ್ನು ಹೊಂದಿದ್ದು, ಅವಕ್ಕನುಗುಣವಾಗಿ ಸಾಮಾಜಿಕ ಜೀವನವನ್ನು ಹೊಂದಿಸಿಕೊಳ್ಳಲಾರದ ಸಮಾಜದಲ್ಲಿ ಬದುಕು ಸಾಗಿಸುವುದು ಕಷ್ಟವಾಗುತ್ತದೆ. ಹಿಂದುಗಳ ಅಥವಾ ಹಿಂದೂ ಧರ್ಮದ ನ್ಯೂನತೆಗಳ ಬಗೆಗೆ ನಾನು ಕಲಹವಾಡುತ್ತಿಲ್ಲ : ಅನೈತಿಕ ಸಾಮಾಜಿಕ ಜೀವನಕ್ಕೆ ನೆಲೆಯಾಗಿರುವ ಮತ್ತು ಮಿಥ್ಯಾದರ್ಶಗಳನ್ನು ಪೋಷಿಸುವ ಹಿಂದೂ ಧರ್ಮ ನನಗೆ ಜುಗುಪ್ಸೆಯುಂಟುಮಾಡಿದೆ. ಹಿಂದೂ ಸಮಾಜ ಉಳಿಯಬೇಕಾದರೆ ಶೀಘ್ರ ನೈತಿಕ ಪುನರುಜ್ಜೀವನ ಅತ್ಯಗತ್ಯ. ಅದಕ್ಕೆ ಬೌದ್ಧಿಕ ಸ್ವಾತಂತ್ರ್ಯದಿಂದ ಮಾತ್ರವೇ ಸಂಘಟಿಸುವಂಥ ಪುನರುಜ್ಜೀವನದ ಪೂರ್ವಸಿದ್ಧತೆ ಅನಿವಾರ್ಯ. ಹಿಂದೂ ನಾಯಕರಲ್ಲಿ ಇಂಥ ಸಾಮರ್ಥ್ಯವೇ ಗೈರುಹಾಜರಿ. ಅದಿದ್ದರೆ ಅವರು ಗತಕಾಲದ ಜೀರ್ಣ ಶಾಸನಗಳನ್ನೆಂದೋ ವಿಸ್ಮೃತಿಯ ಸಮಾಧಿಯಲ್ಲಿ ಹೂತುಬಿಡುತ್ತಿದ್ದರು. ಮಹಾತ್ಮರು ಸ್ಥಿತಿಪಾಲಕರೆ ಹೊರತು ಸ್ಥಿತಿಪರಿವರ್ತಕರಲ್ಲ. ಅವರ ದೃಷ್ಟಿಯಲ್ಲಿ ಪುರಾತನವಾದುದೆಲ್ಲವೂ ಪವಿತ್ರ. ಅವರ ವಿರುದ್ಧವಾಗಿ ಅವರು ಮಾತಾಡಿದ್ದಾದರೆ ನಾಯಕತ್ವ ಕಳೆದುಕೊಳ್ಳುವ ಸಂಭವವೂ ಉಂಟು. ಆದ್ದರಿಂದ ನನಗೆ ಅವರ ಬಗ್ಗೆ ಪೂರ್ಣ ಸಹಾನುಭೂತಿಯಿದೆ. ಎಷ್ಟು ಜನ ಬ್ರಾಹ್ಮಣರು ತಮ್ಮ ಪೂರ್ವಜರ ವೃತ್ತಿಯನ್ನುಳಿಸಿಕೊಂಡಿದ್ದಾರೆ? ಅವರಲ್ಲಿ ಚಪ್ಪಲಿ ಮಾರುವವರಿಲ್ಲವೆ? ಹೋಗಲಿ, ಅವರಾದರೂ ಜಾತೀಯತೆಯ ವಿರುದ್ಧ ಹೋರಾಡು

ತ್ತಾರೆಯೇ? ಶಾಸ್ತ್ರಗಳನ್ನು ನಿಷೇಧಿಸುತ್ತಾರೆಯೆ? ಅಂಥ ಪ್ರಾಮಾಣಿಕ ಬ್ರಾಹ್ಮಣ ಅಲ್ಲೊಬ್ಬ ಇಲ್ಲೊಬ್ಬ ಸಿಗಬಹುದು. ಆದರೆ ಜಾತಿ ನಿಯಮಗಳನ್ನು ನಿರ್ಲಕ್ಷಿಸಿ, ಶಾಸ್ತ್ರಗಳನ್ನು ಗಾಳಿಗೆ ತೂರಿ ಹೊಟ್ಟೆ ಹೊರೆದುಕೊಳ್ಳುತ್ತಿರುವ ಬ್ರಾಹ್ಮಣರೇ ಶಾಸ್ತ್ರಗಳ ಪಾವಿತ್ರ್ಯವನ್ನೂ ಜಾತಿಭೇದದ ಅನಿವಾರ್ಯತೆಯನ್ನೂ ಬೋಧಿಸುತ್ತಾರೆ. ಏಕೆ? ಜಾತಿ ವಿಮುಕ್ತರಾದ ಸಾಮಾನ್ಯಜನ ಬ್ರಾಹ್ಮಣರ ಅಧಿಕಾರ ಪ್ರತಿಷ್ಠೆಗಳಿಗೆ ಧೂಮಕೇತುವಾಗುತ್ತಾರೆ, ವಜ್ರಾಯುಧವಾಗುತ್ತಾರೆ. ಸಾಮಾನ್ಯ ಜನ ಮಾರ್ಗದರ್ಶನಕ್ಕಾಗಿ ಬುದ್ಧಿವಂತರ ಕಡೆಗೆ ನೋಡುತ್ತಾರೆ. ಆದರೆ ಬುದ್ಧಿವಂತರು ಅಪ್ರಾಮಾಣಿಕರಾಗಿದ್ದಾರೆ, ಇಲ್ಲವೆ ನಿರುತ್ಸುಕರಾಗಿದ್ದಾರೆ. ಅಂಥವರಿಂದ ಋಜುಮಾರ್ಗದರ್ಶನ ಸಾಧ್ಯವಿಲ್ಲ. ನಾವಿಂಥ ಮಹಾ ದುರಂತಕ್ಕೆ ಸಾಕ್ಷಿಯಾಗಿದ್ದೇವೆ."

ಅಂಬೇಡ್ಕರರ ಬುದ್ಧಿಮತ್ತೆಗೆ. ಸ್ವತಂತ್ರ ಮನೋಧರ್ಮಕ್ಕೆ, ನಿರ್ಭೀತಿಗೆ, ವಾದ ಕೌಶಲಕ್ಕೆ ಈ ಮುಕ್ತಪತ್ರ ಸಾಕ್ಷಿಯಾಗಿದೆ. ಅವರಂತೆ ಮುಕ್ತಕಂಠದಿಂದ ನಿರ್ದಾಕ್ಷಿಣ್ಯವಾಗಿ ಮಾತಾಡುತ್ತಿದ್ದ ಜನ ಅವರ ಸಮಕಾಲೀನರಲ್ಲಿ ವಿರಳವೆಂದೇ ಹೇಳಬೇಕು. ಈ ಪ್ರಕರಣದನಂತರ ಮತಾಂತರ ಚಳುವಳಿ ಚುರುಕಾಯಿತು. ಸಿಖ್ ಧರ್ಮದ ವ್ಯಾಸಂಗಕ್ಕೆಂದು 1936ರ ಸೆಪ್ಟೆಂಬರ್ ತಿಂಗಳಲ್ಲಿ ತಮ್ಮ ಹಿಂಬಾಲಕರ ಒಂದು ತಂಡವನ್ನು ಅಮೃತಸರಕ್ಕೆ ಕಳಿಸಿಕೊಟ್ಟರು. ಆ ತಂಡದ ಹದಿಮೂರು ಮಂದಿಯ ಪೈಕಿ ಯಾರೊಬ್ಬರೂ ಹೆಚ್ಚು ವಿದ್ಯಾವಂತರಾಗಿರಲಿಲ್ಲ. ಮತಾಂತರ ಚಳುವಳಿಯ ಮುಂಚೂಣಿಯ ಅಧ್ವರ್ಯುಗಳಾದದ್ದಕ್ಕಾಗಿ ಅಂಬೇಡ್ಕರರು ಅವರನ್ನು ಅಭಿನಂದಿಸಿದರು. ವ್ಯಾಸಂಗ ಮುಗಿಸಿ, ಹಿಂದಕ್ಕೆ ಬರಬೇಕೆಂದುದೇ ಅವರ ಆದೇಶವಾಗಿತ್ತು. ನಿಮ್ನ ವರ್ಗದ ಜನರಿಗಾಗಿ ಮುಂಬಯಿಯಲ್ಲೊಂದು ಕಾಲೇಜು ತೆರೆಯುವಂತೆ ಅವರು ಸಿಖ್ ಪ್ರಚಾರ ಮಂಡಲಿಯೊಡನೆ ಪತ್ರ ವ್ಯವಹಾರ ನಡೆಸುತ್ತಿದ್ದರು. ಆದರೆ ವ್ಯಾಸಂಗಕ್ಕೆಂದು ಹೋದ ತರುಣರು ಸಿಖ್ಖರಾಗಿ ಹಿಂದಿರುಗಿದರು.

# ೬. ರಾಷ್ಟ್ರನಾಯಕ

1935ರ ಇಂಡಿಯಾ ಸರ್ಕಾರದ ಕಾನೂನಿನ ಪ್ರಕಾರ ಪ್ರಾಂತೀಯ ಸ್ವಾಯತ್ತತೆ ಲಭಿಸಿ. 1937ರಲ್ಲಿ ಶಾಸನ ಸಭೆಗಳಿಗೆ ಚುನಾವಣೆಗಳು ನಡೆಯ ಬೇಕಿತ್ತು. ಸ್ವಾಯತ್ತತಾಧಿಕಾರದಿಂದಾಗಿ ಚುನಾವಣೆಗಳಲ್ಲಿ ತೀವ್ರ ಸ್ಪರ್ಧೆ ಅನಿವಾರ್ಯವಾಗಿತ್ತು. ಪ್ರತಿಯೊಂದು ಪಕ್ಷವೂ ಚುನಾವಣಾ ಕಣಕ್ಕಣಿಯಾಗು ತ್ತಿದ್ದುವು. ಅಂಬೇಡ್ಕರರು ತಮ್ಮ ಮಿತ್ರರೊಡನೆ ಸಮಾಲೋಚನೆ ನಡಸಿ 'ಸ್ವತಂತ್ರ ಕಾರ್ಮಿಕ ಪಕ್ಷ'ವನ್ನು ರಚಿಸಿದರು. ಭೂಹೀನರ, ಗುತ್ತಿಗೆದಾರರ, ಕೃಷಿಕರ ಮತ್ತು ಕಾರ್ಮಿಕರ ಹಿತಾಸಕ್ತಿಗಳನ್ನು ರಕ್ಷಿಸುವುದೇ ಆ ಪಕ್ಷದ ಮುಖ್ಯ ಧ್ಯೇಯವಾಗಿತ್ತು. ಧ್ಯೇಯ ಸಾಧನೆಗಾಗಿ ಕಾರ್ಯಕ್ರಮಗಳನ್ನು ರೂಪಿಸಿ ಕೊಂಡಿತು. ಭೂಮಿಯ ವಿಚ್ಛಿದ್ರೀಕರಣ ಮತ್ತು ಜನಸಾಂದ್ರತೆ ಗ್ರಾಮೀಣ ದಾರಿದ್ರ್ಯಕ್ಕೆ ಕಾರಣವೆಂದೂ, ಕೈಗಾರಿಕೀಕರಣದ ಮೂಲಕ ಹೆಚ್ಚುವರಿ ಜನರಿಗೆ ಉದ್ಯೋಗ ಒದಗಿಸಬೇಕೆಂದೂ, ಭೂಮಾಲೀಕರ ಕಿರುಕುಳದಿಂದ ಗುತ್ತಿಗೆಗಾರ ರನ್ನು ಪಾರುಗಾಣಿಸುವ ಸಲುವಾಗಿಯೂ, ಗಿರಣಿ ರಾಜರ ಸುಲಿಗೆ ಶೋಷಣೆ ಗಳಿಂದ ಕಾರ್ಮಿಕರನ್ನು ರಕ್ಷಿಸುವ ಸಲುವಾಗಿಯೂ ಪರಿಣಾಮಕಾರಿಯಾದ ಶಾಸನಗಳನ್ನು ರಚಿಸಬೇಕೆಂದೂ, ನಗರಗಳಲ್ಲಿ ವಾಸಿಸುವ ಮಧ್ಯಮವರ್ಗದ ಜನರಿಗೆ ಮನೆಮಾಲೀಕರಿಂದ ತೊಂದರೆಯಾಗದಂತೆ ರಕ್ಷಣೆನೀಡಬೆ ಕೆಂದೂ ಪಕ್ಷ ತನ್ನ ಪ್ರಸಿದ್ಧ ಪತ್ರಿಕೆಯಲ್ಲಿ ಕಾರ್ಯಕ್ರಮಗಳನ್ನು ಪ್ರಕಟಿಸಿತು. ಗ್ರಾಮಾಭ್ಯು ದಯ ಯೋಜನೆ ಮತ್ತು ಸಮಾಜ ಸುಧಾರಣೆ ಆ ಕಾರ್ಯಕ್ರಮದಲ್ಲಿ ಸೇರ್ಪಡೆಗೊಂಡಿದ್ದುವು. ಈ ಪ್ರಣಾಳಿಕೆ ಅನೇಕರ ಮೆಚ್ಚುಗೆಯನ್ನು ಗಳಿಸಿತು.

ರಾಷ್ಟ್ರ ಭವಿಷ್ಯ ನಿರ್ಮಾಣದಲ್ಲಿ ಕಮ್ಯೂನಿಸಮ್ಮನ್ನು ಗಡಿಯಿಂದಾಚೆಯೇ ತಡೆಗಟ್ಟುವಲ್ಲಿ ಈ ಕಾರ್ಯಕ್ರಮ ಯಶಸ್ವಿಯಾಗುತ್ತದೆಂದು ಕೆಲವರು ಅಭಿಪ್ರಾಯಪಟ್ಟರು.

ಚುನಾವಣೆಗೆ ಸಂಬಂಧಿಸಿದ ಪೂರ್ವಸಿದ್ಧತೆಗಳನ್ನು ಪೂರೈಸಿ, ಹವಾ ಬದಲಾವಣೆಗಾಗಿ ಅಂಬೇಡ್ಕರರು 1936ನೆಯ ಇಸವಿ ನವಂಬರ್ 11ರಂದು ಜಿನೀವಾಕ್ಕೆ ಹೋದರು. ಅವರ ವಿದೇಶ ಪ್ರಯಾಣ ಅವರ ಮಿತ್ರರಿಗೂ ರಹಸ್ಯವಾಗಿತ್ತು. ಆ ಬಗ್ಗೆ ಭಾರತದಲ್ಲಿ ಅನೇಕ ಊಹಾಪೋಹಗಳು ಗಾಳಿ ಮಾತಾದುವು. ನೂತನ ರಾಜ್ಯಾಂಗದಲ್ಲಿ ನಿಮ್ನ ವರ್ಗೀಯರಿಗೆ ನೀಡಿರುವ ರಕ್ಷಣೆಗಳಿಗೆ ಅವರು ಸಿಖ್ ಮತ ಸೇರಿದ ನಂತರವೂ ಬಾಧ್ಯರಾಗಿರುವರೆ ಎಂಬ ಪ್ರಶ್ನೆ ಅವರ ಮನಸ್ಸನ್ನು ಕಲಕುತ್ತಿತ್ತಷ್ಟೆ. ಆ ಬಗ್ಗೆ ಇಂಗ್ಲೆಂಡಿನ ರಾಜ್ಯಾಂಗ ತಜ್ಞರ ಸಲಹೆ ಪಡೆಯಲಿಕ್ಕಾಗಿ ಹೋಗಿರಬಹುದೆಂಬ ಊಹೆಯೂ ಪ್ರಬಲವಾಗಿತ್ತು. ಅವರು ವಿದೇಶದಲ್ಲಿದ್ದಾಗ ಹೆಚ್ಚು ದಿನ ಕಳೆದದ್ದು ವಿಯನ್ನ ಮತ್ತು ಬರ್ಲಿನ್‌ಗಳಲ್ಲಿ. ಅವರು ಲಂಡನ್ನಿನಲ್ಲಿದ್ದದ್ದು ಒಂದೇ ಒಂದು ವಾರ. ಆಂಗ್ಲ ತರುಣಿಯೊಬ್ಬಳನ್ನು ಮದುವೆಯಾದುದಾಗಿಯೂ, ಪತ್ನೀದ್ವಯರಾಗಿ 1937ರ ಜನವರಿ ತಿಂಗಳಲ್ಲಿ ತಾಯ್ನಾಡಿಗೆ ಹಿಂದಿರುಗುವುದಾಗಿಯೂ ಅವರು ಲಂಡನ್ನಿನಲ್ಲಿದ್ದಾಗ ಮರಾಠೀ ವಾರಪತ್ರಿಕೆಯೊಂದು ಬುಡವಿಲ್ಲದ ಸುದ್ದಿಯನ್ನು ಪ್ರಕಟಿಸಿತು. ಆ ಪತ್ರಿಕೆಯ ಸಂಪಾದಕರು ಡಾಕ್ಟರ ಆತ್ಮೀಯ ಗೆಳೆಯರು. ಅಂಬೇಡ್ಕರ್ ಮುಂಬಯಿಯಲ್ಲಿ ಬಂದಿಳಿದಾಗ ಅವರ ಸ್ವಾಗತಕ್ಕಾಗಿ ಸಹಸ್ರ ಸಹಸ್ರ ಜನ ಕಾದಿದ್ದರು. ಪತ್ನೀದ್ವಯರಾಗಿ ಬರಲಿದ್ದ ತಮ್ಮ ನಾಯಕರನ್ನು ಸಂದರ್ಶಿಸುವ ಹಂಬಲದಿಂದ ಜನ ಕಿಕ್ಕಿರಿದಿದ್ದರು. ಎಲ್ಲ ಕಣ್ಣುಗಳೂ ಬಿಳಿಯ ತರುಣಿಯ ಅನ್ವೇಷಣೆಗಾಗಿ ದಿಕ್ಕುದಿಕ್ಕಿಗೆ ಚಲ್ಲವರಿದುವು. ಬಾಬಾಸಾಹೇಬರೊಬ್ಬರೇ ಕಾಣಿಸಿಕೊಂಡಾಗ ಅವರು ವಿಸ್ಮಿತರಾದರು. ಯಾರೊ ಆ ಬಗ್ಗೆ ಅವರನ್ನು ಪ್ರಶ್ನಿಸಿದಾಗ, ಅದೆಲ್ಲ ತಳಬುಡವಿಲ್ಲದ ಸುದ್ದಿಯೆಂದೂ, ಕದ್ದು ಮದುವೆಯಾಗಬೇಕಾದ ಪ್ರಸಕ್ತಿಯಿಲ್ಲವೆಂದೂ ಅವರು ನಗುನಗುತ್ತ ಉತ್ತರಿಸಿದರು. ಲಂಡನ್ನಿನಲ್ಲಿದ್ದಾಗ ಅಲ್ಲಿಯ ನಾಯಕರೊಡನೆ ರಾಜಕೀಯ ವಿಷಯಗಳನ್ನು ಕುರಿತು ಚರ್ಚಿಸಲ್ಲಿಲ್ಲವೆಂದು ಸ್ಪಷ್ಟಪಡಿಸಿದರು.

ಅಂಬೇಡ್ಕರರ ಮತಾಂತರ ಚಳುವಳಿಯಿಂದಾಗಿ ಸವರ್ಣ ಹಿಂದುಗಳ ಮನಸ್ಸು ಸೇಡಿನ ಹುತ್ತವಾಯಿತು. ಅವರಲ್ಲಿ ಸಂಯಮಶೀಲರೂ

ವಿವೇಕಿಗಳೂ ಆದ ಕೆಲವು ದೇಶಾಭಿಮಾನಿ ನಾಯಕರು ಮತಾಂತರದ ಪರಿಣಾಮವಾಗಿ ಹಿಂದೂ ಸಮಾಜಕ್ಕೊದಗಬಹುದಾದ ನಷ್ಟಗಳನ್ನು ನೆನೆದು ಚಿಂತಾಕುಲರಾದರು ; ಮಿಂಚಿಹೋದ ಮೇಲೆ ಚಿಂತಿಸಿ ಫಲವಿಲ್ಲವೆಂದು ಬಗೆದರು. ದಸರಾ ದರ್ಬಾರಿನಲ್ಲಿ ಹರಿಜನರು ಪಾಲ್ಗೊಳ್ಳಬಹುದೆಂದು ಆಗಿನ ಮೈಸೂರು ಸರ್ಕಾರ ಘೋಷಿಸಿತು. ಸರ್ಕಾರದ ಹತೋಟಿಯಲ್ಲಿದ್ದ ಎಲ್ಲ ದೇವಸ್ಥಾನಗಳಿಗೂ ಅಸ್ಪೃಶ್ಯರು ಪ್ರವೇಶಿಸಬಹುದೆಂದು ತಿರುವಾಂಕೂರು ಸರ್ಕಾರ ಆಜ್ಞೆ ಮಾಡಿತು. ಈ ಎರಡು ಘಟನೆಗಳು ರಾಜನೀತಿ ನಿಪುಣರ ಮತ್ತು ಪತ್ರಿಕಾ ಪ್ರಪಂಚದ ಮೆಚ್ಚುಗೆಯನ್ನು ಸಂಪಾದಿಸಿದುವಲ್ಲದೆ, ನಾಡಿನ ಮನೋಧರ್ಮವನ್ನು ಬದಲಿಸಿದುವು. ಅವುಗಳ ಸಂಭವಕ್ಕೆ ಅಂಬೇಡ್ಕರರ ಗರ್ಜನೆಯೇ ಕಾರಣವೆಂಬುದನ್ನು ಯಾರೂ ಮರೆಯಲಿಲ್ಲ.

•

ಅಂಬೇಡ್ಕರರು ರಾಷ್ಟ್ರನಾಯಕರಾಗಿದ್ದರೂ ಅವರ ಪಕ್ಷದ ಚಟುವಟಿಕೆಗಳು ಮುಂಬಯಿ ಪ್ರಾಂತಕ್ಕೆ ಮಾತ್ರ ಸೀಮಿತಗೊಂಡಿದ್ದುವು. ಅದರ ಸೀಮಿತ ಪರಿಧಿಗೆ ಹಣ ಜನ ಆಸ್ತಿಗಳ ಅಭಾವವೇ ಕಾರಣವಾಗಿತ್ತು. ಇವೆಲ್ಲವೂ ಸಮೃದ್ಧವಾಗಿದ್ದ ಬಹು ಜನಪ್ರಿಯವಾಗಿದ್ದ ಮಹಾಪಕ್ಷವನ್ನೆದುರಿಸಬೇಕಾಗಿತ್ತು ಅದು. ಆದರೂ ಅಂಬೇಡ್ಕರರು ಎದೆಗೆಡದೆ ಚುನಾವಣಾ ಪ್ರಚಾರ ಪ್ರಾರಂಭಿಸಿದರು. ಹದಿನೈದು ಮೀಸಲು ಕ್ಷೇತ್ರಗಳಿಗೂ ಅಭ್ಯರ್ಥಿಗಳನ್ನು ನಿಲ್ಲಿಸಿದರು. ಜತೆಗೆ ಕೆಲವು ಹಿಂದೂ ಗೆಳೆಯರ ಬೆಂಬಲದಿಂದ ಅರಕ್ಷಿತ ಸ್ಥಾನಗಳಿಗೂ ಕೆಲವು ಅಭ್ಯರ್ಥಿಗಳನ್ನು ನಿಲ್ಲಿಸಲಾಯಿತು. ಕೆಲವು ಸ್ವತಂತ್ರರಿಗೂ ಬೆಂಬಲ ನೀಡುವ ಮೂಲಕ ತಮ್ಮ ಪಕ್ಷದ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡರು. ಪೂನಾ ಕ್ಷೇತ್ರದಿಂದ ಸ್ಪರ್ಧಿಸಿದ್ದ ಪ್ರಜಾ ಸ್ವರಾಜ್ಯ ಪಕ್ಷದ ನಾಯಕರಾದ ಭೋಪಟ್ಕರರಿಗೂ ಪ್ರೋತ್ಸಾಹ ನೀಡಿದರು. ಭೋಪಟ್ಕರರು ಸಂಪ್ರದಾಯವಾದಿ ಹಿಂದುಗಳ ಉಮೇದುವಾರರಾಗಿದ್ದರೂ, ಅವರ ಗುಣಶೀಲಗಳಿಗೂ ಉದಾರ ಸ್ವಭಾವಕ್ಕೂ ಅವರು ಮಾರು ಹೋಗಿದ್ದರು. ಇಂಥ ಸಹಕಾರ ಪಾರಸ್ಪರಿಕವಾಗಿದ್ದುದರಿಂದ ಅಂಬೇಡ್ಕರರಿಗೆ ಮಾತ್ರವಲ್ಲ, ಅವರ ಪಕ್ಷದ ಅಭ್ಯರ್ಥಿಗಳಿಗೂ ತುಂಬ ಅನುಕೂಲವಾಯಿತು. ಅಂಬೇಡ್ಕರ್ ಮತ್ತು ಭೋಪಟ್ಕರರನ್ನು ಸೋಲಿಸಲು ಕಾಂಗ್ರೆಸ್ ಪಕ್ಷ ತನ್ನಲ್ಲಿ ಸಂಚಯಗೊಂಡಿದ್ದ ಶಕ್ತಿಸಾಮರ್ಥ್ಯಗಳನ್ನೆಲ್ಲ ವ್ಯಯಮಾಡಿತು. ಭೋಪಟ್ಕರರು ಸೋತರೂ ಅಂಬೇಡ್ಕರರು ಗೆದ್ದರು. ಸ್ವತಂತ್ರ ಕಾರ್ಮಿಕ ಪಕ್ಷ ನಿಲ್ಲಿಸಿದ್ದ

17 ಮಂದಿ ಅಭ್ಯರ್ಥಿಗಳಲ್ಲಿ 15 ಜನ ಗೆದ್ದು, ಪಕ್ಷಕ್ಕೆ ಮರ್ಯಾದೆ ತಂದು ಕೊಟ್ಟರು. ಆ ವಿಜಯ ಅಂಬೇಡ್ಕರರ ವ್ಯಕ್ತಿ ಮಹಿಮೆಯನ್ನೂ ಅವರ ಚುನಾವಣಾ ತಂತ್ರಜ್ಞತೆಯನ್ನೂ ಸಂದೇಹಕ್ಕವಕಾಶವಿಲ್ಲದಂತೆ ಭಾರತದ ಮೂಲೆ ಮೂಲೆಗಳಲ್ಲಿ ಡಂಗುರಿಸಿತು.

ಚುನಾವಣಾ ಫಲಿತಾಂಶಗಳು ಪ್ರಕಟಗೊಂಡ ಕೂಡಲೇ ಮುಂಬಯಿ ಯಲ್ಲಿ ಮಧ್ಯಂತರ ಸರ್ಕಾರ ಅಸ್ತಿತ್ವಕ್ಕೆ ಬಂತು. ತಮ್ಮ ಪಕ್ಷಕ್ಕೆ ಬಹುಮತ ವಿಲ್ಲದ್ದರಿಂದ ಅಂಬೇಡ್ಕರರು ಮಂತ್ರಿ ಪದವಿಯನ್ನು ನಿರಾಕರಿಸಿದರು. ಜುಲೈ ತಿಂಗಳಲ್ಲಿ ಕಾಂಗ್ರೆಸ್ ಪಕ್ಷ ಸರ್ಕಾರ ರಚಿಸುವುದಾಗಿ ಘೋಷಿಸಿತು. 19ರಂದು ಶಾಸಕರು ಪ್ರಮಾಣವಚನ ಸ್ವೀಕರಿಸಿ, ಇಂಗ್ಲೆಂಡಿನ ದೊರೆಗೆ ನಿಷ್ಠೆ ವ್ಯಕ್ತ ಪಡಿಸಿದರು. ಅಂಬೇಡ್ಕರರು ಗೀತೆಯ ಹೆಸರಿನಲ್ಲಿ ಪ್ರಮಾಣ ಮಾಡದೆ, ಸತ್ಯಧರ್ಮಗಳ ಹೆಸರಿನಲ್ಲಿ ಪ್ರತಿಜ್ಞೆ ಮಾಡಿದರು. ಅವರು ವಿರೋಧ ಪಕ್ಷ ವಲ್ಲಿ ಆಡಳಿತ ಪಕ್ಷಕ್ಕೆ ಸಿಂಹಸ್ವಪ್ನವಾಗಿ ಕುಳಿತರು.

ನಿಮ್ನವರ್ಗೀಯರ ಜಿಲ್ಲಾ ಸಮ್ಮೇಲನವೊಂದರಲ್ಲಿ ಮಾತಾಡುತ್ತ "ಕಾರ್ಮಿಕರ ಮತ್ತು ದರಿದ್ರರ ಹಿತಾಸಕ್ತಿ ಪಾಲನೆಯಲ್ಲಿ ಗಾಂಧಿಯವರಿಗೆ ನಂಬಿಕೆಯಿಲ್ಲ. ಕಾಂಗ್ರೆಸು ಶ್ರೀಮಂತರ ಮತ್ತು ಬಂಡವಾಳಗಾರರ ಪಕ್ಷವಾಗಿದೆ; ಅವರ ಹಕ್ಕು ಬಾಧ್ಯತೆಗಳನ್ನು ರಕ್ಷಿಸುವುದೇ ಅದರ ಪ್ರಧಾನ ಧ್ಯೇಯವಾಗಿದೆ. ಅದು ಕ್ರಾಂತೀಕಾರಿ ಪಕ್ಷವಾಗಿದ್ದರೆ ನಾನೆಂದೋ ಅದರೊಳಗಿರುತ್ತಿದ್ದೆ. ಸಾಮಾಜಿಕಾರ್ಥಿಕ ಸಮಾನತೆಯನ್ನು ಕಾರ್ಯಗತಗೊಳಿಸುವಷ್ಟು ಧೈರ್ಯ ಅದಕ್ಕಿಲ್ಲ. ಗಾಂಧಿತತ್ತ್ವದ ಪ್ರಕಾರ ನೇಗಿಲಿಗೆ ಕಟ್ಟುವ ಎರಡು ಎತ್ತುಗಳ ಜತೆಗೆ ರೈತನೂ ಒಂದು ಎತ್ತಾಗಿದ್ದಾನೆ. ಆದ್ದರಿಂದ ನೀವು ಆ ಪಕ್ಷದ ಕಡೆಗೆ ಮುಖ ತಿರುಗಿಸಬೇಡಿ. ತಿರುಗಿಸಿದ್ದಾದರೆ ನೀವು ವಾಕ್ಸ್ವಾತಂತ್ರ್ಯ ಸಹ ಕಳೆದುಕೊಳ್ಳುತ್ತೀರಿ. ಹೊರಗಿದ್ದುಕೊಂಡೇ ಹೋರಾಟ ನಡೆಸುವುದೊಳ್ಳೆಯದು. ರಾಜಕೀಯೋದ್ದೇಶಗಳಿಗಾಗಿ ಕಾರ್ಮಿಕರನ್ನು ಬಳಸಿಕೊಳ್ಳುವ ಕಮ್ಯುನಿಷ್ಟರನ್ನು ದೂರವಿರಿಸಬೇಕಾಗಿದೆ." ಎಂದು ರೈತಕಾರ್ಮಿಕರ ಕ್ಷೇಮದ ಬಗೆಗೆ ಕಾತರತೆ ಯನ್ನು ವ್ಯಕ್ತಪಡಿಸಿದರು. ಜೀತ ನಿರ್ಮೂಲನ ಮಸೂದೆಯನ್ನು ಮೊಟ್ಟ ಮೊದಲು ಶಾಸನ ಸಭೆಯ ಮುಂದೆ ಮಂಡಿಸಿದ ಕೀರ್ತಿ ಅಂಬೇಡ್ಕರರಿಗೆ ಸಲ್ಲಬೇಕು.

ಜೀತನಿರ್ಮೂಲನ ಮಸೂದೆಗೆ ರೈತರ ಬೆಂಬಲಗಳಿಸುವ ಸಲುವಾಗಿ ಮುಂಬಯಿಯಲ್ಲಿ ಅವರು ದೊಡ್ಡ ಮೆರವಣಿಗೆ ವ್ಯವಸ್ಥೆಗೊಳಿಸಿದ್ದರು. ಸುತ್ತ ಮುತ್ತಣ ಜಿಲ್ಲೆಗಳಿಂದ ಆಗಮಿಸಿದ್ದ ಹೆಗಲಗಂಬಳಿಯ, ಕೈದೊಣ್ಣೆಯ, ಹರಕು ಬಟ್ಟೆಯ ರೈತರು ಮೂರು ಕಡೆಗಳಿಂದ ಮೆರವಣಿಗೆಯಲ್ಲಿ ಬಂದು, ಘೋಷಣೆ ಗಳನ್ನು ಕೂಗುತ್ತ ಶಾಸನಸಭೆಯ ಮುಂದೆ ಝಂಡಾ ಊರಿದರು. ಇಪ್ಪತ್ತು ಮಂದಿ ಪ್ರತಿನಿಧಿಗಳು ಮಾತ್ರ ಮುಖ್ಯಮಂತ್ರಿಗಳನ್ನು ಕಾಣಬಹುದೆಂದು ಪೋಲಿಸರು ನುಡಿದರು. ಅಂಬೇಡ್ಕರರ ನೇತೃತ್ವದಲ್ಲಿ ಪ್ರತಿನಿಧಿಗಳು ಮುಖ್ಯ ಮಂತ್ರಿಗಳನ್ನು ಭೇಟಿಮಾಡಿದರು. ಕೃಷಿ ಕಾರ್ಮಿಕರಿಗೆ ಕನಿಷ್ಠವೇತನ ನೀಡಿಕೆ, ಗುತ್ತಿಗೆಬಾಕಿಯ ವಜಾ, ಇನಾಂರದ್ದಿಯಾತಿ, ಸಣ್ಣ ಹಿಡುವಳಿದಾರರಿಗೆ ನೀರಾವರಿ ತೆರಿಗೆ ವಿನಾಯಿತಿ ಈ ಬೇಡಿಕೆಗಳನ್ನು ಮುಖ್ಯಮಂತ್ರಿಗಳಿಗೆ ಸಲ್ಲಿಸಿ ದರು. ಅನಂತರ ನೆರೆದ ಬೃಹತ್ಸಭೆಯನ್ನು ಸಂಬೋಧಿಸುತ್ತ "ಕಮ್ಯೂನಿಸಮ್ ಬಗ್ಗೆ ಕಮ್ಯೂನಿಸ್ಟ್ ನಾಯಕರೆಲ್ಲ ಸೇರಿ ಎಷ್ಟು ಪುಸ್ತಗಳನ್ನು ಓದಿದ್ದಾರೆಯೋ ಅದಕ್ಕಿಂತ ಮಿಗಿಲಾಗಿ ನಾನು ಓದಿದ್ದೇನೆ. ಪ್ರಪಂಚದಲ್ಲಿರುವುದು ಎರಡೇ ವರ್ಗ ; ಉಳ್ಳವರು ಮತ್ತು ಇಲ್ಲದವರು, ಸುಲಿಗೆಗಾರರು ಮತ್ತು ಸುಲಿಗೆಗೊಳ ಗಾದವರು. ಮಧ್ಯಮವರ್ಗದವರ ಸಂಖ್ಯೆ ಸಣ್ಣದು, ಶೋಷಕರ ಶ್ರೀಮಂತತೆಯೇ ಬಡವರ ಮತ್ತು ಕಾರ್ಮಿಕರ ದಾರಿದ್ರ್ಯಕ್ಕೆ ಕಾರಣ. ಜಾತಿ ಪಂಥ ಬೇಧವಿಲ್ಲದೆ ಕಾರ್ಮಿಕರು ಒಂದುಗೂಡಬೇಕು, ತಮ್ಮ ನಿಜವಾದ ಪ್ರತಿನಿಧಿಗಳನ್ನು ಶಾಸನ ಸಭೆಗಳಿಗೆ ಕಳಿಸಬೇಕು, ಆಗ ಮಾತ್ರ ಅವರು ತಮ್ಮ ಹಕ್ಕು ಚಲಾಯಿಸಲು ಸಮರ್ಥರಾಗುತ್ತಾರೆ ; ನಾಡಿನ ಆಹಾರಸಂಪತ್ತನ್ನು ಸೃಷ್ಟಿಸುವ ಜನ ನಗ್ನತೆ ಯಿಂದ ನರಳಬೇಕಾಗಿಲ್ಲ, ಹಸಿವಿನಿಂದ ಸಾಯಬೇಕಾಗಿಲ್ಲ." ಎಂದು ಅಂಬೇ ಡ್ಕರರು ಬೋಧಿಸಿದರು. ಅವರ ಉಪದೇಶವಾಣಿಯಿಂದ ಸಂಪ್ರೀತರಾವ ರೈತ ಕಾರ್ಮಿಕರು 'ಇವರೇ ನಮ್ಮ ಏಕೈಕ ನಾಯಕರು, ದಲಿತೋದ್ಧಾರಕರು' ಎಂದು ಹರ್ಷೋನ್ಮತ್ತರಾಗಿ ಕುಣಿದಾಡಿದರು.

ಬಹುಸಂಖ್ಯಾತರಾದ ರೈಲ್ವೆ ಕಾರ್ಮಿಕರ ಸಂಘಟನೆಯ ಕಡೆಗೆ ಅಂಬೇ ಡ್ಕರರು ಅನಂತರ ಗಮನ ಹರಿಸಿದರು. ಬ್ರಾಹ್ಮಣಿಕೆ ಮತ್ತು ಬಂಡವಾಳಗಾರಿಕೆ ಕಾರ್ಮಿಕರ ಮಹಾ ಶತ್ರುಗಳೆಂಬುದು ಅವರ ಖಚಿತಾಭಿಪ್ರಾಯವಾಗಿತ್ತು. "ನಾನು ಬ್ರಾಹ್ಮಣರನ್ನು ದೂರುತ್ತಿಲ್ಲ. ಅವರ ಅಧಿಕಾರ ಅಂತಸ್ತುಗಳ ಬಗ್ಗೆ ನನಗೆ ದ್ವೇಷವಿಲ್ಲ. ಯಾವುದು ಸ್ವಾತಂತ್ರ್ಯ ಸಮಾನತೆ ಮತ್ತು ಸೋದರತ್ವ ಗಳಿಗೆ ವಿರುದ್ಧವಾಗಿದೆಯೋ ಅದನ್ನು ಬ್ರಾಹ್ಮಣಿಕೆಯೆಂದು ಕರೆಯುತ್ತೇನೆ.

ಈ ಬ್ರಾಹ್ಮಣಿಕೆ ಮೊದಲು ಪ್ರಾರಂಭವಾದದ್ದು ಬ್ರಾಹ್ಮಣರಿಂದ. ಅದೀಗ ಸಾರ್ವತ್ರಿಕವಾಗಿ ವ್ಯಾಪಿಸಿಕೊಂಡಿದೆ. ಅದು ಸಾಮಾಜಿಕ ಜೀವನಕ್ಕೆ ಮಾತ್ರ ಸೀಮಿತಗೊಂಡಿಲ್ಲ ; ಜೀವನದ ಸರ್ವಕ್ಷೇತ್ರಗಳಲ್ಲೆಲ್ಲ ಹಬ್ಬಿಕೊಂಡಿದೆ. ಈಗಲೂ ಅಸ್ಪೃಶ್ಯ ಕಾರ್ಮಿಕರಿಗೆ ಅನೇಕ ದಿಗ್ಬಂಧನಗಳಿವೆ. ಅವರು ಗಂಗಾಳಾಗ (Gangmen) ಬಹುದೇ ಹೊರತು. ಜವಾನರಾಗುವಂತಿಲ್ಲ. ಸಾಮಾನ್ಯವಾಗಿ ಟೇಸನ್ ಮೇಸ್ತ್ರು ಜವಾನರನ್ನು ಮನೆಕೆಲಸಕ್ಕೆ ಬಳಸಿಕೊಳ್ಳುತ್ತಾರೆ. ಅಸ್ಪೃಶ್ಯರು ಜವಾನರಾದರೆ ಅವರು ಪ್ರಯೋಜನಕ್ಕೊದಗಲಾರರು." ಅವರು ಅಸ್ಪೃಶ್ಯ ರೈಲ್ವೆ ಕಾರ್ಮಿಕರ ಸಭೆಯಲ್ಲಿ ಮಾಡಿದ ಭಾಷಣವಿದು. ಅಸ್ಪೃಶ್ಯರ ಅಭ್ಯುದಯ ಯುವಜನರನ್ನವಲಂಬಿಸಿತ್ತೆನ್ನುವ ಸಂಗತಿಯನ್ನು ಅವರು ಬಲ್ಲವರಾಗಿದ್ದರು. ಅವರ ಧ್ಯೇಯ ಯಾವಾಗಲೂ ಶ್ರೇಷ್ಠವಾದುದಾಗಿರಬೇಕೆಂದೂ. ಅದರ ಸಿದ್ಧಿ ಅವಿಶ್ರಾಂತ ಶ್ರಮದಿಂದ, ಚಿತ್ತೈಕಾಗ್ರತೆಯಿಂದ ಮತ್ತು ಕಷ್ಟ ಸಹಿಷ್ಣುತೆ ಯಿಂದ ಮಾತ್ರ ಸಾಧ್ಯವೆಂದೂ ಅವರು ಆಗಾಗ್ಗೆ ಬುದ್ಧಿ ಹೇಳುತ್ತಿದ್ದರು. ಶಿಕ್ಷಣ ಇಬ್ಬಾಯ ಖಡ್ಗವೆಂದವರು ಕರೆಯುತ್ತಿದ್ದರು. "ಬಡಜನರ ಕ್ಷೇಮ ಸಾಧನೆಗಡ್ಡಿಯಾಗುವ ಶಿಕ್ಷಣ ಶಾಪವಾಗುತ್ತದೆ. ಶಿಕ್ಷಣಕ್ಕಿಂತ ಶೀಲ ಮುಖ್ಯ. ಧರ್ಮವಿಮುಖರಾದ ವಿದ್ಯಾರ್ಥಿಗಳನ್ನು ನೋಡುವಾಗ ದುಃಖವಾಗುತ್ತದೆ. ಕೆಲವರು ತಿಳಿದಿರುವಂತೆ ಧರ್ಮ ಅಫೀಮಲ್ಲ. ನನ್ನಲ್ಲಿರುವ ಒಳ್ಳೆಯ ಗುಣ ಗಳಿಗೆ, ಅಂತೆಯೇ ನಾನು ಸಮಾಜಕ್ಕೆ ಸಲ್ಲಿಸಿರುವ ಸೇವೆಗೆ ಅಂತರ್ನಿಹಿತ ವಾಗಿರುವ ಧಾರ್ಮಿಕ ಭಾವನೆಗಳೇ ಕಾರಣ. ನನಗೆ ಧರ್ಮ ಬೇಕು ; ಧರ್ಮದ ಹೆಸರಿನಲ್ಲಿ ದ್ರೋಹವೆಸಗುವುದು ಬೇಡ." ಈ ಮಾತುಗಳಿಂದ ಅಂಬೇಡ್ಕರರ ಔದಾರ್ಯವೂ ಸತ್ಯನಿಷ್ಠೆಯೂ ಹೊರಹೊಮ್ಮುತ್ತವೆ : ಧರ್ಮವೇ ಸಮಾಜದ ಅಡಿಗಲ್ಲೆಂಬ ಅವರ ಭಾವನೆಗೆ ಪುಷ್ಟಿ ದೊರೆಯುತ್ತದೆ.

ಅಂಬೇಡ್ಕರರ ಕೀರ್ತಿ ದಿಗಂತವ್ಯಾಪ್ತಿಯಾಗುತ್ತಿದ್ದಂತೆ ಅವರ ವಕೀಲಿ ವೃತ್ತಿಯೂ ವೃದ್ಧಿಯಾಗುತ್ತಿತ್ತು. ಮೋಸವಿಲ್ಲದ ಸತ್ಯನಿಷ್ಠ ಪ್ರಾಮಾಣಿಕ ವಕೀಲರಾದದ್ದರಿಂದ ಕಕ್ಷಿಗಾರರ ಸಂಖ್ಯೆ ದಿನೇ ದಿನೇ ಬೆಳೆಯುತ್ತಿತ್ತು. ಮರನೋಡಿ ಚಕ್ಕೆ ಎಡೆಯುತ್ತಿದ್ದರೇ ಹೊರತು ಶೋಷಣೆ ಅವರ ಪ್ರವೃತ್ತಿ ಯಾಗಿರಲಿಲ್ಲ. ಬಡವರಿಂದ ಅವರು ಕೋರ್ಟು ಖರ್ಚು ಸಹ ತೆಗೆದು ಕೊಳ್ಳುತ್ತಿರಲಿಲ್ಲ. ಅವರು ವಿರೋಧಪಕ್ಷದಲ್ಲಿದ್ದರೂ ಪ್ರಿನ್ಸಿಪಾಲ್ ಹುದ್ದೆ ಯಿಂದ ಸರ್ಕಾರ ಅವರನ್ನು ಅಲ್ಲಾಡಿಸಿರಲಿಲ್ಲ. ಅವರು ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಿನವರಾಗಿದ್ದುದೇ ಅವರ ಮುಂದುವರಿಕೆಗೆ ಕಾರಣವಾಗಿತ್ತು.

ಆದರೂ ಅವರು 1938ನೆಯ ಮೇ ತಿಂಗಳಲ್ಲಿ ತಮ್ಮ ಹುದ್ದೆಗೆ ರಾಜೀನಾಮೆ ಸಲ್ಲಿಸಿದರು. ಆ ಸಂದರ್ಭದಲ್ಲಿ ವಿದ್ಯಾರ್ಥಿಗಳೂ ಅಧ್ಯಾಪಕರೂ ಏರ್ಪಡಿಸಿದ್ದ ಬೀಳ್ಕೊಡಿಗೆ ಸಮಾರಂಭ ಆತ್ಮೀಯವಾಗಿತ್ತು, ಸ್ನೇಹಮಯವಾಗಿತ್ತು.

ಯೂರೋಪಿನಲ್ಲಿ ದ್ವಿತೀಯ ಮಹಾಯುದ್ಧ ಪ್ರಾರಂಭವಾಗುತ್ತಿದ್ದಂತೆ, ವೈಸ್‌ರಾಯ್ ಸಹ ಭಾರತದ ಪರವಾಗಿ ಜರ್ಮನಿಯ ಮೇಲೆ ಯುದ್ಧ ಘೋಷಿಸಿದರು. ಭಾರತೀಯ ಮುಸ್ಲಿಮರಲ್ಲಿ ಭದ್ರತಾಭಾವನೆ ಮೂಡಿಸಿದ್ದಾದರೆ ಮುಸ್ಲಿಮ್‌ಲೀಗು ಯುದ್ಧ ಪ್ರಯತ್ನಗಳನ್ನು ಬೆಂಬಲಿಸಬಹುದೆಂದು ಜಿನ್ನಾ ಹೇಳಿಕೆಯಿತ್ತರು. ಮಾನವ ಸ್ವಾತಂತ್ರ್ಯಕ್ಕಾಗಿ ತಾನು ಯುದ್ಧರಂಗಕ್ಕಿಳಿಯಬೇಕಾಯಿತೆಂಬ ಬ್ರಿಟಿಷ್ ಸರ್ಕಾರದ ಘೋಷಣೆಯನ್ನು ರಾಜಕೀಯವಾದ ಮಾಚಾರವೆಂದು ಸಾವರ್‌ಕರ್ ಅಲ್ಲಗಳೆದರು. ಆಂಗ್ಲರ ಸಂಕಟ ಸಮಯವೇ ಭಾರತೀಯರ ಕಾರ್ಯಕಾಲವಾಗಬಾರದೆಂದೂ ಯುದ್ಧಾನಂತರ ಭಾರತಕ್ಕೆ ಡೊಮಿನಿಯನ್ ಸ್ಥಾನಮಾನ ನೀಡುವುದಾಗಿ ಬ್ರಿಟಿಷ್ ಸರ್ಕಾರ ಭರವಸೆ ನೀಡಬೇಕೆಂದೂ ಅಂಬೇಡ್ಕರ್ ನುಡಿದರು.

ಸ್ವತಂತ್ರ ಭಾರತ ಸರ್ಕಾರ ಸ್ವತಂತ್ರರಾಷ್ಟ್ರಗಳ ಪರಸ್ಪರ ಸಂರಕ್ಷಣೆಯ ವಿಷಯದಲ್ಲಿ ಸಹಕರಿಸುವುದೆಂದೂ, ಬ್ರಿಟಿಷ್ ಸರ್ಕಾರ ಯುದ್ಧದ ಧ್ಯೇಯಗಳನ್ನು ಭಾರತವೇ ಮೊದಲಾದ ವಸಾಹತು ರಾಷ್ಟ್ರಗಳ ಅಭೀಪ್ಸೆಗೆ ತಕ್ಕಂತೆ ಘೋಷಿಸಬೇಕೆಂದೂ ಸೆಪ್ಟೆಂಬರ್ 14ರಂದು ಕಾಂಗ್ರೆಸ್ಸು ತನ್ನ ಯುದ್ಧ ನೀತಿಯನ್ನು ಪ್ರತಿಪಾದಿಸಿತು. ವೈಸ್‌ರಾಯರು ಭಾರತೀಯ ನಾಯಕರೊಡನೆ ಚರ್ಚೆ ನಡೆಸಿದನಂತರ. ಸಮರಾಂತ್ಯದಲ್ಲಿ ಪ್ರಮುಖ ರಾಜಕೀಯ ಪಕ್ಷಗಳೊಡನೆ ಸಮಾಲೋಚನೆ ನಡೆಸಿ ಇಂಡಿಯಾ ಸರ್ಕಾರದ ಕಾನೂನನ್ನು ಮಾರ್ಪಡಿಸುವುದಾಗಿಯೂ, ಹಾಗೆ ಮಾರ್ಪಾಡು ಮಾಡುವಾಗ ಅಲ್ಪಸಂಖ್ಯಾತರ ಅಭಿಮತವನ್ನು ಪಡೆಯುವುದಾಗಿಯೂ ಹೇಳಿಕೆಯಿತ್ತರು. ಸಂಗ್ರಾಮ ಸಮಯದಲ್ಲಿ ಸರ್ವಪಕ್ಷೀಯ ಸಮಾಲೋಚನಾ ಸಮಿತಿ ರಚಿಸುವುದಾಗಿಯೂ ಆಶ್ವಾಸನೆ ನೀಡಿದರು. ಕಾಂಗ್ರೆಸ್ ಕಾರ್ಯಸಮಿತಿ ಅವರ ಸಲಹೆಗಳನ್ನು ತಿರಸ್ಕರಿಸಿದ್ದಲ್ಲದೆ. ಕೂಡಲೇ ರಾಜೀನಾಮೆ ನೀಡುವಂತೆ ತನ್ನ ಪಕ್ಷದ ಸಚಿವ ಮಂಡಲಿಗಳಿಗೆ ಆದೇಶ ನೀಡಿತು. ದೇಶಾಭಿಮಾನ ಕಾಂಗ್ರೆಸ್ಸಿನ ಏಕಸ್ವಾಮ್ಯವಲ್ಲವೆಂದೂ, ಅನ್ಯಪಕ್ಷಗಳ ಮತ್ತು ಅಲ್ಪಸಂಖ್ಯಾತರ ಅಭಿಪ್ರಾಯ ಸಹ ದೇಶ ಕ್ಷೇಮದ ದೃಷ್ಟಿಯಿಂದ ಪುರಸ್ಕಾರಯೋಗ್ಯವೆಂದೂ ಅಂಬೇಡ್ಕರರು ದೆಹಲಿಯಿಂದ ಹೇಳಿಕೆಯಿತ್ತರು. ಕಾಂಗ್ರೆಸ್ ಸರ್ಕಾರ ಅಸ್ತಿತ್ವದಲ್ಲಿದ್ದ ಪ್ರಾಂತ್ಯ

ಗಳಲ್ಲಿ ಮುಸ್ಲಿಮರು ಕಿರುಕುಳ ಸಹಿಸಬೇಕಾಗಿತ್ತೆಂಬ ಮಾತು ಸುಳ್ಳಿನ ಕಂತೆ ಯೆಂದು ಜರಿದರು. "ನಮಗೆ ಬೇಕಾದ್ದು ಸರ್ಕಾರದಲ್ಲೊಂದು ಪಾಲೇ ಹೊರತು, ಪ್ರತ್ಯೇಕ ರಾಜ್ಯವಲ್ಲ. ಭಾರತವನ್ನು ಕತ್ತರಿಸಿ ಮುಸ್ಲಿಮರಿಗೇನಾದರೂ ಪ್ರತ್ಯೇಕ ರಾಜ್ಯ ರಚಿಸಿಕೊಡುವುದಾದರೆ ನಿಮ್ಮ ವರ್ಗೀಯರು ಕಣ್ಮುಚ್ಚಿಕೊಂಡು ಕುಳಿತಿರಲಾಗದು. ಅಂಥದೊಂದು ಸನ್ನಿವೇಶ ಸೃಷ್ಟಿಯಾಗುವುದಾದರೆ ಆ ಹೊಣೆ ಕಾಂಗ್ರೆಸ್ಸಿನದಾಗುತ್ತದೆ." [ಎಂದವರು ಒಂದು ರೀತಿಯಲ್ಲಿ ಸರ್ವಪಕ್ಷಗಳ ನಾಯಕರಿಗೆ ಎಚ್ಚರಿಕೆ ನೀಡಿದರು.

ಅವರ ಈ ಎಚ್ಚರಿಕೆಯಿಂದ ಹಲವರು ಗಾಬರಿಗೊಂಡರು. ಪಂಡಿತ ನೆಹ್ರೂ ಅವರು ಅಕ್ಟೋಬರ್ ತಿಂಗಳ ಮೂರನೆಯ ವಾರದಲ್ಲಿ ಮುಂಬಯಿಗೆ ಬಂದು. ಅಂಬೇಡ್ಕರರನ್ನು ನೋಡುವ ಅಭಿಲಾಷೆಯನ್ನು ಖೇರ್ ಅವರ ಬಳಿ ವ್ಯಕ್ತಪಡಿಸಿದರು. ಖೇರ್ ಅವರೇ ಅಂಬೇಡ್ಕರ್‌ರನ್ನು ನೆಹ್ರೂ ಅವರ ಬಳಿ ಕರೆತಂದರು. ಅದು ಅವರಿಬ್ಬರ ಪ್ರಥಮ ಸಂದರ್ಶನ. ಮೂರ್ನಾಲ್ಕು ದಿನಗಳು ಭೂಲಾಭಾಯಿ ದೇಸಾಯಿಯವರ ಮನೆಯಲ್ಲಿ ಕಾಂಗ್ರೆಸ್ ನಾಯಕರ ಮತ್ತು ಅಂಬೇಡ್ಕರರ ನಡುವೆ ಮಾತುಕತೆ ನಡೆದುವು. ಗಾಂಧಿ ಯವರ ಕಾರ್ಯದರ್ಶಿ ಮಹದೇವ ದೇಸಾಯಿಯವರೂ ಚರ್ಚೆಯಲ್ಲಿ ಪಾಲ್ಗೊಂಡಿದ್ದರು. ಅಂಬೇಡ್ಕರರ ಅಭಿಪ್ರಾಯವನ್ನವರು ಗಾಂಧೀಜಿ ಯವರಿಗೊಯ್ಯಬೇಕಾಗಿತ್ತು. ಕಾಂಗ್ರೆಸ್ ಸರ್ಕಾರದ ರಾಜೀನಾಮೆ ಚರ್ಚೆಯ ವಿಷಯವಾಗಿತ್ತು.

ಎಲ್ಲ ಕಾಂಗ್ರೆಸ್ ಸರ್ಕಾರಗಳು ಶಾಸನ ಸಭೆಗಳನ್ನು ಕರೆದು. ಸಮರ ಸಂಬಂಧವಾದ ನಿರ್ಣಯವನ್ನು ಮಂಡಿಸಿದುವು. ಭಾರತೀಯರ ಅಂಗೀಕಾರ ಪಡೆಯದೆಯೆ ಬ್ರಿಟನ್ ಜರ್ಮನಿಗಳ ನಡುವಣ ಯುದ್ಧದಲ್ಲಿ ಅವರನ್ನು ಭಾಗಗೊಳಿಸುವ. ಅಂತೆಯೇ ಪ್ರಾಂತ ಸರ್ಕಾರಗಳ ಅಧಿಕಾರಗಳನ್ನು ಮೊಟಕು ಗೊಳಿಸುವ ಯೋಜನೆಗೆ ಪ್ರತಿಭಟನೆ ಸಲ್ಲಿಸುವುದೇ ನಿರ್ಣಯದ ಉದ್ದೇಶ ವಾಗಿತ್ತು. ಬ್ರಿಟಿಷ್ ಸರ್ಕಾರದ ಮುಂದಿಡಬೇಕಾಗಿದ್ದ ಬೇಡಿಕೆಗಳೆಲ್ಲ ಕಾಂಗ್ರೆಸ್ಸಿನ ಹೆಸರಿನಲ್ಲಿದ್ದುವೇ ಹೊರತು, ರಾಷ್ಟ್ರದ ಹೆಸರಿನಲ್ಲಿರಲಿಲ್ಲ. ಆ ಬಗ್ಗೆ ಆಕ್ಷೇಪವೆತ್ತಿದ ಅಂಬೇಡ್ಕರ್ ರಾಜಕೀಯ ಕ್ಷೇತ್ರದಲ್ಲಿ ಶೂದ್ರರಾಗುಳಿಯುವ ಯಾವ ಯೋಜನೆಗೂ ತಾವು ಬದ್ಧರಾಗಿರುವುದಿಲ್ಲವೆಂದು ಸ್ಪಷ್ಟಪಡಿಸಿದರು.

"ಈ ದೇಶದಲ್ಲಿ ನನ್ನ ದೃಷ್ಟಿಕೋನವನ್ನು ಯಾರೂ ಸರಿಯಾಗಿ ಅರ್ಥಮಾಡಿಕೊಂಡಂತಿಲ್ಲ. ಈ ಸಂದರ್ಭದಲ್ಲಿ ಅದನ್ನು ಸ್ಪಷ್ಟಪಡಿಸ ಲಿಚ್ಛಿಸುತ್ತೇನೆ. ಸ್ವಹಿತ ಮತ್ತು ದೇಶಹಿತಗಳ ನಡುವೆ ಸಂಘರ್ಷವೊದಗಿದಾಗ, ಮೊದಲನೆಯದನ್ನು ಮರೆತು ಎರಡನೆಯದರ ಸಾಧನೆಗೆ ಕಂಕಣಬದ್ಧನಾಗು ತ್ತೇನೆ. ನಾನೆಂದೂ ಸ್ವಲಾಭ ಸಾಧನೆಗೆ ಮನತೆತ್ತವನಲ್ಲ. ಮನತೆತ್ತಿದ್ದರೆ ನಾನೆಲ್ಲಿಯೋ ಇರಬಹುದಿತ್ತು. ಚಕ್ರಗೋಷ್ಠಿಯಲ್ಲಿಯೂ ನಾನು ನಾಡಿನ ಹಿತವನ್ನು ಮರೆಯಲಿಲ್ಲ. ನನ್ನ ನಿಲವು ಆಂಗ್ಲ ಸದಸ್ಯರಿಗೂ ಕಳವಳಕಾರಿ ಯಾಗಿತ್ತು. ನಾನು ಯಾವ ಜನತೆಯ ನಡುವೆ ಹುಟ್ಟಿ ಬದುಕು ನಡೆಸಿದೆನೋ ಅವರ ಹಿತವನ್ನು ಯಾವ ಕಾರಣಕ್ಕೂ ಬಿಟ್ಟು ಕೊಡಲಾರೆ. ದೇಶ ಹಿತ ಕ್ಕಿಂತಲೂ ಈ ದಲಿತ ಜನರ ಹಿತಕ್ಕೆ ನಾನು ಆದ್ಯತೆ ಕೊಡುತ್ತೇನೆ." ಎಂಬು ದಾಗಿ ಬಾಬಾಸಾಹೇಬರು ನಿರ್ದಾಕ್ಷಿಣ್ಯವಾಗಿ ಮೊಳಗಿದರು.

ಹಿಂಸಾತ್ಮಕವಾದ ಯುದ್ಧದಲ್ಲಿ ಯಾರೂ ಭಾಗವಹಿಸಕೂಡದೆಂದು ಗಾಂಧೀಜಿ 1940 ನೆಯ ಅಕ್ಟೋಬರ್ ತಿಂಗಳಲ್ಲಿ ವೈಯಕ್ತಿಕ ಸತ್ಯಾಗ್ರಹ ವನ್ನು ಉದ್ಘಾಟಿಸಿದರು. ಅದರ ಪರಿಣಾಮವಾಗಿ ಕಾಂಗ್ರೆಸ್ ನಾಯಕರನ್ನು ಸೆರೆಮನೆಗೆ ನೂಕಲಾಯಿತು. ಅಂಬೇಡ್ಕರರು ಕಾಂಗ್ರೆಸ್ಸಿನ ನೀತಿಯನ್ನು ಉಗ್ರವಾಗಿ ಖಂಡಿಸಿದರು. ಇಲ್ಲಿಯ ಅಹಿಂಸಾತ್ಮಕ ಚಳುವಳಿ ಔದ್ಧತ್ಯದಿಂದ ಮೆರೆಯುತ್ತಿರುವ, ರಕ್ತದಾಹದಿಂದ ಬೊಬ್ಬೆಯಿಡುತ್ತಿರುವ ಹಿಟ್ಲರನಿಗೆ ಅನುಕೂಲವಾಗಬಹುದೆಂಬುದು ಆ ಖಂಡನೆಯ ಉದ್ದೇಶಗಳಲ್ಲೊಂದಾಗಿತ್ತು.

1940ನೆಯ ಇಸವಿಯ ಕೊನೆಯ ಭಾಗದಲ್ಲಿ ಅಂಬೇಡ್ಕರರು 'ಪಾಕಿಸ್ತಾನವನ್ನು ಕುರಿತ ಚಿಂತನೆ' ಎಂಬ ಗ್ರಂಥವನ್ನು ಪ್ರಕಟಿಸಿದರು. ಅವರ ಲೋಕಾನುಭವ, ದೀರ್ಘಾಲೋಚನೆ ಮತ್ತು ವ್ಯಾಪಕ ವ್ಯಾಸಂಗಗಳ ಫಲಿತಾಂಶವೇ ಆ ಕೃತಿ. ಭಾರತದ ವಿಭಜನೆ ಮತ್ತು ಪಾಕಿಸ್ತಾನ ರಚನೆ ಅನಿವಾರ್ಯವೆಂಬುದನ್ನು ಅವರು ಸಾಧಾರವಾಗಿ ವಿವರಿಸಿದ್ದಾರೆ. ಅವರ ವಾದದ ಸಾರಾಂಶವಿಷ್ಟು. ಪಂಜಾಬ್, ವಾಯುವ್ಯ ಸರಹದ್ದಿನ ಪ್ರಾಂತ್ಯ ಮತ್ತು ಸಿಂಧ್ ಪ್ರದೇಶಗಳನ್ನು ಒಟ್ಟುಗೂಡಿಸಬೇಕೆಂದು ಹಲವು ಮಂದಿ ವೈಸ್‌ರಾಯರೂ ಆಡಳಿತಗಾರರೂ ಬಹು ಹಿಂದೆಯೇ ಯೋಚಿಸಿದ್ದರು. ಲಾರ್ಡ್ ಕರ್ಜನರ ಯೋಜನೆ ಕಾರ್ಯಗತಗೊಂಡಿದ್ದರೆ 1905 ರಲ್ಲಿಯೇ ಪೂರ್ವ ಬಂಗಾಳ ಅಸ್ತಿತ್ವಕ್ಕೆ ಬರುತ್ತಿತ್ತು. ಈ ಸಂಗತಿಗಳನ್ನು ಕೂಲಂಕಷವಾಗಿ

ಪರಿಶೀಲಿಸಿದಾಗ ಪಾಕಿಸ್ತಾನದ ರೂಪರೇಷೆಗಳು ಎಂದೋ ಸೂಕ್ಷ್ಮವಾಗಿ ಗೋಚರಿಸಿದ್ದುವೆಂದು ಹೇಳಬಹುದಾಗಿದೆ. ಕಾಂಗ್ರೆಸ್ಸು ಭಾಷಾವಾರು ಪ್ರಾಂತರಚನೆಯ ನೀತಿಯನ್ನು ಅಂಗೀಕರಿಸಿತ್ತಷ್ಟೇ. ಪ್ರಾಂತ ರಚನೆಗೆ ಭಾಷೆ ಆಧಾರವಾಗಬಹುದಾದರೆ ಸಂಸ್ಕೃತಿಯೂ ನಿಮಿತ್ತವಾಗಬಾರದೆ ? ಭಾಷೆ, ಧರ್ಮ, ಸಂಸ್ಕೃತಿ, ಸಂಪ್ರದಾಯ, ಮನೋಧರ್ಮ ಇವೇ ಮೊದಲಾದ ಮೂಲಭೂತ ವಿಷಯಗಳಲ್ಲಿ ಹಿಂದೂಗಳಿಗೂ ಮಹಮ್ಮದೀಯರಿಗೂ, ವಿಶೇಷಾಂತರವಿದೆ. ಹಿಂದುಗಳಿಗೆ ಕಾಶಿಯಲ್ಲೊಂದು ವಿಶ್ವವಿದ್ಯಾನಿಲಯವಿದ್ದರೆ ಮುಸ್ಲಿಮರಿಗೆ ಅಲಿಘಡದಲ್ಲಿದೆ. ಹಿಂದುಗಳು 'ಶುದ್ಧಿ' ಚಳುವಳಿ ಪ್ರಾರಂಭಿಸಿದರೆ ಮುಸ್ಲಿಮರು ತಾಬ್ಲಿಗ್ ಶುರುಮಾಡುತ್ತಾರೆ. ಹಿಂದುಗಳು ರಾಷ್ಟ್ರೀಯ ಸ್ವಯಂಸೇವಕ ಸಂಸ್ಥೆಯನ್ನು ವ್ಯವಸ್ಥೆಗೊಳಿಸಿದರೆ, ಮುಸ್ಲಿಮರು ಖಕ್ಸಾರ್ ದಳವನ್ನು ಸಂಘಟಿಸುತ್ತಾರೆ. ಭಾವಾತ್ಮಕತೆಯಿಂದ ಮಾತ್ರ ರಾಷ್ಟ್ರೀಯ ಮನೋಭಾವನೆ ಸಾಧ್ಯವಾಗುತ್ತದೆ. ಈ ಭಾವನೆಯಾಗಲೀ ಭ್ರಾತೃತ್ವವಾಗಲೀ ಆಯಾಯ ಕೋಮಿನೊಳಗಣ ಜನರಲ್ಲಿ ಕಾಣುವಂಥವೇ ಹೊರತು, ಆ ಎರಡು ಕೋಮುಗಳೊಳಗಣ ಜನರಲ್ಲಿ ಗೋಚರಿಸುವಂಥವಲ್ಲ. ಇವರು ನಮ್ಮವರು ಎಂಬ ಭಾವನೆ ಮೂಡದಿದ್ದಾಗ ರಾಷ್ಟ್ರೈಕ್ಯ ಸಾಧ್ಯವಾಗುವುದಿಲ್ಲ. ಒಂದು ಕಡೆ ಬದುಕು ಸಾಗಿಸುತ್ತಿದ್ದರೂ ಭಾವಸಂವಾದವಿಲ್ಲದ ಜನರೊಳಗೆ ಭೀತಿ ಸಂಶಯಗಳು ತಲೆದೋರುವುದು ಸಹಜ. ಅಂಥವರು ಒಟ್ಟಾಗಿ ಬಾಳುವುದು ಕಷ್ಟವಾಗುತ್ತದೆ.

ವಿಭಜನೆಯ ಪರಿಣಾಮವಾಗಿ ಕೋಮುವಾರು ಸಮಸ್ಯೆ ಸಂಪೂರ್ಣವಾಗಿ ಪರಿಹಾರಗೊಳ್ಳುತ್ತದೆಂದು ಹೇಳುವಂತಿಲ್ಲ. ಆದರೆ ಅದರ ಪರಿಹಾರ ಸುಲಭ ಸಾಧ್ಯವಾಗುತ್ತದೆ. ಗಡಿಯ ಆಕಡೆ ಈಕಡೆ ಇರುವ ಅಲ್ಪಸಂಖ್ಯಾತರನ್ನು ವಿನಿಮಯ ಮಾಡಿಕೊಳ್ಳಬೇಕು. ಸೇವೆ ಸೈನ್ಯ ಶಾಸನ ಸಭೆಗಳಲ್ಲಿ ಸಮರ್ಥ ಪಾಲು ಕೇಳುವ, ಉರ್ದು ಸರ್ವಮಾಧ್ಯಮವಾಗಬೇಕೆಂದು ಹೇಳುವ ಮುಸ್ಲಿಮರೊಡನೆ ಹಿಂದುಗಳು ಶಾಂತ ರೀತಿಯಿಂದ ಬಾಳುವೆ ನಡೆಸುವುದು ಸಾಧ್ಯವೆ ? ಶುದ್ಧಿಸಂಘಟನೆಗಳ ಮೂಲಕ ಮುಸ್ಲಿಮರನ್ನು ಹಿಂದೂಧರ್ಮದಲ್ಲಿ ವಿಲೀನಗೊಳಿಸುವುದೂ ಊಹಾತೀತವಾದ, ಅಪ್ರಾಯೋಗಿಕವಾದ ವಿಷಯವಾಗಿದೆ. ಸಾಮಾಜಿಕ ಸಮಾಗಮವಿಲ್ಲದೆ ರಾಜಕೀಯ ಸಂಗಮ ಸಾಧ್ಯವಿಲ್ಲ. ಆದ್ದರಿಂದ ಸಾಂಸ್ಕೃತಿಕ ವಿಲಯನವಾಗಲೀ ರಾಜಕೀಯ ರಿಯಾಯಿತಿಗಳಾಗಲೀ ಕೋಮುವಾರು ಸಮಸ್ಯೆಯನ್ನು ಬಗೆಹರಿಸಲಾರವು. ಪಾಕಿಸ್ತಾನ

ರಚನೆಯಾಗದೆ ಇಂಡಿಯಾದಲ್ಲಿ ಪ್ರಬಲವಾದ ಕೇಂದ್ರ ಸರ್ಕಾರ ರಚನೆಯಾಗದು. ಈ ಎರಡು ಕೋಮುಗಳ ಅಂತಃಕಲಹದಿಂದಾಗಿ ಸುಧಾರಣೆಗಳಿಲ್ಲದೆ ಸಮಾಜ ಕೊಳೆತು ನಾರುತ್ತಿದೆ. ರೋಗಕಾರಕವಾದ ಪುರಾತನ ಸಂಪ್ರದಾಯಗಳಿಂದ ಎರಡು ಕೋಮುಗಳವರೂ ಮುಕ್ತರಾಗಿಲ್ಲ.

ಪಾಕಿಸ್ತಾನ ನಿರ್ಮಾಣಕ್ಕೆ ಮತೀಯ ಸಾಮಾಜಿಕ ಕಾರಣಗಳಷ್ಟೇ ಅಲ್ಲ, ತಾತ್ತ್ವಿಕ ಕಾರಣಗಳೂ ಇವೆ. ಮುಸ್ಲಿಮರನ್ನು ಒಂದು ಕೋಮೆಂದು ಪರಿಗಣಿಸುವುದಕ್ಕಿಂತ ಒಂದು ರಾಷ್ಟ್ರವೆಂದು ತಿಳಿಯುವುದೇ ಮೇಲು. ಚಾರಿತ್ರಿಕ, ಮತೀಯ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಈ ಮಾತಿನ ಯಥಾರ್ಥತೆ ಸ್ಥಿರಗೊಳ್ಳುತ್ತದೆ. ವರ್ಸೈಲೀಸ್ ಒಪ್ಪಂದದ ಫಲವಾಗಿ ರೂಪುಗೊಂಡ ರಾಷ್ಟ್ರಗಳ ಸ್ವಯಂನಿರ್ಣಯಾಧಿಕಾರ ತತ್ತ್ವವೂ ಈ ಸಂದರ್ಭ ದಲ್ಲಿ ಅನ್ವಯಗೊಳ್ಳಬಹುದಾಗಿದೆ. ಮೂಲ ಮುಸ್ಲಿಮರ ಸಂಖ್ಯೆ ಎಷ್ಟೇ ಇರಲಿ ಅವರು ವಿದೇಶೀಯರೆಂಬುದನ್ನು ಮರೆಯುವಂತಿಲ್ಲ. ಆಂಗ್ಲರ ಆಕ್ರಮಣಕ್ಕೆ ಮುಂಚೆ ಅವರು ಸಾರ್ವಭೌಮರಾಗಿ ಆಳಿದರು. ಆಂಗ್ಲರು ಕಸಿದುಕೊಂಡದ್ದು ಅವರ ರಾಜ್ಯವನ್ನು. ಇದು ಚಾರಿತ್ರಿಕಸತ್ಯ. ಅಂದ ಮೇಲೆ ಆಂಗ್ಲರ ನಿರ್ಗಮನಾನಂತರ ರಾಜ್ಯ ಅವರ ಕೈಗೆ ಹೋಗಬೇಕಾಗುತ್ತದೆ. ಬಹುಸಂಖ್ಯಾತರು ಅಲ್ಪಸಂಖ್ಯಾತರನ್ನು ತಮಗೆ ತೋರಿದ ರೀತಿಯಲ್ಲಿ ಆಳಲಾಗದು. ಅವರ ಹಕ್ಕುಗಳನ್ನು ಕಸಿದುಕೊಳ್ಳಲಾಗದು. ಅಂಥ ರಾಜ್ಯ ಎಂದಾದರೊಂದು ದಿನ ಒಡೆಯಲೇ ಬೇಕಾಗುತ್ತದೆನ್ನುವುದಕ್ಕೆ ಯೂರೋ ಪೀಯ ಚರಿತ್ರೆ ಸಾಕ್ಷ್ಯಾಧಾರಗಳನ್ನೊದಗಿಸುತ್ತದೆ. ಮುಸ್ಲಿಮ್ ಹಿಂದುಗಳು ಒಟ್ಟಾಗಿ ಬಾಳುವೆ ನಡೆಸಲಾರರು. ಅವರನ್ನೊಳಗೊಂಡ ಇಂಡಿಯಾ ಏಷಿಯಾದ ರೋಗಪೀಡಿತ ರಾಜ್ಯವಾಗುತ್ತದೆ. ರಾಷ್ಟ್ರವಿಭಜನೆಯಲ್ಲಿ ನೈತಿಕ ಪ್ರಶ್ನೆ ಹುದು ಗಿಲ್ಲ ; ರಾಜಕೀಯ ಸಾಮಾಜಿಕ ಸೈನಿಕ ಸಮಸ್ಯೆಗಳ ಪರಿಹಾರ ಅಡಕಗೊಂಡಿದೆ ಯೆಂಬುದನ್ನು ಮರೆಯುವಂತಿಲ್ಲ. ಯಾವ ದೃಷ್ಟಿಯಿಂದ ಪರಿಶೀಲಿಸಿದರೂ ಪಾಕಿಸ್ತಾನ ನಿರ್ಮಾಣ ಅನಿವಾರ್ಯ. ಈ ದ್ವಿರಾಷ್ಟ್ರ ತತ್ತ್ವ ಮುಸ್ಲಿಮರಿಗೆ ಅನ್ವಯವಾಗುತ್ತದೆಯೇ ಹೊರತು ಉಳಿದವರಿಗಲ್ಲ.

ಈ ಕೃತಿ ಬಾಂಬಿನಂತೆ ಸಿಡಿದು, ಕಲ್ಪನಾದರಿದ್ರರೂ ವಾಸ್ತವತಾದೃಷ್ಟಿ ಹೀನರೂ ಆದ ಸಂಪ್ರದಾಯವಾದಿಗಳ ಮನಸ್ಸನ್ನು ಕಲಕಿದ್ದರಲ್ಲಿ ಆಶ್ಚರ್ಯ ವಿಲ್ಲ. ಪ್ರವಾದಿಯಂತೆ ನುಡಿದ ಅವರ ಭವಿಷ್ಯ ಕೊನೆಗೂ ನಿಜವಾಯಿತು.

ವಿಭಜನಾನಂತರ ನಡೆದ ರಕ್ತಪಾತವನ್ನೂ. ನಿರಾಶ್ರಿತರು ಅನುಭವಿಸಿದ ಸಂಕಟ ಪರಂಪರೆಗಳನ್ನೂ. ಅವರ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಎರಡು ಸರ್ಕಾರ ಗಳು ಪಟ್ಟ ಶ್ರಮವನ್ನೂ ಗಮನಿಸಿದಾಗ ಅಂಬೇಡ್ಕರರು ಸೂಚಿಸಿದ ಜನವಿನಿಮಯ ಸೂತ್ರ ದೂರದೃಷ್ಟಿಯುಳ್ಳ ವ್ಯಕ್ತಿಯೊಬ್ಬನ ಭವಿಷ್ಯವಾಣಿ ಯೆಂದೇ ತಿಳಿಯಬೇಕಾಗುತ್ತದೆ. ಪಾಕಿಸ್ತಾನಪರವಾದ ಈ ಯೋಜನೆ ಯಿಂದಾಗಿ ಅವರನು ದೇಶದ್ರೋಹಿಯೆಂದು ಕೆಲವು ಅವಿಚಾರಿಗಳು ಕರೆಯ ಬಹುದು. ಅವರ ಒಂದೊಂದು ಸಲಹೆಯನ್ನೂ ಹಿಸುಕಿ ಹಿಸುಕಿ ಪರಾಮರ್ಶಿಸು ವಾಗ ಅವು ಭಾವೋದ್ರಿಕ್ತ ಸಮಯದಲ್ಲಿ ವಿದ್ವತ್ಪ್ರದರ್ಶನಾರ್ಥವಾಗಿ ರೂಪಿ ಸಿದುವಲ್ಲವೆಂಬುದು ಸ್ಪಷ್ಟವಾಗುತ್ತದೆ. ರಾಷ್ಟ್ರಪ್ರಜ್ಞೆ ಮತ್ತು ದೇಶಾಭಿಮಾನ ಗಳು ಒಂದೊಂದು ಸಲಹೆಯ ರೂಪದಲ್ಲಿ ಘನೀಭೂತಗೊಂಡಿವೆಯೆಂದು ಧೈರ್ಯವಾಗಿ ಹೇಳಬಹುದಾಗಿದೆ.

ವಾಸ್ತವತಾಪ್ರಜ್ಞೆ ಕಾಂಗ್ರೆಸ್ಸಿಗರ ಮನಸ್ಸಿನಲ್ಲಿ ಮಿಂಚುವ ಮುಂಚೆಯೇ ಅವರಿನ್ನೂ ಅವಿಭಕ್ತ ಭಾರತದ ಕನಸಿನಲ್ಲಿ ಮುಳುಗಿರುವಾಗಲೇ ಅಂಬೇಡ್ಕರರು ಶೀಘ್ರ ಸ್ವಾತಂತ್ರ್ಯೋದಯದ ದಾರಿ ತೋರಿಸಿಕೊಟ್ಟರು. ಈ ಪುಸ್ತಕವನ್ನು ಓದಿದನಂತರ ಕೆಲವು ಕಾಂಗ್ರೆಸ್ಸಿಗರು ಧೈರ್ಯತಂದುಕೊಂಡು ವಿಭಜನೆಯ ವಿಷಯ ಮಾತಾಡತೊಡಗಿದರು. ವೀರ ಸಾವರ್ಕರ್. ಮೂಂಜೆ, ಕೇಳ್ಕರರು ಅಂಬೇಡ್ಕರರ ಸಿದ್ಧಾಂತಗಳಿಂದ ಸಿಟ್ಟಿಗೆದ್ದರೂ ಅವರ ಸವಾಲುಗಳನ್ನೆದುರಿಸ ಲಾರದೆ ನಿರುತ್ತರರಾದರು. ಅಂಬೇಡ್ಕರರು ಪಾಕಿಸ್ತಾನದ ಪರವಾಗಿ ವಕಾ ಲತ್ತು ವಹಿಸಿದ್ದರೆಂದರೆ ತಪ್ಪಾಗುತ್ತದೆ. ಅವರ ವೈಜ್ಞಾನಿಕ ವಸ್ತುನಿಷ್ಠದೃಷ್ಟಿ ಈ ಸಲಹೆಗಳಲ್ಲಿ ಚಿಮ್ಮುತ್ತದೆ: ಅವರು ಮುಸ್ಲಿಮರ ದೋಷದೌರ್ಬಲ್ಯಗಳನ್ನು ಮುಲಾಜಿಲ್ಲದೆ ಟೀಕಿಸಿದ್ದಾರೆ. ಇಸ್ಲಾಂ ಬೋಧಿಸುವ ಭ್ರಾತೃತ್ವ ಮಹಮ್ಮ ದೀಯರಿಗೆ ಮಾತ್ರ ಸೀಮಿತವಾದದ್ದೆಂದೂ, ಮುಸ್ಲಿಮೇತರರ ನಾಡು ಅವರ ದೃಷ್ಟಿಯಲ್ಲಿ ಶತ್ರು ರಾಷ್ಟ್ರವೆಂದೂ, ಅವರು ಖಾರವಾಗಿ ವಾದಿಸಿದ್ದಾರೆ.

1941ರ ಜುಲೈ ತಿಂಗಳಲ್ಲಿ ಎಂಟು ಮಂದಿ ಭಾರತೀಯರನ್ನು ಸೇರಿಸಿ ಕೊಂಡು ವೈಸ್‌ರಾಯರು ತಮ್ಮ ಸಚಿವ ಸಂಪುಟವನ್ನು ವಿಸ್ತರಿಸಿದರು. ಸಿಖ್ಖರಿಗಾಗಲೀ ನಿಮ್ನವರ್ಗೀಯರಿಗಾಗಲೀ ಅಲ್ಲಿ ಪ್ರಾತಿನಿಧ್ಯ ದೊರಕ ದಿದ್ದುದು ಆ ಜನರ ಅತೃಪ್ತಿಗೆ ಕಾರಣವಾಯಿತು. ಜತೆಗೆ ನಾಡಿನ ಮುಖಂಡರು ನರೇಂದ್ರ ಮಂಡಲಿಯ ಪ್ರತಿನಿಧಿಗಳೂ ಉಳ್ಳ ರಾಷ್ಟ್ರೀಯ ರಕ್ಷಣಾ ಮಂಡಲಿ

ಯನ್ನು ರಚಿಸಿದರು. ಅಂಬೇಡ್ಕರರು ಆ ಸಮಿತಿಯ ಸದಸ್ಯರಾದರು. ಸಚಿವ ಸಂಪುಟದಲ್ಲಿ ಸ್ಥಾನ ಲಭಿಸದೆ ತಮ್ಮವರಿಗಾದ ಅನ್ಯಾಯದ ವಿರುದ್ಧ ಬ್ರಿಟಿಷ್ ಸರ್ಕಾರಕ್ಕೆ ಪ್ರತಿಭಟನೆ ಸಲ್ಲಿಸಿದರು. ಅಂಬೇಡ್ಕರರನ್ನು ಸಂಪುಟಕ್ಕೆ ಸೇರಿಸಿ ಕೊಳ್ಳುವಂತೆ ಸಾವರ್ಕರರೂ ವೈಸ್‌ರಾಯರಿಗೆ ತಂತಿ ಕಳಿಸಿದರು. ಆ ತಂತಿ ಗಳಿಂದ ಪ್ರಯೋಜನವಾಗಲಿಲ್ಲ. ಅಂಬೇಡ್ಕರರು ರಕ್ಷಣಾಮಂಡಲಿಯಲ್ಲಿದ್ದು ಕೊಂಡೇ ಕ್ಷಾತ್ರೀಕರಣ ಚಳುವಳಿಯನ್ನು ತೀವ್ರಗೊಳಿಸಿದರು.

ಮತ್ತೊಂದು ಸಂವತ್ಸರವುರುಳಿತು. ಸಂಗ್ರಾಮ ಮುಂದುವರಿದಿತ್ತು. ರಾಜಕೀಯ ಕ್ಷೇತ್ರದಲ್ಲಿ ಭೀತಿ ಸಂಶಯಗಳು ತಾಂಡವವಾಡುತ್ತಿದ್ದುವು. ಕಾಂಗ್ರೆಸ್ ನಾಯಕರು ಜೈಲಿನಲ್ಲಿದ್ದರು. ಗಾಂಧೀಜಿ ಮಾತ್ರ ಹೊರಗಿದ್ದರು. ಸಿಂಗಪುರ ಜಪಾನಿನ ವಶವಾಯಿತು. ಚಕ್ರವರ್ತಿಯ ಆಸನ ವಿಕಂಪಿಸಿತು. ಇಂಡಿಯಾ ಅಪಾಯದ ಅಂಚಿನಲ್ಲಿತ್ತು. ಅಲ್ಲಿಯ ರಾಜಕೀಯ ಪರಿಸ್ಥಿತಿ ಯನ್ನು ಸುಧಾರಿಸುವಂತೆ ಚೀನಾ ಮತ್ತು ಅಮೆರಿಕ ಬ್ರಿಟನ್ನಿನ ಮೇಲೆ ಒತ್ತಾಯ ತಂದುವು. ಆ ಒತ್ತಾಯದ ಪರಿಣಾಮವಾಗಿ ಸ್ಟಾಫರ್ಡ್ ಕ್ರಿಪ್ಸ್ ಇಂಡಿಯಾಕ್ಕೆ ಬರುತ್ತಾರೆಂಬ ಸುದ್ದಿ ಪ್ರಕಟವಾಯಿತು. ಅಂಬೇಡ್ಕರ್ ಕೂಡಲೇ ಒಂದು ಯೋಜನೆ ತಯಾರಿಸಿದರು. ಯುದ್ಧ ಮುಗಿದು ಒಪ್ಪಂದ ಕುದುರಿದ ಮೂರು ವರ್ಷಗಳೊಳಗಾಗಿ ಭಾರತಕ್ಕೆ ಡೊಮಿನಿಯನ್ ಸ್ಥಾನಮಾನಗಳನ್ನು ನೀಡಬೇಕೆಂದೂ. ಈ ನಡುವೆ ರಾಜಕೀಯ ಪಕ್ಷಗಳು ಸರ್ವಾನುಮತದ ಸೂತ್ರವನ್ನು ರೂಪಿಸಿಕೊಳ್ಳದಿದ್ದಲ್ಲಿ 'ಅಂತರರಾಷ್ಟ್ರೀಯ ಮಂಡಲಿಯನ್ನು ರಚಿಸಬೇಕೆಂದೂ. ಆ ಮಂಡಲಿಯ ತೀರ್ಪಿಗೆ ಸರ್ವರೂ ಬದ್ಧರಾಗಿರಬೇಕೆಂದೂ ಅವರು ಆ ಯೋಜನೆಯಲ್ಲಿ ಪ್ರತಿಪಾದಿಸಿದರು.

ಅದೇ ಸಮಯದಲ್ಲಿ ರಾಷ್ಟ್ರೀಯ ಸರ್ಕಾರ ರಚನೆಯಾಗಬಹುದೆಂಬ ವದಂತಿಯೂ ಹಬ್ಬಿತು. ಆ ಸರ್ಕಾರದಲ್ಲಿ ಮುಸ್ಲಿಮರಿಗೆ ಶೇಕಡ ಐವತ್ತು ಸ್ಥಾನಗಳನ್ನು ಕಾದಿರಿಸಬೇಕೆಂದು ಜಿನ್ನ ಶರತ್ತು ಹಾಕಿದರು. ವೈಸ್‌ರಾಯರು ಆ ಶರತ್ತನ್ನು ತಳ್ಳಿಹಾಕಿದರು. ಜಿನ್ನಾರವರ ಆ ಬೇಡಿಕೆ ವಕ್ರವಾದದ್ದೆಂದೂ, ಅದನ್ನು ಮಾನ್ಯಮಾಡುವುದಿದ್ದರೆ ರಾಷ್ಟ್ರೀಯ ಸರ್ಕಾರದ ರಚನೆ ಅಸಂಗತ ವಾಗುತ್ತದೆಂದೂ ಅಂಬೇಡ್ಕರರು ಹೇಳಿಕೆಯಿತ್ತರು.

ಮಾರ್ಚಿ ತಿಂಗಳಲ್ಲಿ ಕ್ರಿಪ್ಸ್ ಭಾರತಕ್ಕೆ ಬಂದರು. ಸರ್ವ ರಾಜಕೀಯ ಪಕ್ಷಗಳ ಮತ್ತು ನರೇಂದ್ರ ಮಂಡಲಿಯ ಪ್ರತಿನಿಧಿಗಳೊಡನೆ ಅವರು ಚರ್ಚೆ

ನಡೆಸಿದರು. ಅಂಬೇಡ್ಕರರೂ ಅವರನ್ನು ಭೇಟಿಮಾಡಿ. ತಮ್ಮ ಸಲಹೆಗಳನ್ನು ವಿವರಿಸಿದರು. ಯುದ್ಧ ಮುಗಿದ ಕೂಡಲೇ ರಾಜ್ಯಾಂಗ ಸಭೆಯನ್ನು ಕರೆಯುವುದಾಗಿಯೂ, ಆ ಸಭೆ ಸಂಸ್ಥಾನಿಕರ ಸಹಕಾರದೊಡನೆ ರಾಜ್ಯಾಂಗದ ಕರಡು ಸಿದ್ಧಪಡಿಸುವುದಾಗಿಯೂ, ಭಾರತದ ಒಕ್ಕೂಟವನ್ನು ಸೇರುವ ಅಥವಾ ಬಿಡುವ ಹಕ್ಕು ಪ್ರಾಂತಗಳಿಗೆ ಸೇರಿದ್ದೆಂದೂ ಕ್ರಿಪ್ಸ್ ಕೆಲವು ಸಲಹೆಗಳನ್ನು ನಾಯಕರ ಮುಂದಿಟ್ಟರು. ಆ ಸಲಹೆಗಳು ಮುಂದಿನ ತಾರೀಖು ನಮೂದಿಸಿದ ಚೆಕ್ಕಿನಂತಿವೆಯೆಂದು ಗಾಂಧೀಜಿ ಉದ್ಗಾರ ತೆಗೆದರು. ಭಾರತವನ್ನು ಖಂಡ ಖಂಡವಾಗಿ ಕತ್ತರಿಸುವ ಹುನಾರೆಂದು ಸಾವರ್ಕರ್ ಅವನ್ನು ಸಂಪೂರ್ಣವಾಗಿ ತಿರಸ್ಕರಿಸಿದರು. ಪಾಕಿಸ್ತಾನ ನಿರ್ಮಾಣದ ಬಗ್ಗೆ ಸ್ಪಷ್ಟೋಲ್ಲೇಖವಿಲ್ಲವೆಂದು ಮುಸ್ಲಿಮ್ ಲೀಗು ತನ್ನ ವಿರೋಧ ವ್ಯಕ್ತಪಡಿಸಿತು. ಆ ಸಲಹೆಗಳ ಪ್ರಕಾರ ತಮ್ಮ ಪರಿಸ್ಥಿತಿ ಎಂದಿನಂತೆ ಮುಂದುವರಿಯುತ್ತದೆಂದೂ ತಮಗೆ ನ್ಯಾಯ ದೊರಕುವುದಿಲ್ಲವೆಂದೂ ಅಂಬೇಡ್ಕರರೂ ಅವುಗಳನ್ನೊಪ್ಪಿಕೊಳ್ಳಲಿಲ್ಲ. ಬ್ರಿಟಿಷ್ ಸರ್ಕಾರದಲ್ಲಿ ತಾವಿಟ್ಟಿದ್ದ ವಿಶ್ವಾಸಕ್ಕೆ ಪ್ರತಿಯಾಗಿ ಅದು ತಮಗೆ ದ್ರೋಹ ಬಗೆದಿದೆಯೆಂದು ಅವರು ಟೀಕಿಸಿದರು.

"ನೀವು ನಿಮ್ನವರ್ಗೀಯರನ್ನು ಪ್ರತಿನಿಧಿಸುತ್ತೀರೋ ಅಥವಾ ಕಾರ್ಮಿಕರನ್ನೋ?" ಎಂದು ಸಂದರ್ಶನ ಸಮಯದಲ್ಲಿ ಕ್ರಿಪ್ಸ್ ಅಂಬೇಡ್ಕರರನ್ನು ಪ್ರಶ್ನಿಸಿದರು. ಆ ಪ್ರಶ್ನೆಯಿಂದಾಗಿ, ತಾವು ಮೊದಲು ನಿಮ್ನಜನರ ಪ್ರತಿನಿಧಿ, ಅನಂತರ ಉಳಿದದ್ದು ಎಂದು ತೀರ್ಮಾನಿಸಿಕೊಂಡರು. ಯಾರ ಏಳ್ಗೆಗಾಗಿ ಇಪ್ಪತ್ತೈದು ವರ್ಷಗಳಿಂದ ಸತತವಾಗಿ ಶ್ರಮಿಸುತ್ತಿದ್ದರೋ, ಯಾವ ಜನ ತಮ್ಮನ್ನೇ ನಂಬಿಕೊಂಡಿದ್ದರೋ ಅಂಥವರನ್ನು ಅನಾಥಗೊಳಿಸುವುದು ಅವರಿಗಿಷ್ಟವಾಗಲಿಲ್ಲ. ಆದ್ದರಿಂದ ದೆಹಲಿಯಲ್ಲಿದ್ದಾಗಲೇ ನಿಮ್ನವರ್ಗದ ಮುಖಂಡರ ಸಭೆ ಕರೆದು ಕ್ರಿಪ್ಸ್ ಯೋಜನೆಯನ್ನೂ ಮುಂದಿನ ಕಾರ್ಯಕ್ರಮಗಳನ್ನೂ ಕುರಿತು ಚರ್ಚಿಸಿದರು. ಅನಂತರ ನಾಗಪುರದಲ್ಲಿ ನಿಮ್ನವರ್ಗೀಯರ ಸಭೆ ಕರೆದು, ಅಖಿಲ ಭಾರತೀಯ ಸಂಸ್ಥೆಯೊಂದನ್ನು ಸಂಸ್ಥಾಪಿಸುವುದೆಂದು ನಿರ್ಧಾರ ಕೈಗೊಂಡರು.

ಅಂಬೇಡ್ಕರರು ಐವತ್ತನೆಯ ವರ್ಷದಲ್ಲಿ ಕಾಲಿಡುತ್ತಿದ್ದಂತೆಯೇ, ಅವರ ಜನ್ಮೋತ್ಸವವನ್ನಾಚರಿಸಬೇಕೆಂದು ಹಲವಾರು ಸಂಸ್ಥೆಗಳು ಸನ್ನದ್ಧವಾದುವು. ನಲವತ್ತೈದು ಸಾರ್ವಜನಿಕ ಸಂಸ್ಥೆಗಳು ಸ್ವತಂತ್ರ ಕಾರ್ಮಿಕ ಪಕ್ಷದೊಡನೆ

ಸೇರಿಕೊಂಡು ಮುಂಬಯಿಯ ಎಲ್ಲ ಮೊಹಲ್ಲಗಳಲ್ಲಿ ಒಂಬತ್ತು ದಿನ ಸುವರ್ಣ ಮಹೋತ್ಸವವನ್ನು ವಿಜೃಂಭಣೆಯಿಂದ ಆಚರಿಸಿದುವು. ಪ್ರತಿ ದಿನ ಬೆಳಗ್ಗೆ ಉತ್ಸವ ಧ್ವಜಾರೋಹಣದಿಂದ ಪ್ರಾರಂಭವಾಗಿ, ಸಂಜೆಯ ಮೆರವಣಿಗೆಯಲ್ಲಿ ಮುಂದುವರಿದು, ಸಾರ್ವಜನಿಕ ಸಭೆಯಲ್ಲಿ ಕೊನೆಗೊಳ್ಳುತ್ತಿತ್ತು. ಪುಣೆಯಲ್ಲಿ ನಡೆದ ಸಮಾರಂಭದಲ್ಲಿ ಎಂ. ಸಿ. ರಾಜಾ ಮತ್ತು ರಾಜಭೋಜರು ತಮ್ಮ ನಾಯಕರ ನಿಸ್ವಾರ್ಥ ಸೇವೆಯನ್ನು ಮುಕ್ತಕಂಠದಿಂದ ಪ್ರಶಂಸಿಸಿದರು. ಪುರ ಸಭಾಧ್ಯಕ್ಷರ ಅಧ್ಯಕ್ಷತೆಯಲ್ಲಿ ನಡೆದ ಮತ್ತೊಂದು ಸಮಾರಂಭದಲ್ಲಿ ಅವರ ಪ್ರತಿಭಾಸಂಪತ್ತನ್ನೂ ಸಾಧನೆ ಸಿದ್ಧಿಗಳನ್ನೂ ವಿವರಿಸಲಾಯಿತು. ಜಿಲ್ಲಾ ಬೋರ್ಡಿನ ಆಶ್ರಯದಲ್ಲಿ ನಡೆದ ಮತ್ತೊಂದು ಸಭೆಯಲ್ಲಿ ಬಾಬಾಸಾಹೇಬರ ಭಾವಚಿತ್ರವನ್ನು ಅನಾವರಣಮಾಡಿದಾಗ, ಅವರು ನಿಮ್ನ ವರ್ಗದ ನಾಯಕರು ಮಾತ್ರವಲ್ಲ, ನಾಡಿನ ಅಗ್ರಗಣ್ಯನಾಯಕರಲ್ಲೊಬ್ಬರೆಂದು ಕೊಂಡಾಡಲಾಯಿತು.

ಚೌಪತ್ತಿಯಲ್ಲಿ ಏಪ್ರಿಲ್ 19ರಂದು ಜಯಕರ್ ಅವರ ಅಧ್ಯಕ್ಷತೆಯಲ್ಲಿ ಜರುಗಿದ ಸಮಾರಂಭದಲ್ಲಿ ಸುವರ್ಣಮಹೋತ್ಸವ ಮುಗಿಲು ಮುಟ್ಟಿತು. ಊರಿನ ಕೇರಿಕೇರಿಗಳಲ್ಲಿ ತಂಡೋಪತಂಡವಾಗಿ ಹರಿದು ಬಂದ ಮೆರವಣಿಗೆಗಳು ಬೃಹತ್ಸಭಾ ಸಾಗರದಲ್ಲಿ ಪರ್ಯವಸಾನಗೊಂಡುವು. ಸುವರ್ಣಮಹೋತ್ಸವ ಸಮಿತಿಯ ಅಧ್ಯಕ್ಷರಾದ ಆಚಾರ್ಯದೋಂಡೆಯವರು ನವಯುಗ ಪ್ರವರ್ತಕ ರೆಂದೂ, ಕಾರಣಪುರುಷರೆಂದೂ ಅಂಬೇಡ್ಕರರನ್ನು ಹೊಗಳಿದರು. ಮುಂಬ ಯಿಯ ಶರೀಫರಾದ ಎಂ. ಆರ್. ಎ. ಬೇಗ್ ಬಾಬಾಸಾಹೇಬರ ಅಪೂರ್ವ ವಿದ್ವತ್ತನ್ನು ವರ್ಣಿಸಿದರು. ನಾಲ್ಕನೆಯ ತರಗತಿಯಲ್ಲಿ ತಮ್ಮ ವಿದ್ಯಾರ್ಥಿ ಯಾಗಿದ್ದ ಭೀಮರಾಯರ ಗುಣಶೀಲಗಳನ್ನು ಎನ್. ಎಂ. ಜೋಷಿಯವರು ಹೆಮ್ಮೆಯಿಂದ ಸ್ಮರಿಸಿಕೊಂಡರು. ಯುವಕರು ಕಚನಂತೆ ಧ್ಯೇಯ ಭ್ರಷ್ಟರಾಗದೆ ಏಕೈಕ ನಿಷ್ಠೆಯಿಂದ ಸಾಧನಾನಿರತರಾದ ಪಕ್ಷದಲ್ಲಿ ಜಯ ಕಟ್ಟಿಟ್ಟಬುತ್ತಿ ಯೆಂದೂ, ದ್ರೋಣಾಚಾರ್ಯರಂತೆ ಆತ್ಮಗೌರವ ಆತ್ಮಪ್ರತ್ಯಯಗಳನ್ನು ಬೆಳೆಸಿ ಕೊಳ್ಳಬೇಕೆಂದೂ ಅಂಬೇಡ್ಕರರು ನುಡಿದು, ತಮ್ಮ ಯಶಸ್ಸಿನ ಮೂಲವನ್ನು ಪರೋಕ್ಷವಾಗಿ ತಿಳಿಸಿದರು. ನಿಮ್ನವರ್ಗದವರ ಏಳ್ಗೆಗಾಗಿ ಅಂಬೇಡ್ಕರರು ಕೈಗೊಂಡ ಕಾರ್ಯಕ್ರಮಗಳನ್ನೂ, ಅನುಭವಿಸಿದ ಯಾತನೆಗಳನ್ನೂ ಜಯಕರ್ ಅವರು ಆಮೂಲಾಗ್ರವಾಗಿ ವಿವರಿಸಿದರು. ನಿಮ್ನವರ್ಗೀಯರಿಗೆ ಭರವಸೆಯಾಗಿ ಸವರ್ಣೀಯರಿಗೆ ಎಚ್ಚರಿಕೆಯಾಗಿ ಅವರು ಭಾರತಕ್ಕೆ ಸಲ್ಲಿಸಿದ

ಸೇವೆ ಅದ್ವಿತೀಯವಾದುದೆಂದು ನುಡಿದರು. ಅವರ ಸ್ವತಂತ್ರ ವಿಚಾರಧಾರೆಯನ್ನು ಮನಸಾರೆ ಹೊಗಳಿದರು. ಚಕ್ರಗೋಷ್ಠಿಯಲ್ಲಿ, ಅಂತೆಯೇ ಪೂನಾ ಒಪ್ಪಂದದ ಸಮಯದಲ್ಲಿ ಅವರು ಅಭಿನಯಿಸಿದ ಪಾತ್ರವನ್ನು ಅಧಿಕಾರ ವಾಣಿಯಿಂದ ಪ್ರಸ್ತಾಪಿಸಿದರು

ಪರೇಲಿನ ಕಮ್‌ಗರ್ ಮೈದಾನದಲ್ಲಿ ನಡೆದ ಸಮಾರಂಭದಲ್ಲಿ ಅಂಬೇಡ್ಕರರು ಇನ್ನು ಮುಂದೆ ತಮ್ಮ ಜನ್ಮೋತ್ಸವವನ್ನು ಆಚರಿಸಕೂಡದೆಂದು. ಮಾನವನನ್ನು ದೇವತ್ವಕ್ಕೇರಿಸುವ ಸಮಾಜ ವಿನಾಶ ಮುಖವಾಗುತ್ತದೆಂದೂ. ಯಾರಲ್ಲಿಯೂ ದೈವೀ ಅಥವಾ ಅತಿಮಾನವೀಯ ಲಕ್ಷಣಗಳಿಲ್ಲವೆಂದೂ. ಪ್ರತಿಯೊಬ್ಬನೂ ಸ್ವಪ್ರಯತ್ನದಿಂದ ಮೇಲೇರುತ್ತಾನೆ, ಇಲ್ಲವೆ ಕೆಳಗೆ ಬೀಳುತ್ತಾನೆಂದೂ ಸ್ಪಷ್ಟಪಡಿಸಿದರು. ಅಂಥ ಸಮಾರಂಭಗಳಿಗೆ ಮಂಗಳ ಹಾಡುವಂತೆ ಅವರು ಕಾರ್ಯಕರ್ತರನ್ನು ಸವಿನಯವಾಗಿ ಪ್ರಾರ್ಥಿಸಿಕೊಂಡರು.

ಅವರ ಜನ್ಮವರ್ಷದ ಸುವರ್ಣಮಹೋತ್ಸವ ಜನಮನಸ್ಸಿನಲ್ಲಿ ಹಸುರಾಗಿರುವಾಗಲೇ ವೈಸ್‌ರಾಯರು ಸಚಿವ ಸಂಪುಟವನ್ನು ವಿಸ್ತರಿಸುವರೆಂಬ ಸುದ್ದಿ ನಾಡಿನಲ್ಲೆಲ್ಲ ಹರಡಿತು. ಜುಲೈ 2ರಂದು ಹೆಸರುಗಳ ಪಟ್ಟಿ ಪ್ರಕಟವಾದುವು. ಆ ಪಟ್ಟಿಯಲ್ಲಿ ಸಿ. ಪಿ. ರಾಮಸ್ವಾಮಿ ಅಯ್ಯರ್, ಮಹ್ಮದ್ ಉಸ್ಮಾನ್, ಜೆ. ಪಿ. ಶ್ರೀವಾಸ್ತವ ಮತ್ತು ಜೋಗೇಂದ್ರಸಿಂಗರ ಜತೆಗೆ ಅಂಬೇಡ್ಕರರ ಹೆಸರೂ ಇತ್ತು. ಕಾರ್ಮಿಕರ ಹಿತಚಿಂತಕರಾದ ಅಂಬೇಡ್ಕರರಿಂದ ಕಾರ್ಮಿಕ ವರ್ಗಕ್ಕೆ ಶುಭವಾಗುತ್ತದೆಂದು ಕಾಂಗ್ರೆಸ್ ಪರವಾದ ಪತ್ರಿಕೆಗಳು ಅಭಿಪ್ರಾಯ ವ್ಯಕ್ತಪಡಿಸಿದುವು. ಅವರ ದೀರ್ಘಸಾಧನೆ ಕಾರ್ಮಿಕಸಚಿವ ಪದವಿಯಲ್ಲಿ ಸಹಜಸಿದ್ಧಿ ಪಡೆದಿದೆಯೆಂದು ಕೆಲವು ಪತ್ರಿಕೆಗಳು ಬರೆದುವು. ಭಾರತದ ಇತಿಹಾಸದಲ್ಲಿ ಅಸ್ಪೃಶ್ಯನೊಬ್ಬ ಮಂತ್ರಿಯಾದದ್ದು ಅದೇ ಮೊದಲು ; ಅಷ್ಟೇ ಅಲ್ಲ, ಶ್ರೀಸಾಮಾನ್ಯರ ಪ್ರತಿನಿಧಿಯಾಗಿ ಸಚಿವ ಪದವಿ ಪಡೆದವರಲ್ಲಿಯೂ ಅವರೇ ಪ್ರಪ್ರಥಮರು. ಅವರು ಮೊಟ್ಟಮೊದಲು ಸಾಮಾಜಿಕ ನ್ಯಾಯಗಾರರೂ ಅಹುದು. ಬಡತನದಲ್ಲಿ ಹುಟ್ಟಿ ಬೆಳೆದ ಹಳ್ಳಿಯ ಅಸ್ಪೃಶ್ಯ ಡಿಳ್ಳಿಯಲ್ಲಿ ಶಿಖರಸ್ಥಾನವನ್ನೇರಿದ್ದೊಂದು ಪವಾಡವೇ ಸರಿ.

ಅಂಬೇಡ್ಕರರ ಈ ಅಭ್ಯುದಯದಿಂದ ಸಾವರ್‌ಕರರಿಗಾದ ಆನಂದ ಅಷ್ಟಿಷ್ಟಲ್ಲ. ಸಪ್ರು, ಅಣೆ, ಸುಲ್ತಾನ್ ಅಹಮದ್, ಬಿಕನೀರ್ ಮಹಾರಾಜರೇ ಮೊದಲಾದ ನಾಡಿನ ಧುರೀಣರು ಅವರ ಮೇಲೆ ಅಭಿನಂದನೆಗಳ ಮಳೆ

ಗರೆದರು. ಮುಂಬಯಿಯ ರೇಡಿಯೋ ಕ್ಲಬ್ಬಿನಲ್ಲಿ ಏರ್ಪಡಿಸಿದ್ದ ಭೋಜನ ಕೂಟದಲ್ಲಿ ನಡೆದ ಅಭಿನಂದನ ಭಾಷಣಗಳಿಗೆ ಅಂಬೇಡ್ಕರರು ಉತ್ತರಕೊಡುತ್ತ "ನಾನು ಹುಟ್ಟಿದ್ದು ಬಡವರ ನಡುವೆ, ಬೆಳೆದದ್ದು ಅವರ ಮಧ್ಯೆ, ಬಾಳಿದ್ದು ಅವರ ಸಮೂಹದಲ್ಲಿ ಮಲಗಿದ್ದು ತಣ್ಣನೆಯ ನೆಲದ ಮೇಲೆ ; ಹೊದ್ದದ್ದು ಗೋಣಿಚೀಲ ; ಹಂಚಿಕೊಂಡದ್ದು ಆ ಬಡಜನರ ಗೋಳು. ಇನ್ನು ಮುಂದೆಯೂ ನನ್ನ ನಡೆನುಡಿ ಚಾಳಿಗಳು ಮಾರ್ಪಾಡಾಗಲಾರವು. ನನ್ನ ಜನರನ್ನಾಗಲೀ ಗೆಳೆಯರನ್ನಾಗಲೀ ಮರೆಯಲಾರೆ. ಅವರಿಗಾಗಿ ಹೊಸದೆಹಲಿಯ ನನ್ನ ಮನೆಯ ಬಾಗಿಲು ಯಾವಾಗಲೂ ತೆರೆದಿರುತ್ತದೆ" ಎಂದು ನುಡಿದರು.

ಬೆಳಗಿನಿಂದ ಸಂಜೆಯವರೆಗೆ ಬಿಡುವಿಲ್ಲದೆ ನಡೆಯುತ್ತಿದ್ದ ಹತ್ತಾರು ಅಭಿನಂದನ ಸಮಾರಂಭಗಳು ಅವರ ಜನಪ್ರಿಯತೆಗೆ ಹಾಗೂ ಇಡೀ ಹಿಂದುಳಿದ ಜನರ ಜಾಗೃತಿಗೆ ನಿಶಾನಿಯಾಗಿದ್ದುವು. ಜುಲೈ 18–19ರಂದು ನಾಗಪುರದಲ್ಲಿ ಜರುಗಿದ ಅಖಿಲ ಭಾರತೀಯ ನಿಮ್ನ ಜನಾಂಗದ ಸಮ್ಮೇಲನ ಅಂಬೇಡ್ಕರರಿಗೆ ನೀಡಿದ ಸ್ವಾಗತ ನ ಭೂತೋ ನ ಭವಿಷ್ಯತಿ ಎನ್ನುವಂತಿತ್ತು. ಎನ್. ಶಿವಾಜಿರಾವ್ ಅವರು ಸಮ್ಮೇಲನಾಧ್ಯಕ್ಷರಾಗಿದ್ದರೂ, ನಾಡಿನ ನಾನಾ ಭಾಗಗಳಿಂದ ಆಗಮಿಸಿದ್ದ ಸಹಸ್ರ ಸಹಸ್ರ ಸಂಖ್ಯೆಯ ಪ್ರತಿನಿಧಿಗಳ ದೃಷ್ಟಿಯೆಲ್ಲ ತಮ್ಮ ಮಹಾ ನಾಯಕರ ಮೇಲೆ ಕೇಂದ್ರೀಕೃತವಾಗಿತ್ತು. ಮಂತ್ರಿ ಪದವಿಯನ್ನು ಪಡೆದದ್ದಕ್ಕಾಗಿ ಅಧ್ಯಕ್ಷರು ಅಂಬೇಡ್ಕರರನ್ನು ಮಹಾಸಭೆಯ ಪರವಾಗಿ ಅಭಿನಂದಿಸಿದರು. ಅಂಬೇಡ್ಕರರು ಮಾತಾಡಲೆದ್ದಾಗ ಭೂವ್ಯೋಮಾಕಾಶಗಳನ್ನು ಬಿರಿಯುವಂತಿದ್ದ ಹರ್ಷೋದ್ಗಾರ ಕರತಾಡನಗಳನ್ನು ನಿಲ್ಲಿಸುವಲ್ಲಿ ಅಧ್ಯಕ್ಷರು, ಸ್ವಯಂಸೇವಕರು ಮಾತ್ರವಲ್ಲ, ಭಾಷಣಕಾರರೂ ಸಭೆಗೆ ಕೈಮುಗಿದು ವಿನಂತಿಸಿಕೊಳ್ಳಬೇಕಾಯಿತು. ಕ್ರಿಪ್ಸ್ ಯೋಜನೆ ನಿಮ್ನವರ್ಗೀಯರಿಗೆ ಮಾಡಿದ್ದ ಅನ್ಯಾಯವನ್ನೂ, ತಾವು ಪ್ರತ್ಯೇಕ ರಾಷ್ಟ್ರವೆಂದು ಕೂಗು ಹಾಕುತ್ತಿರುವ ಮುಸ್ಲಿಮರಿಂದ ತಮ್ಮ ಹಿತಾಸಕ್ತಿಗಳಿಗೆ ಧಕ್ಕೆಯೊದಗಿದ್ದಾದರೆ ಅವರ ಮೇಲೆಯೇ ತಿರುಗಿಬೀಳಬೇಕಾಗ ಬಹುದಾದ ಅಗತ್ಯತೆಯನ್ನೂ ನಾಯಕರು ತಮ್ಮ ಭಾಷಣದಲ್ಲಿ ಸಾಂಗೋಪಾಂಗ ವಾಗಿ ವಿವರಿಸಿದರು. "ಅಸ್ಪೃಶ್ಯರು ಪ್ರಗತಿಪಥದಲ್ಲಿ ದಾಪುಗಾಲು ಹಾಕುತ್ತಿರುವುದು ತೃಪ್ತಿಯ ಸಂಗತಿಯಾಗಿದೆ. ರಾಜಕೀಯ ಜಾಗೃತಿಯ ದೃಷ್ಟಿಯಿಂದ ಅವರು ಇತರ ಕೆಲವರಿಗಿಂತ ಮುಂದುವರಿದಿದ್ದಾರೆಂದೇ ಹೇಳಬಹುದು. ಮಹಿಳೆಯರ ಪ್ರಗತಿಯಂತು ಆಶಾದಾಯಕವಾಗಿದೆ. ಹಿಂದುಗಳ ಔದಾರ್ಯ

ದಿಂದ ನಾವು ಮುಂದೆ ಬಂದಿಲ್ಲ. ಇದೆಲ್ಲ ನನ್ನ ಶ್ರಮದ ಫಲ. ಮುಸ್ಲಿಮ ರಂತೆಯೇ ಅಸ್ಪೃಶ್ಯರೂ ಹಿಂದೂ ಮತದ ಅವಿಭಾಜ್ಯಾಂಗವಲ್ಲವೆಂಬುದೇ ನನ್ನ ಅಭಿಮತ. ಹಿಂದುಗಳೊಡನೆ ಸೇರಿಕೊಳ್ಳದೆ ಪ್ರತ್ಯೇಕ ರಾಜಕೀಯಾಧಿ ಕಾರವನ್ನು ನಾವು ಗಿಟ್ಟಿಸಿಕೊಳ್ಳಬೇಕಾಗಿದೆ. ನಿಮ್ಮ ವರ್ಗದ ಪ್ರತಿನಿಧಿಯೊಬ್ಬನಿಗೆ ಸಚಿವ ಸಂಪುಟದಲ್ಲಿ ದೊರಕಿರುವ ಸ್ಥಾನದಿಂದಾಗಿ ಬ್ರಾಹ್ಮಣಿಕೆಗೆ ಭಾರಿ ಪೆಟ್ಟು ಬಿದ್ದಂತಾಗಿದೆ.

"ನಾನು ಬೇಶರತ್ತಾಗಿ ಸಮರೋದ್ಯಮವನ್ನು ಬೆಂಬಲಿಸುತ್ತೇನೆ. ಕುಲಮದದ ತಳಹದಿಯ ಮೇಲೆ ಅನೀತಿಯ ವಾತಾವರಣದಲ್ಲಿ ಸರ್ವಾಧಿಕಾರ ವಿಜೃಂಭಿಸುತ್ತಿದೆ. ಅದಕ್ಕೂ ಪ್ರಜಾಪ್ರಭುತ್ವಕ್ಕೂ ಕಲಹ ಸಮನಿಸಿರುವಾಗ ಪ್ರಜಾಪ್ರಭುತ್ವಕ್ಕೆ ಸಹಾಯ ನೀಡುವುದು ನಮ್ಮ ಧರ್ಮ. ನಾಜಿ ದೈತ್ಯನ ಮುಂದೆ ಪ್ರಜಾಪ್ರಭುತ್ವ ತತ್ತರಿಸಿದ್ದಾದರೆ ಮನುಕುಲದ ಭವಿಷ್ಯ ಮಣ್ಣು ಗೂಡುತ್ತದೆ ; ನಾಗರಿಕತೆ ನಾಶವಾಗುತ್ತದೆ.

"ನಿಮಗೆ ನಾನು ನೀಡಬಹುದಾದ ಬುದ್ಧಿವಾದವಿಷ್ಟೆ : ವಿದ್ಯಾವಂತರಾಗಿ ಆತ್ಮವಿಶ್ವಾಸ ಬೆಳೆಸಿಕೊಳ್ಳಿ. ಸಂಘ ವ್ಯವಸ್ಥೆಯ ಕಡೆಗೆ ಗಮನ ಹರಿಸಿ. ಚಳುವಳಿಯನ್ನು ಮುಂದುವರಿಸಿ. ಧರ್ಮಕ್ಕೆ ಅಂತಿಮ ಜಯ ಸಿದ್ಧ. ನನಗಂತು ಹೋರಾಟ ಆನಂದದ ಸಂಗತಿಯಾಗಿದೆ. ನಮ್ಮ ಸಮರಧ್ಯೇಯ ಮುಖ್ಯವಾಗಿ ವಿಮೋಚನೆ. ಮಾನವತೆಯ ಪಾಪವಿಮೋಚನೆಗಾಗಿ. ಅದರ ಪುನರುತ್ಥಾಪನೆಗಾಗಿ ನಡಸುವ ಸಂಗ್ರಾಮವಾಗಿದೆ." ಕಿಕ್ಕಿರಿದ ಸಭೆ ಸುಮಾರು ಒಂದೂವರೆ ಗಂಟೆ ಕಾಲ ಶಿಲಾಮೌನದಿಂದ ಭಾಷಣವನ್ನಾಲಿಸಿ, ಅದು ಮುಕ್ತಾಯಗೊಂಡಾಗ ತೃಪ್ತಿಯ ಮನೋಭಾವದಿಂದ ಕೇಗಿತು.

ಅದೇ ಮಂಟಪದಲ್ಲಿ ನಡೆದ ನಿಮ್ನ ವರ್ಗೀಯ ಮಹಿಳೆಯರ ಸಮ್ಮೇಲನದಲ್ಲಿ ಅವರು ಭಾಗವಹಿಸಿ, ಅವರ ಕರ್ತವ್ಯ ಕರ್ಮಗಳನ್ನು ವಿವರಿಸಿದರು. "ಸಾಮಾಜಿಕ ರೋಗರುಜಿನಗಳ ಶೀಘ್ರ ಪರಿಹಾರ ಸ್ತ್ರೀಯರಿಂದ ಮಾತ್ರ ಸಾಧ್ಯ. ಯಾವಾಗಲೂ ಶುಚಿಯಾಗಿರಿ. ದುರ್ಗುಣಗಳನ್ನು ತ್ಯಜಿಸಿ. ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಿ. ಅವರಲ್ಲಿ ಮಹತ್ವಾಕಾಂಕ್ಷೆಯನ್ನು ಬಿತ್ತಿ. ಅವರಿಗೆ ಮಹಾಭವಿಷ್ಯವಿದೆಯೆಂಬ ಆಸೆಯನ್ನು ಚಿಗುರಿಸಿ. ಅವರಲ್ಲಿನ ದೈನ್ಯ ಪ್ರವೃತ್ತಿಯನ್ನು ತೊಲಗಿಸಿ, ಮದುವೆಯೂ ಒಂದು ಋಣ. ಆದ್ದರಿಂದ ಆ ವಿಷಯದಲ್ಲಿ ಅವಸರ ಸಲ್ಲದು. ಸ್ವಾವಲಂಬಿಗಳಾಗುವ ತನಕ ಮಕ್ಕಳ ಕೊರಳಿಗೆ ಮದುವೆಯೆಂಬ ಗುಂಡನ್ನು ಬಿಗಿಯಬೇಡಿ. ಬಹು ಸಂತಾನ ಮಹಾಪ

ರಾಧವೆಂಬುದನ್ನವರಿಗೆ ಮನಗಾಣಿಸಿ. ನಿಮಗಿಂತ ನಿಮ್ಮ ಮಕ್ಕಳನ್ನು ಉತ್ತಮ ಸ್ಥಿತಿಯಲ್ಲಿಡುವ ಹೊಣೆಗಾರಿಕೆ ನಿಮ್ಮದಾಗಿದೆ. ತರುಣಿಯರು ತಮ್ಮ ಗಂಡಂದಿರಿಗೆ ಸಮನಾಗಿ, ಗೆಳತಿಯರಾಗಿ, ಬೆಂಬಲವಾಗಿ ನಿಲ್ಲಬೇಕೇ ಹೊರತು ಅವರಿಗೆ ದಾಸಿಯರಾಗಕೂಡದು."

ಸಚಿವ ಸಂಪುಟದ ವಿಸ್ತರಣೆಗೆ ಸಂಬಂಧಿಸಿದ ಸುದ್ದಿ ಪ್ರಕಟವಾಗಿ ಹದಿನೈದು ದಿನ ಸಂದಿದ್ದರೂ ಅಂಬೇಡ್ಕರರ ವರ್ತನೆಯಲ್ಲಿ ಕಾತರ ಕಾಣಲಿಲ್ಲ : ಶೀಘ್ರವಾಗಿ ಸಂಪುಟ ಸೇರಬೇಕೆಂದು ಹಾತೊರೆಯಲಿಲ್ಲ. ಒಂದು ಬಗೆಯ ದಿವ್ಯ ನಿರ್ಲಕ್ಷತೆಯಿಂದ ನಿತ್ಯ ವ್ಯವಹಾರಗಳಲ್ಲಿ ತಲ್ಲೀನರಾಗಿದ್ದರು. ರಾಜದೂತ ನಾಗಪುರಕ್ಕೆ ಬಂದು, ಸಮ್ಮೇಲನ ಸ್ಥಳವನ್ನು ಹುಡುಕಿ, ವೈಸ್‌ರಾಯ್‌ರ ಸಂದೇಶವನ್ನೊಪ್ಪಿಸಿದಾಗಲೇ ಅವರು ಎಚ್ಚೆತ್ತದ್ದು. ಕೂಡಲೇ ದೆಹಲಿಗೆ ಪ್ರಯಾಣ ಬೆಳೆಸಬೇಕೆಂದು. 1942ನೆಯ ಜುಲೈ 20ರಂದು ತಾವಿದ್ದ ಕಡೆಯಿಂದಲೇ ಕಾರ್ಮಿಕ ಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದುದಾಗಿ ದೆಹಲಿಗೆ ತಂತಿ ಕಳುಹಿಸಿದರು.

ಅವರು ಮುಂಬಯಿಗೆ ಹಿಂದಿರುಗಿದನಂತರ ಬಂಧುಮಿತ್ರರ ಮನೆಗಳಿಗೆ ಹೋಗಿ, ಅವರ ಶುಭ ಹಾರೈಕೆಗಳನ್ನು ಪಡೆದು ಬಂದರು. ಬೈಕುಲ್ಲಾದಲ್ಲಿ ವಾಸಿಸುತ್ತಿದ್ದ ಕುಮಾರಿ ಡ್ರೆಸ್ಲರ್ ಅವರ ಮನೆಗೆ ಹೋಗುವುದನ್ನವರು ಮರೆಯಲಿಲ್ಲ. ಅಮೆರಿಕದ ಚರ್ಚ್ ಸಂಸ್ಥೆಗೆ ಸೇರಿದ ಡ್ರುಸ್ಲರ್ ಇಂಡಿಯಾದಲ್ಲಿ ಅದರ ಶಾಖೆಯೊಂದನ್ನು ತೆರೆದಿದ್ದರು. ಅಂಬೇಡ್ಕರ್ ಅನೇಕ ಸಾರಿ ತಮ್ಮ ಭೋಜನವನ್ನು ಆಕೆಯ ಮನೆಯಲ್ಲಿಯೇ ಪೂರೈಸುತ್ತಿದ್ದರು. ಅವರಆಕರ್ಷಣೆಗೆ ಆಕೆಯ ಮೇಧಾಶಕ್ತಿ ಪ್ರತಿಭೆಗಳೇ ಕಾರಣವಾಗಿದ್ದುವು. ತಾವು ಪ್ರಕಟಿಸಿದ ಲೇಖನ ಅಥವಾ ಪುಸ್ತಕಗಳನ್ನು ತಪ್ಪದೆ ಅವರು ಆಕೆಗೆ ಕಳಿಸುತ್ತಿದ್ದರು.

ಮುಂಬಯಿ ಬಿಡುವ ಮುನ್ನ ಅವರು ತಮ್ಮ ಮಗನನ್ನೂ ಅಣ್ಣನ ಮಗನನ್ನೂ ಹತ್ತಿರ ಕರೆದು ಕೂರಿಸಿಕೊಂಡು, ಅವರ ವ್ಯಾಸಂಗದ ಬಗ್ಗೆ ಕೆಲವು ಸಲಹೆಗಳನ್ನಿತ್ತರು : ಬದುಕಿನ ಯಶಸ್ಸಿಗೆ ದುಡಿಮೆಯಲ್ಲದೆ ಬೇರೆ ಹುಸ್ವಮಾರ್ಗವಿಲ್ಲವೆಂದು ಸ್ಪಷ್ಟಪಡಿಸಿದರು. ಪತ್ರಿಕಾ ಪ್ರತಿನಿಧಿಗಳೊಡನೆ ಮಾತಾಡುತ್ತ ಗಾಂಧೀಜಿ ಹೂಡಲಿದ್ದ ಸತ್ಯಾಗ್ರಹ ಚಳುವಳಿಯನ್ನು ದಂಗೆಯೆಂದು ಕರೆದು "ಅದಕ್ಕೆ ಮುತ್ಸದ್ದಿತನದ ದಿವಾಳಿಯೂ, ತಲೆಕೆಟ್ಟ ಬೇಜವಾಬ್ದಾರಿಯೂ ಕಾರಣವೆಂದು ಕೋಪಕಾರಿದರು. ರಾಷ್ಟ್ರಾಕ್ರಮಣಕ್ಕಾಗಿ ರಾಕ್ಷಸರು ಬಾಗಿಲನ್ನು

ತಟ್ಟುತ್ತಿರುವಾಗ ಶಾಸನೋಲ್ಲಂಘನದ ಮೂಲಕ ಶಾಂತಿ ಭಂಗವನ್ನುಂಟು ಮಾಡಿ ನಾಡನ್ನು ಗೊಂದಲಕ್ಕೀಡು ಮಾಡುವುದು ಸಭ್ಯತನವಲ್ಲವೆಂದು ಉದ್ಗರಿಸಿದರು. ಪ್ರಜಾಪ್ರಭುತ್ವಕೆ ವಿಜಯ ದೊರಕಿದ್ದಾದರೆ ಭಾರತದ ಸ್ವಾತಂತ್ರ್ಯಕ್ಕೆ ಯಾರೂ ಅಡ್ಡಿ ಮಾಡಲಾರರೆಂಬ ಆಶಯವನ್ನು ಅವರು ವ್ಯಕ್ತಪಡಿಸಿದರು. ಅವರ ಸರ್ಕಾರದ ನೀತಿಯ ಸಮರ್ಥನೆ ಅವರು ಸಚಿವ ಪದವಿಗಾಗಿ ಆಂಗ್ಲರಿಗೆ ನೀಡಿದ ಕೃತಜ್ಞತೆಯ ಕಾಣಿಕೆಯೆಂದು ಕಾಂಗ್ರೆಸ್ ವೃತ್ತಗಳು ಅಂಬೇಡ್ಕರರ ಹೇಳಿಕೆಯ ಬಗ್ಗೆ ಪ್ರತಿಕ್ರಿಯೆ ವ್ಯಕ್ತಪಡಿಸಿದುವು.

ಅಂಬೇಡ್ಕರರು ಅಧಿಕಾರ ವಹಿಸಿಕೊಂಡ ಕೆಲವು ದಿನಗಳಲ್ಲಿಯೇ ದೆಹಲಿಯ ನಿಮ್ನಜನ ಕಲ್ಯಾಣಕೇಂದ್ರ ಅವರ ಗೌರವಾರ್ಥವಾಗಿ ಸ್ವಾಗತ ಸಮಾರಂಭವೇರ್ಪಡಿಸಿತ್ತು. "ನಾನು ಅಧಿಕಾರಲಾಲಸೆಯಿಂದ ಈ ಪದವಿ ಸ್ವೀಕರಿಸಿಲ್ಲ. ಸಾಮಾನ್ಯರ ಸ್ಥಿತಿಗತಿಗಳನ್ನು ಉತ್ತಮಪಡಿಸುವುದೇ ನನ್ನ ಗುರಿ. ಅದು ನನ್ನಿಂದ ಸಾಧ್ಯವಿಲ್ಲವೆಂದು ತಿಳಿದೊಡನೆಯೇ ಈ ಸ್ಥಾನವನ್ನು ತೆರವು ಮಾಡುತ್ತೇನೆ. ಸಚಿವ ಸಂಪುಟದಲ್ಲಿ ನಿಮ್ನವರ್ಗೀಯರ ಪ್ರಾತಿನಿಧ್ಯಕ್ಕಿಂತ ಮುಸ್ಲಿಮರ ಪ್ರಾತಿನಿಧ್ಯ ಅಧಿಕ ಪ್ರಮಾಣದಲ್ಲಿದೆ. ಜನಸಂಖ್ಯಾ ಪ್ರಮಾಣದ ದೃಷ್ಟಿಯಿಂದ ಎರಡು ಕೋಮುಗಳೂ ಸಮ ಸಮನಾಗಿರುವಾಗ ಈ ಪಕ್ಷಪಾತವೇಕೆ ? ಈ ಬಗ್ಗೆ ನಮ್ಮ ಅಸಹನೆ ಇದ್ದೇ ಇದೆ." ಎಂದವರು ಉತ್ತರ ರೂಪದ ತಮ್ಮ ಭಾಷಣದಲ್ಲಿ ತಮ್ಮ ಧ್ಯೇಯ ಧೋರಣೆಗಳನ್ನು ವಿವರಿಸಿದರು.

ಸತ್ಯಾಗ್ರಹ ಚಳುವಳಿ ಹಿಂಸಾರೂಪವನ್ನು ತಾಳಿದ್ದರಿಂದ ಗಾಂಧೀಜಿ 10–2–1943ರಂದು ಇಪ್ಪತ್ತೊಂದು ದಿನಗಳ ಉಪವಾಸ ಪ್ರಾರಂಭಿಸಿದರು. ಆ ಉಪವಾಸ ಇಡೀ ರಾಷ್ಟ್ರವನ್ನೇ ಅಲುಗಾಡಿಸಿತು. "ಮಹಾತ್ಮರ ಬಿಡುಗಡೆಯಾಗಲಿ" ಎಂಬ ಕೂಗು ಆಕಾಶದಲ್ಲಿ ಮೊಳಗಿತು. ಸಚಿವ ಸಂಪುಟ ರಾಜೀನಾಮೆ ಕೊಡಬೇಕೆಂದು ನಾಡಿನ ಮೂಲೆ ಮೂಲೆಗಳಿಂದ ಒತ್ತಾಯ ತೀವ್ರವಾಗತೊಡಗಿತು. ಆಣೆ. ಮೋದಿ, ಸರ್ಕಾರ್ ರಾಜೀನಾಮೆ ಸಲ್ಲಿಸಿದರು. ಅಂಬೇಡ್ಕರ್ ಮತ್ತು ಶ್ರೀವಾಸ್ತವರು ಅಲುಗಾಡಲಿಲ್ಲ. ಅನಾರೋಗ್ಯದ ಕಾರಣದಿಂದ ಕೆಲವು ದಿನಗಳ ನಂತರ ಗಾಂಧೀಜಿ ಆಗಾಖಾನ್ ಅರಮನೆಯಿಂದ ಬಿಡುಗಡೆ ಹೊಂದಿದರು. ಆ ಹೊತ್ತಿಗೆ ಚಕ್ರವರ್ತಿ ರಾಜಗೋಪಾಲಾಚಾರಿಯವರು ಪಾಕಿಸ್ತಾನ ಯೋಜನೆಯೊಂದನ್ನು ರೂಪಿಸಿ ಜಿನ್ನಾ ಅವರಿಗೆ ಕಳಿಸಿ

ಕೊಟ್ಟಿದ್ದರು. ಆ ಯೋಜನೆಯನ್ನು ಗಾಂಧೀಜಿ ವಿರೋಧಿಸಲಿಲ್ಲ. ಅದು ಬಹು ಹಿಂದೆಯೇ ಅಂಬೇಡ್ಕರರು ತಯಾರಿಸಿದ್ದ ಯೋಜನೆಯ ರೂಪಾಂತರ ವಾಗಿತ್ತು. "ಈ ತನಕ ವಿಭಜನೆಯನ್ನು ವಿರೋಧಿಸುತ್ತಿದ್ದು ಇದ್ದಕ್ಕಿದ್ದಂತೆ ಪಾಕಿಸ್ತಾನ ರಚನೆಗೆ ಸಮ್ಮತಿ ನೀಡುವ ಜನರನ್ನು ನೋಡಿ ಜಗತ್ತಿನ ರಾಜಕಾರಣಿ ಗಳು ನಗುವುದಿಲ್ಲವೇ?" ಎಂದು ಅಂಬೇಡ್ಕರರು ಕಾಂಗ್ರೆಸ್ಸನ್ನು ಗೇಲಿ ಮಾಡಿದರು. ಕೊನೆಯತನಕ ರಾಷ್ಟ್ರ ವಿಭಜನೆಯನ್ನು ವಿರೋಧಿಸಿದ ಪಕ್ಷ ವೆಂದರೆ ಹಿಂದೂಮಹಾಸಭೆ; ಆದರೆ ಕಾಂಗ್ರೆಸ್ಸು ಮತ್ತು ಕಾಂಗ್ರೆಸ್ ಪರ ಪತ್ರಿಕೆಗಳು ಉಸಿರಾಡದಂತೆ ಅದರ ಕುತ್ತಿಗೆಯನ್ನು ಹಿಸುಕಿದುವೆಂದು ಅವರು ಅವುಗಳ ಅಲ್ಪತನವನ್ನು ಬಯಲಿಗೆಳೆದರು. ಮುಸ್ಲಿಮರ ಆಶೋತ್ತರ ಗಳನ್ನು ಈಡೇರಿಸಿದ ಗಾಂಧೀಜಿ ಅಸ್ಪೃಶ್ಯರ ಕೊರಗನ್ನು ನಿವಾರಿಸಬಹುದೆಂದು ತಿಳಿದು ಅವರಿಗೊಂದು ಪತ್ರ ಬರೆದರು. ಹಿಂದೂ ಮತ್ತು ಅಸ್ಪೃಶ್ಯರ ನಡುವೆ ಒಪ್ಪಂದವಾದ ಪಕ್ಷದಲ್ಲಿ ರಾಜಕೀಯ ಸಿದ್ಧಿ ಬಹು ದೂರವಿರುವುದಿಲ್ಲ ವೆಂದು ಮನವರಿಕೆ ಮಾಡಿಕೊಟ್ಟರು. "ನಿಮ್ಮ ಸಾಮರ್ಥ್ಯದ ಬಗ್ಗೆ ನನಗೆ ತುಂಬ ವಿಶ್ವಾಸವಿದೆ. ನೀವು ನನ್ನ ಸಹೋದ್ಯೋಗಿಯಾಗುವುದಾದರೆ, ನನಗೆ ಹರ್ಷವಾಗುತ್ತದೆ. ನನ್ನ ದೃಷ್ಟಿಯಲ್ಲಿ ಅಸ್ಪೃಶ್ಯರ ಸಮಸ್ಯೆ ಕೇವಲ ಮತೀಯ ಸಾಮಾಜಿಕ ಸುಧಾರಣೆಗಳಿಗೆ ಸಂಬಂಧಿಸಿದ್ದು. ದುರ್ದೈವದಿಂದ ನಮ್ಮಿಬ್ಬರ ದೃಷ್ಟಿಕೋನದಲ್ಲಿ ಬಹ್ವಂತರವಿದೆ" ಎಂಬುದಾಗಿ ಗಾಂಧೀಜಿ ಉತ್ತರಿಸಿದರು.

ಅಂಬೇಡ್ಕರರು ಕಾರ್ಮಿಕ ಮಂತ್ರಿಯಾಗಿ ಅಪೇಕ್ಷಿಸಿದ ಯೋಜನೆ ಗಳನ್ನೆಲ್ಲ ಕಾರ್ಯಗತಗೊಳಿಸಲಾಗದಿದ್ದರೂ, ಸಾಧಿಸಿದ ಕಾರ್ಯ ಅವರಿಗೆ ತೃಪ್ತಿಯುಂಟುಮಾಡಿತ್ತು. ವೈಸ್‌ರಾಯ್‌ರಿಗೆ ಸರ್ವಾಧಿಕಾರವಿದ್ದಾಗ, ಬ್ರಿಟಿಷ್ ಸರ್ಕಾರದ ನಿಯಂತ್ರಣವಿದ್ದಾಗ, ತಮಗಿದ್ದ ಇತಿಮಿತಿಗಳೊಳಗೆ ಸಾಧ್ಯವಾದ ಷ್ಟನ್ನು ಮಾಡಿ ಮುಗಿಸಿದರು. ತರಬೇತಿ ಹೊಂದಿದ ಕಾರ್ಮಿಕರು ಉದ್ಯೋಗ ವಿಲ್ಲದೆ ಬೀದಿ ಬೀದಿಗಳಲ್ಲಿ ಅಲೆದಾಡಬಾರದೆಂಬ ದೃಷ್ಟಿಯಿಂದ ಉದ್ಯೋಗ ವಿನಿ ಮಯ ಕೇಂದ್ರಗಳನ್ನು ಸ್ಥಾಪಿಸಿದರು. ಗಿರಣಿಗಳ ಕಾರ್ಮಿಕರಿಗೆ ವೇತನಸಹಿತ ರಜಾ ದಿನಗಳ ಸೌಲಭ್ಯ ಕಲ್ಪಿಸಿದರು. ಕಾರ್ಮಿಕರಿಗೆ ವಸತಿ ಶಿಕ್ಷಣ ಸೌಲಭ್ಯ ಗಳನ್ನೊದಗಿಸುವಲ್ಲಿ, ವೈದ್ಯ ಸೌಕರ್ಯಗಳನ್ನು ಕಲ್ಪಿಸುವಲ್ಲಿ, ಸಾಂಸ್ಕೃತಿಕಾನು ಕೂಲಗಳನ್ನು ಏರ್ಪಡಿಸುವಲ್ಲಿ, ಅವರ ವೇತನ ಭತ್ಯಗಳನ್ನು ಶ್ರಮಾದಾಯ ಜೀವನ ವೆಚ್ಚಗಳ ಆಧಾರದಮೇಲೆ ನಿರ್ಣಯಿಸುವಲ್ಲಿ ಅವರು ಆಸಕ್ತಿ

ವಹಿಸಿದರು. ಕಾರ್ಮಿಕರೆಲ್ಲ ಒಟ್ಟಾಗಿ ಸಂಘಟಿತರಾಗುವತನಕ ಅವರ ಅಭ್ಯುದಯ ಸಾಧ್ಯವಿಲ್ಲವೆಂದೂ, ಕೇಂದ್ರದಲ್ಲಿ ಕಾರ್ಮಿಕರ ಸರ್ಕಾರ ಅಸ್ತಿತ್ವಕ್ಕೆ ಬರುವಂತೆ ಶ್ರಮಿಸಬೇಕೆಂದೂ, ಭಾರತಕ್ಕೆ ಸ್ವರಾಜ್ಯ ಬಂದರೆ ಸಾಲದು, ಅದು ಯಾರ ಕೈಯಲ್ಲಿರುತ್ತದೆಂಬುದು ಮುಖ್ಯವೆಂದೂ ಅವರು ಹೋದೆಡೆಯಲ್ಲೆಲ್ಲ ಕಾರ್ಮಿಕರನ್ನು ಹುರಿದುಂಬಿಸುತ್ತಿದ್ದರು.

ಅವರು ಅಧಿಕಾರಾರೂಢರಾದನಂತರ ನಿಮ್ನವರ್ಗೀಯರಲ್ಲಿ ಕೆಚ್ಚುನೆಚ್ಚುಗಳನ್ನು ಮೂಡಿಸಿದ್ದಲ್ಲದೆ, ಅವರ ಸ್ಥಾನಮಾನಗಳನ್ನೆತ್ತರಿಸಿದರು, ಅವರ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸಿದರು. ಸೈನ್ಯ ಖಾತೆಯ ಉನ್ನತ ಹುದ್ದೆಗಳಿಗೆ ನೇಮಕ ಮಾಡುವಲ್ಲಿ ನಿಮ್ನವರ್ಗೀಯರಿಗೆ ಅಡ್ಡವಾಗುತ್ತಿದ್ದ ಆತಂಕಗಳನ್ನು ಹೋಗಲಾಡಿಸಿದರು. ಉನ್ನತ ವ್ಯಾಸಂಗಕ್ಕಾಗಿ ವಿದ್ಯಾರ್ಥಿಗಳಿಗೆ ವೇತನ ಕೊಟ್ಟು ವಿದೇಶಗಳಿಗೆ ಕಳಿಸಿದರು. ಸರ್ಕಾರೀ ಇಲಾಖೆಗಳಲ್ಲಿ ಹುದ್ದೆಗಳನ್ನೂ ತಾಂತ್ರಿಕ ಶಾಲೆಗಳಲ್ಲಿ ಸ್ಥಾನಗಳನ್ನೂ ಅವರಿಗಾಗಿ ಕಾದಿರಿಸಲು ನೆರವಾದರು. ಈ ಮೀಸಲಾತಿಯಿಂದ ಅವರ ಆರ್ಥಿಕ ಸಾಮರ್ಥ್ಯ ಹೆಚ್ಚುವುದಲ್ಲದೆ, ಆಡಳಿತದಲ್ಲಿ ಅವರಿಗೆ ನ್ಯಾಯ ದೊರಕಿಸಲವಕಾಶವಾಗುತ್ತದೆಂಬುದು ಅಂಬೇಡ್ಕರರ ಅಭಿಪ್ರಾಯವಾಗಿತ್ತು. ದಕ್ಷಿಣ ಇಂಡಿಯಾದ ಅಧಿಕಾರಿಯೊಬ್ಬರು 'ಉದ್ಯೋಗಾನ್ವೇಷಣೆಯೇ ನಿಮ್ಮ ರಾಜಕೀಯವಾಗಿದೆ' ಎಂದವರನ್ನು ರೇಗಿಸಿದಾಗ 'ಶೇಕಡಾ 90 ಭಾಗ ಉದ್ಯೋಗಗಳನ್ನು ನೀವು ಹಿಡಿದುಕೊಂಡಿದ್ದೀರಲ್ಲ ಏಕೆ ? ನಿಮಗೆ ಅಸಹ್ಯವಾಗಿರುವ ಉದ್ಯೋಗಗಳಿಗೇಕೆ ಅಂಟಿಕೊಂಡಿದ್ದೀರಿ? ಈಗಲೇ ಅವನ್ನು ತ್ಯಜಿಸಿ ನಮಗೆ ಜಾಗಮಾಡಿ ಕೊಡಿ' ಎಂದವರು ಅವನನ್ನು ಛೇಡಿಸಿದರು.

ಅಂಬೇಡ್ಕರರು ಸಚಿವರಾದನಂತರ ಬ್ರಿಟಿಷ್ ಸರ್ಕಾರಕ್ಕೆ ತಮ್ಮ ಆತ್ಮ ಸ್ವಾತಂತ್ರ್ಯವನ್ನು ಮಾರಿಕೊಳ್ಳಲಿಲ್ಲ. ಅವರ ನಾಲಗೆ ಎಂದಿನಂತೆ ಹರಿತವಾಗಿತ್ತು. ದಕ್ಷಿಣ ಭಾರತದಲ್ಲಿ ಪ್ರವಾಸ ಕೈಗೊಂಡಾಗ ಅವರು ಕೊಟ್ಟ ಉಪನ್ಯಾಸಗಳ ಶೈಲಿಯಲ್ಲಿ ಕಟುತ್ವ ನಿಷ್ಠಾಪಟ್ಯಗಳು ಎದ್ದುಕಾಣುತ್ತಿದ್ದುವು. ಮದ್ರಾಸಿನಲ್ಲಿ ತಮಿಳುನಾಡು ನಿಮ್ನವರ್ಗೀಯ ಕ್ರಿಶ್ಚಿಯನ್ ಸಂಸ್ಥೆ ಅರ್ಪಿಸಿದ ಬಿನ್ನವತ್ತಳೆಗುತ್ತರವಾಗಿ ಮಾತಾಡುತ್ತಾ, ಸವರ್ಣೀಯ ಕ್ರಿಶ್ಚಿಯನ್ನರ ಭೇದ ಭಾವವನ್ನು ಖಂಡಿಸಿದರು. ಶಿಕ್ಷಣ ಸಂಪತ್ತುಗಳಿಗೆ ಕೆಲವರು ಮಾತ್ರವೇ ಬಾಧ್ಯರು, ಗುಲಾಮಗಿರಿಗೆಂದೇ ಉಳಿದವರು ಹುಟ್ಟಿದ್ದೆನ್ನುವ ಭಾವನೆಯಿಂದ

ಬೀಗುತ್ತಿರುವ ಜನರಿಂದ ಆಳಿಸಿಕೊಳ್ಳುವುದಕ್ಕಿಂತ ಪರಕೀಯರ ಆಡಳಿತವೇ ಮೇಲೆಂದು ಅವರು ಪುರಸಭೆ ಏರ್ಪಡಿಸಿದ ಸನ್ಮಾನ ಸಮಾರಂಭದಲ್ಲಿ ನುಡಿದರು.

ದಕ್ಷಿಣ ಭಾರತೀಯ ಬೌದ್ಧ ಸಂಸ್ಥೆ ಮತ್ತು ಪರಿಶಿಷ್ಟ ಜಾತಿ ಸಂಘಗಳ ಆಶ್ರಯದಲ್ಲಿ ಮಾಡಿದ ಉಪನ್ಯಾಸವನ್ನು ಶ್ರೀನಿವಾಸ ಶಾಸ್ತ್ರಿಗಳ ಟೀಕೆಗಳಿಗೆ ಉತ್ತರ ಕೊಡುವುದಕ್ಕೆಂದೇ ಬಳಸಿಕೊಂಡರು. "ಅಂತರರಾಷ್ಟ್ರೀಯ ಶಾಂತಿ ಸಮ್ಮೇಲನದಲ್ಲಿ ತನ್ನಂಥವನ ಹಾಜರಿ ನಾಡಿನ ಹಿತಕ್ಕೆ ಮಾರಕವಾಗುತ್ತದೆಂದು ನುಡಿದಿದ್ದಾರೆ. ನಾನು ತಲೆ ತಗ್ಗಿಸಬಹುದಾಂಥ ಅವಮಾನಕಾರಕ ಘಟನೆ ನನ್ನ ಸಾರ್ವಜನಿಕ ಜೀವನದಲ್ಲಿ ನಡೆದಿಲ್ಲ. ಶಾಸ್ತ್ರಿಗಳಾದರೋ ಬ್ರಿಟಿಷ್ ಸರ್ಕಾರವ ತೊಡೆಯಲ್ಲೊರಗಿರುವ ಮುದ್ದುನಾಯಿ. ಆ ಸರ್ಕಾರದ ತೋರು ಬೊಂಬೆ ಯಾದ್ದರಿಂದಲೇ ಅವರು ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಸರ್ವಾದರಣೆಗೆ ಪಾತ್ರರಾದದ್ದು. ಚಕ್ರಗೋಷ್ಠಿಯಲ್ಲಿ ಇಂಡಿಯಾದ ಹಿತವನ್ನು ಬಿಟ್ಟುಕೊಟ್ಟ ವರು ನಾನಲ್ಲ, ಅಸ್ಪೃಶ್ಯರಲ್ಲ, ಅವರು, ಗಾಂಧಿ, ಮುಂತಾದವರನ್ನೊಳಗೊಂಡ ಬಳಗ. ಆ ಸಮಯದಲ್ಲಿ ನಿಮ್ಮ ವರ್ಗದ ಜನ ಪ್ರದರ್ಶಿಸಿದ ಮನೋಧರ್ಮಕ್ಕೆ ಕಾರಣವಿಲ್ಲದಿಲ್ಲ. ಆದರೂ ಸಕಾರಣವಾದ ರಕ್ಷಾ ಸೂತ್ರಗಳ ಆಶ್ವಾಸನೆಯ ಆಧಾರದ ಮೇಲೆ ನಾನು ಸ್ವರಾಜ್ಯದ ಪರವಾಗಿ ಸಹಾಯ ಹಸ್ತ ಚಾಚಿ ದ್ದುಂಟು. ಈಗಲೂ ಆ ಹಿಂದೂ ಸೋದರರು ಸಂಧಾನದ ಮೂಲಕ ಸಮಸ್ಯೆಯ ಪರಿಹಾರಕ್ಕೆ ಸಿದ್ಧರಾಗಿದ್ದಾರೆಯೆ?" ಎಂದವರು ನಾಡಿನ ಸವರ್ಣೀ ಯರಿಗೆ ಸವಾಲೆಸೆದರು. ಮದ್ರಾಸು ಬಿಡುವ ಮುನ್ನ ಅವರು ಜಸ್ಟಿಸ್ ಪಕ್ಷದ ಇ. ವಿ. ರಾಮಸ್ವಾಮಿ ನಾಯಕರೊಡನೆ ಮದ್ರಾಸ್ ಪ್ರಾಂತ್ಯದ ರಾಜಕೀಯ ಸಮಸ್ಯೆಗಳ ಬಗ್ಗೆ ಬಹು ದೀರ್ಘವಾಗಿ ಚರ್ಚೆ ನಡೆಸಿದರು.

ಮುಂದೆ ಎಲ್ಲೂರಿನ ಸಭೆಯೊಂದರಲ್ಲಿ ಮಾತಾಡುತ್ತ ಕಾಂಗ್ರೆಸ್ಸಿನ ಅವಿವೇಕವನ್ನೂ ಗಾಂಧಿಯವರ ಅಸ್ಥಿಮಿತನೀತಿಯನ್ನೂ ಕುರಿತು ತೀವ್ರವಾಗಿ ಟೀಕಿಸಿದರು. "ದೂರದೃಷ್ಟಿಯ ಅಭಾವವೇ ಗಾಂಧಿಯವರ ದೋಷ. ಜಯ ಸನ್ನಿಹಿತವಾದಾಗ ದೇಶ ಇಬ್ಭಾಗವಾಗುತ್ತದೆಂದು ಕಾಂಗ್ರೆಸ್ ಸಂಸ್ಥಾ ಪಕರು ಕನಸಿನಲ್ಲಿಯೂ ಎಣಿಸಿರಲಿಲ್ಲ. ಒಂದು ರೀತಿಯಲ್ಲಿ ಗಾಂಧಿ ಲಿಂಕನ್ನರ ಮನೋಧರ್ಮ ಪರಸ್ಪರ ಭಿನ್ನವಾದುದಲ್ಲ. ಔತ್ತರೇಯ ರಾಜ್ಯಗಳ ಪರವಾಗಿ ನೀಗ್ರೋಗಳ ಮನವೊಲಿಸಿಕೊಳ್ಳಲೆಂದು ಲಿಂಕನ್ 1862ರಲ್ಲಿ ದಾಸ್ಯವಿಮೋ

ಚನಾ ಘೋಷಣೆಯನ್ನು ಪ್ರಕಟಿಸಿದನು. ಅಂತೆಯೇ ಗಾಂಧಿಯವರು ಸ್ವಾತಂತ್ರ್ಯದ ಜತೆಗೆ ಚಾತುರ್ವರ್ಣ್ಯ ಧರ್ಮವನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಸರ್ವಪಕ್ಷ ಸಮ್ಮತವಾದ ರಾಜ್ಯಾಂಗ ರಚನೆಗೊಳ್ಳುವುದಾದರೆ ಬ್ರಿಟಿಷ್ ಪ್ರಧಾನಿ ಅಸಹಾಯಕನಾಗಿ ಕಣ್ಮರೆಯಾಗುತ್ತಾನೆ. ನಾನಿಂದು ಕಾಂಗ್ರೆಸ್ಸಿನ ಬಗ್ಗೆ ಭವಿಷ್ಯ ನುಡಿಯುತ್ತಿದ್ದೇನೆ. ಗಾಂಧಿ ಸತ್ತನಂತರ ಅದು ಛಿದ್ರಛಿದ್ರವಾಗುತ್ತದೆ : ಅದರ ನಾಯಕರು ಬೀದಿಬೀದಿಗಳಲ್ಲಿ ಕಚ್ಚಾಡುತ್ತಾರೆ. ದಲಿತೋದ್ಧಾರಕ್ಕಾಗಿ ಪ್ರಾಮಾಣಿಕತೆಯಿಂದ ಶ್ರಮಿಸುವವನೇ ನಾಡಿನ ನೇತಾರನಾಗುತ್ತಾನೆ.

## ೭. ರಾಜ್ಯಾಂಗವಿಘಾತ

ಜುಲೈ ತಿಂಗಳಲ್ಲಿ ಬ್ರಿಟನ್ನು ಚುನಾವಣೆಗಳನ್ನು ನಡೆಸಿತು. ಕಾರ್ಮಿಕ ಪಕ್ಷ ವಿಜಯ ಪತಾಕೆಯನ್ನು ಹಾರಿಸಿತು. ವೈಸ್‌ರಾಯ್ ವೇವೆಲ್ಲರು ಲಂಡನ್ನಿಗೆ ಹೋಗಿಬಂದರು. ಸೆಪ್ಟೆಂಬರ್ ತಿಂಗಳಲ್ಲಿ ಸಾರ್ವತ್ರಿಕ ಚುನಾವಣೆಗಳು ಭಾರತದಲ್ಲಿ ನಡೆಯುತ್ತವೆಂದು ಘೋಷಿಸಿದರು.

ಎಲ್ಲ ಪಕ್ಷಗಳೂ ಚುನಾವಣಾ ಕಣಕ್ಕಿಳಿದುವು. 'ಭಾರತ ಬಿಟ್ಟು ತೊಲಗಿ' ಎಂದು ಘೋಷಿಸುತ್ತ ಕಾಂಗ್ರೆಸ್ಸು ಅಖಾಡಕ್ಕಿಳಿಯಿತು. "ಪಾಕಿಸ್ತಾನ ಅಥವಾ ಪಾರತಂತ್ರ್ಯ" ಎಂದು ಬೊಬ್ಬೆ ಹಾಕುತ್ತ ಮುಸ್ಲಿಮ್ ಲೀಗು ಸ್ಪರ್ಧೆಗೆ ಸಿದ್ಧವಾಯಿತು. 'ಸ್ವಾತಂತ್ರ್ಯ ಮತ್ತು ಸಾಮಗ್ರ್ಯ' ಎಂಬ ಸೂತ್ರ ಹಿಂದೂ ಮಹಾಸಭೆಯ ಘೋಷಣೆಯಾಗಿತ್ತು. ಪರಿಶಿಷ್ಟ ಜಾತಿಗಳ ಸಂಯುಕ್ತ ಪಕ್ಷ ಹಣ ಮತ್ತು ವ್ಯವಸ್ಥೆಯ ಸೌಲಭ್ಯವಿಲ್ಲದೆಯೆ ಸತ್ತ್ವಪರೀಕ್ಷೆಗೆ ಮುನ್ನುಗ್ಗಿತು. ಅಂಬೇಡ್ಕರರು ಪುಣೆಯಲ್ಲಿ ತಮ್ಮ ಪಕ್ಷದ ಪರವಾಗಿ ಚುನಾವಣಾ ಪ್ರಚಾರವನ್ನು ಪ್ರಾರಂಭಿಸುತ್ತ, ಶರಣಾಗತಿಗೆ ಹೆಸರಾಗಿರುವ, ಬಂಡವಾಳಗಾರರ ಹಿಡಿತದಲ್ಲಿರುವ ಅಸ್ಪೃಶ್ಯರನ್ನು ನಿರ್ಲಕ್ಷಿಸಿರುವ ಕಾಂಗ್ರೆಸ್ ಪಕ್ಷವನ್ನು ಸೋಲಿಸುವಂತೆ ಮತದಾರರಿಗೆ ಕರೆಕೊಟ್ಟರು. "ನಿಮ್ಮ ಭವಿಷ್ಯ ಸದ್ಯದ ಚುನಾವಣೆಗಳನ್ನವಲಂಬಿಸಿದೆ. ಬೆಣ್ಣೆಯ ಮಾತುಗಳಿಗೆ ಮರುಳಾಗಬೇಡಿ ನಮಗೆ ಯಾರ ಅನುಗ್ರಹವೂ ಬೇಡ, ನಮಗೆ ಬರಬೇಕಾದ ಹಕ್ಕುಗಳೆ ಸಾಕು. ನಾವು ಮುಸ್ಲಿಮರಂತೆ ದಲಿತ ಸ್ಥಾನವನ್ನು ಕೇಳುತ್ತಿಲ್ಲ. ಈಗ ರಾಜಕೀಯಾಧಿ

ಕಾರವನ್ನು ಕಸಿದುಕೊಳ್ಳಿ. ನಿಮ್ಮ ಹಕ್ಕುಗಳನ್ನು ಚಲಾಯಿಸಿ." ಎಂದು ಮತ ದಾರರಿಗೆ ಮನವಿ ಮಾಡಿಕೊಂಡರು. ಅವರು ದೆಹಲಿಯಿಂದ ಮಧುರೆಯವರೆಗೆ ದೇಹಾಯಾಸವನ್ನು ಲೆಕ್ಕಿಸದೆ ಪ್ರವಾಸಮಾಡಿದರು; ರಾಜಕೀಯಾಧಿಕಾರದ ಪ್ರಯೋಜನಗಳನ್ನು ವಿವರಿಸಿ, ತಮ್ಮ ಪಕ್ಷಕ್ಕೆ ಬೆಂಬಲ ನೀಡುವಂತೆ ವೋಟು ದಾರರಲ್ಲಿ ಅರಿಕೆಮಾಡಿಕೊಂಡರು.

ಚುನಾವಣೆಗಳು ಮುಗಿದು. ಫಲಿತಾಂಶಗಳು ಪ್ರಕಟವಾದಾಗ ಅಂಬೇಡ್ಕರರಿಗೆ ತೀವ್ರ ನಿರಾಶೆಯಾಯಿತು. ಅವರ ನಾಯಕತ್ವಕ್ಕೆ ಸಿಡಿಲು ಬಡಿದಂತಾಯಿತು. ಕಾಂಗ್ರೆಸ್ ಪಕ್ಷ ವಿಜಯೋನ್ಮತ್ತತೆಯಿಂದ ನಲಿದಾಡಿತು. ಮುಸ್ಲಿಮ್ ಲೀಗಿಗೆ ನಿರಾಶೆಯಾಗಿರಲಿಲ್ಲ. ಹಿಂದೂ ಮಹಾಸಭೆ ಮೇಲೇಳದಂತಾಯಿತು. ಭಾರತೀಯ ರಾಷ್ಟ್ರೀಯ ಸೈನ್ಯ (ಐ.ಎನ್.ಎ.) ಸಂಘಟಿಸಿದ ಕ್ರಾಂತಿಕಾರಕ ಚಟುವಟಿಕೆಗಳು ರಾಷ್ಟ್ರ ಜೀವನದ ಮೇಲೆ ಅದಮ್ಯ ಪ್ರಭಾವ ಬೀರಿದುವು. ಸೈನ್ಯದಲ್ಲಿ ಅಶಾಂತಿ ತಲೆದೋರಿತು ; ಜನತೆಯಲ್ಲಿ ರೋಷ ಕೆರಳಿತು ; ರಾಷ್ಟ್ರಾಭಿಮಾನ ಉಕ್ಕೇರಿತು. ಬ್ರಿಟಿಷ್ ಸರ್ಕಾರಕ್ಕೆ ವಿವೇಕೋದಯವಾದದ್ದೇ ಈ ಎಲ್ಲ ಘಟನೆಗಳ ಫಲಶ್ರುತಿ. ಭರತಖಂಡವನ್ನು ಬಹು ದಿನ ದಾಸ್ಯದಲ್ಲಿಡಲಾಗದೆಂಬ ಭಾವನೆ ಅದರ ಮನಸ್ಸಿನಲ್ಲಿ ಮಲರಿತು. ಭರತಖಂಡ ಸಂಪೂರ್ಣ ಸ್ವಾತಂತ್ರ್ಯಕ್ಕರ್ಹವಾಗಿದೆಯೆಂದೂ, ಅಲ್ಪ ಸಂಖ್ಯಾತರು ಅದನ್ನು ತಡೆಗಟ್ಟಲವಕಾಶ ಕೊಡುವುದಿಲ್ಲವೆಂದೂ ಪ್ರಧಾನಿ ಆಟ್ಲಿಯವರು ಘೋಷಿಸಿದರು. ರಾಜಕೀಯ ಪರಿಸ್ಥಿತಿಯನ್ನವಲೋಕಿಸಿ, ಸೂಕ್ತ ಶಿಫಾರಸುಗಳನ್ನು ಮಂಡಿಸಲನುಕೂಲವಾಗುವಂತೆ ಕ್ರಿಪ್ಸ್, ಅಲೆಕ್ಸಾಂಡರ್ ಮತ್ತು ಪೆಥಿಕ್ ಲಾರೆನ್ಸ್‌ರನ್ನೊಳಗೊಂಡ ತ್ರಿಮೂರ್ತಿ ಸಮಿತಿಯನ್ನು ನೇಮಿಸಿದರು.

ಆ ಸಮಿತಿ 24–3–1946ರಂದು ದೆಹಲಿಗೆ ಆಗಮಿಸಿತು. ವೈಸ್‌ರಾಯ್ ಭವನದಲ್ಲಿ ಅನೇಕ ಸಂದರ್ಶನಗಳೂ, ಉನ್ನತಮಟ್ಟದ ಚರ್ಚೆಗಳೂ, ಸೂಕ್ಷ್ಮವಿಚಾರ ಪರಾಮರ್ಶೆಗಳೂ, ನಾನಾ ರೀತಿಯ ಅಧ್ಯಯನಗಳೂ ಜರುಗಿದುವು. ಅಲ್ಪಸಂಖ್ಯಾತರ ಪರವಾಗಿ ಸಮಿತಿಯನ್ನು ಸಂದರ್ಶಿಸಿದ ಅಂಬೇಡ್ಕರ್ ಮತ್ತು ತಾರಾಸಿಂಗರನ್ನು ಬಿಟ್ಟರೆ, ಇಡೀ ಭಾರತವನ್ನು ನಾನಾ ಪಕ್ಷಗಳ ಪರವಾಗಿ ಪ್ರತಿನಿಧಿಸಿದ ಪ್ರಮುಖರೆಲ್ಲ ಮುಸ್ಲಿಮರೇ ಆಗಿದ್ದರು. ಮೌಲಾನಾ ಅಜಾದರು ಕಾಂಗ್ರೆಸ್ಸನ್ನೂ, ಜಿನ್ನಾರವರು ಮುಸ್ಲಿಮ್‌ಲೀಗನ್ನೂ ಭೂಪಾಲ್ ನವಾಬರು ಸಂಸ್ಥಾನಿಕರನ್ನೂ ಪ್ರತಿನಿಧಿಸಿದರು. ತಾವು ಸ್ವಾತಂತ್ರ್ಯ

ವಿರೋಧಿಯಲ್ಲವೆಂದೂ, ಪ್ರತ್ಯೇಕ ಚುನಾವಣಾ ಕ್ಷೇತ್ರಗಳ ಮೂಲಕ ನಿಮ್ನ ವರ್ಗೀಯ ಪ್ರತಿನಿಧಿಗಳು ಶಾಸನಸಭೆಗೆ ಬರುವಂತಾಗಬೇಕೆಂದೂ, ಶಾಸನಸಭೆ ಮಾತ್ರವಲ್ಲ, ಸಕಲ ಸೇವಾ ಕ್ಷೇತ್ರಗಳಲ್ಲಿ ಅವರಿಗೆ ಸ್ಥಾನಗಳನ್ನು ಕಾದಿರಿಸ ಬೇಕೆಂದೂ ಅಂಬೇಡ್ಕರರು ಸಮಿತಿಯ ಮುಂದೆ ಮನವಿ ಮಾಡಿಕೊಂಡರು. ಆ ಸಮಿತಿ ಸರ್ಕಾರಕ್ಕೆ ಸಲ್ಲಿಸಿದ ವರದಿಯ ಪ್ರಕಾರ ರಾಜ್ಯಾಂಗ ರಚನಾ ಸಭೆಯೂ ಮಧ್ಯಕಾಲೀನ ಸರ್ಕಾರವೂ ಕೂಡಲೇ ಅಸ್ತಿತ್ವಕ್ಕೆ ಬರುವಂತಾ ಯಿತು. ಆದ್ದರಿಂದ ವೈಸರಾಯರು ಸಚಿವ ಸಂಪುಟವನ್ನು ವಿಸರ್ಜಿಸಬೇಕಾ ಯಿತು. ಅಂಬೇಡ್ಕರರು 1946ನೆಯ ಸಂವತ್ಸರದ ಮೇ ತಿಂಗಳ ಕೊನೆಯ ವಾರದಲ್ಲಿ ಮುಂಬಯಿಗೆ ಹಿಂದಿರುಗಿದರು.

ಕ್ರಿಪ್ಸ್ ಯೋಜನೆಯ ಪರಿಣಾಮವಾಗಿ ಭರತಖಂಡದ ವಾತಾವರಣ ಉತ್ಕಂಠತೆಯಿಂದ ಕೂಡಿತ್ತು. ಕಾಂಗ್ರೆಸ್ಸಿಗರು ವಿಜಯೋನ್ಮತ್ತರಾಗಿ ಹಾರಾ ಡಿದರೆ ನಿಮ್ನ ವರ್ಗೀಯರು ಪರಾಜಯಗೊಂಡವರಂತೆ ನಿರಾಶೆಯಿಂದ ಕುದಿಯುತ್ತಿದ್ದರು. ಪಕ್ಷ ಪಕ್ಷಗಳೊಳಗಿನ ಮಸೆತದಿಂದಾಗಿ, ಸನ್ನಿವೇಶ ಆಸ್ಫೋಟಕ ಸ್ಥಿತಿಯನ್ನು ಮುಟ್ಟಿತ್ತು. ಮುಂಬಯಿಯಲ್ಲಿ ಸವರ್ಣೀಯ ಅವರ್ಣೀಯರ ನಡುವೆ ಕಲಹಾಗ್ನಿ ಮೈದೋರಿತು. ಅಂಬೇಡ್ಕರರ ಮಗ ನಡೆಸುತ್ತಿದ್ದ ಭಾರತ ಭೂಷಣ ಮುದ್ರಣಾಲಯ ವಿರೋಧಿಗಳು ಹೊತ್ತಿಸಿದ ಅಗ್ನಿಗಾಹುತಿ ಯಾಯಿತು. ಅಂಬೇಡ್ಕರರು ನಿಮ್ನವರ್ಗೀಯ ಸಂಯುಕ್ತ ಸಂಘದ ಕಾರ್ಯ ಕಾರಿ ಸಮಿತಿಯ ಸಭೆ ಕರೆದು ದೇಶದ ರಾಜಕೀಯ ವಿದ್ಯಮಾನಗಳನ್ನು ವಿವರಿಸಿದರು : ಸವರ್ಣ ಹಿಂದೂಗಳ ಗೂಂಡಾಗಿರಿಯನ್ನು ಖಂಡಿಸಿದರು ; ಕೊನೆಯ ಹೋರಾಟಕ್ಕೆ ನಿಮ್ನ ಜನರೆಲ್ಲ ಪ್ರಾಣದ ಹಂಗು ತೊರೆದು ಸಿದ್ಧ ರಾಗಬೇಕೆಂದು ಪ್ರೇರಿಸಿದರು. ಮುಂಬಯಿಯಲ್ಲಿ ಜರುಗುತ್ತಿದ್ದ ಅಖಿಲ ಭಾರತೀಯ ಕಾಂಗ್ರೆಸ್ ಸಮಿತಿಯ ಸಭೆಯ ಮುಂದೆ ನಿಮ್ನ ಜನ ನಾಯಕರು ಕಪ್ಪು ಬಾವುಟ ಪ್ರದರ್ಶಿಸಿದರು. ರಾಜಭೋಜರು ಗಾಂಧಿಯವರನ್ನು ಭೇಟಿ ಮಾಡಿ. ಕಾಂಗ್ರೆಸ್ ಹರಿಜನರು ನಿಮ್ನವರ್ಗದ ಪ್ರತಿನಿಧಿಗಳಲ್ಲವೆಂದೂ. ಅವರ ಸಲಹೆಗಳ ಆಧಾರದ ಮೇಲೆ ಕೈಗೊಳ್ಳುವ ನಿರ್ಣಯಗಳು ಸಿಂಧುವಾಗುವು ದಿಲ್ಲವೆಂದೂ ಸ್ಪಷ್ಟಪಡಿಸಿದರು.

ಇಂಥ ಉದ್ವಿಗ್ನ ಸನ್ನಿವೇಶದಲ್ಲಿಯೂ ಅಂಬೇಡ್ಕರರು ರಚನಾತ್ಮಕ ಕಾರ್ಯಕ್ರಮಗಳನ್ನು ಮರೆಯಲಿಲ್ಲ. ಮಾನವನ ಸರ್ವಾಂಗೀಣ ಪ್ರಗತಿಗೆ

ಶಿಕ್ಷಣವೇ ಪಾರಿಣಾಮಕ ಶಕ್ತಿಯೆಂದೂ, ಸಾನುಕೂಲ ಪರಿಸರದ ಅಭಾವದಿಂದಾಗಿ ನಿಮ್ನ ಜನರ ಮಕ್ಕಳಿಗೆ ಸುಶಿಕ್ಷಣ ದೊರೆಯುತ್ತಿಲ್ಲವೆಂದೂ, ಅವರಿಗಾಗಿ ಪ್ರತ್ಯೇಕ ಕಾಲೇಜುಗಳನ್ನು ತೆರೆದು, ಚೈತನ್ಯದಾಯಿಯಾದ ವಾತಾವರಣವನ್ನು ಸೃಷ್ಟಿಸಿದ ಹೊರತು ಅಂಥ ಶಿಕ್ಷಣ ಲಭಿಸಲಾರದೆಂದೂ ಅವರು ಬಹುದಿನಗಳಿಂದ ಆಲೋಚಿಸುತ್ತಿದ್ದರು. ಅವರು ತಮ್ಮ ಯೋಜನೆಯನ್ನು ಪ್ರಕಟಿಸಿದೊಡನೆಯೇ ಧನ ಸಂಗ್ರಹವಾಯಿತು. 1946ರ ಜೂನ್ 20ನೆಯ ತಾರೀಖು ಜನತಾಶಿಕ್ಷಣ ಸಮಿತಿ ಉದಯವಾದಾಗ ಅವರ ಕನಸು ನನಸಾಯಿತು. ಸಿದ್ಧಾರ್ಥನ ಹೆಸರಿನಲ್ಲಿ ಪ್ರಾರಂಭವಾದ ಕಾಲೇಜು ಉತ್ತಮ ಅಧ್ಯಾಪಕರಿಂದ, ಒಳ್ಳೆಯ ಆಡಳಿತದಿಂದ, ಸಕಲ ಸಜ್ಜು ಸಾಧನಗಳಿಂದ ಮಾದರಿ ಸಂಸ್ಥೆಯೆಂದು ಪ್ರಸಿದ್ಧವಾಯಿತು.

ಜುಲೈ 15ರಂದು ಮುಂಬಯಿ ಶಾಸನ ಸಭೆಯ ಅಧಿವೇಶನ ಪುಣೆಯಲ್ಲಿ ಶುರುವಾಯಿತು. ತಮಗೆ ನ್ಯಾಯವಾಗಿ ದೊರಕಬೇಕಾಗಿದ್ದ ಸವಲತ್ತುಗಳು ಅಪಹರಣವಾದದ್ದಕ್ಕಾಗಿ ನಿಮ್ನವರ್ಗದ ಜನ ಕಾಂಗ್ರೆಸ್ಸನ್ನು ಹೊಣೆ ಮಾಡಿದರು. ಪ್ರತಿಭಟನೆ ಸಲ್ಲಿಸುವ ಸಲುವಾಗಿ ಸ್ವಯಂಸೇವಕರು ಹಿಂಡು ಹಿಂಡಾಗಿ ಪುಣೆಗೆ ಧಾವಿಸಿದರು. ಅನೇಕರು ಜಿಲ್ಲಾ ನ್ಯಾಯಾಧೀಶರ ನಿಷೇಧಾಜ್ಞೆಯನ್ನು ಮುರಿದು, ಕೈಸೆರೆಯಾದರು. ಆ ಚಳುವಳಿಯನ್ನು ಹಿಂತೆಗೆದುಕೊಳ್ಳದಿದ್ದಲ್ಲಿ ಪ್ರತಿ ಸತ್ಯಾಗ್ರಹ ಹೂಡುವುದಾಗಿ ಹರಿಜನ ಸೇವಕ ಸಂಘದ ಕಾರ್ಯದರ್ಶಿ ಬೆದರಿಕೆ ಹಾಕಿದರು. ಹರಿಜನರ ಉದ್ರೇಕಕ್ಕೆ ಕ್ರಿಪ್ಸ್ ಯೋಜನೆ ನಿಮಿತ್ತವೋ ಅಥವಾ ಅಂಬೇಡ್ಕರರ ಸೋಲು ಕಾರಣವೋ, ಇಲ್ಲವೆ ಇಡೀ ಸಮಾಜದ ಆಶಾಭಂಗ ಮೂಲವೋ ಹೇಳಲಾಗದೆಂದು ಆ ಸಂದರ್ಭದಲ್ಲಿ ಮುಖ್ಯಮಂತ್ರಿ ಖೇರ್ ಉದ್ಗಾರ ತೆಗೆದರು.

ಅಂಬೇಡ್ಕರರು ಪತ್ರಿಕಾಗೋಷ್ಠಿ ಕರೆದು ಆ ಎಲ್ಲ ಆಕ್ಷೇಪ ಆರೋಪಗಳಿಗೆ ಸೂಕ್ತ ಉತ್ತರ ನೀಡಿ, ಸವರ್ಣೀಯರ ಗೊಡ್ಡು ಬೆದರಿಕೆಗಳಿಗೆ ಪ್ರತಿಯಾಗಿ ಸಡ್ಡುಹೊಡೆದದ್ದುಂಟು. "ಆಂಗ್ಲರು ಬಿಟ್ಟು ಹೋಗಲಿರುವ ಭಾರತಕ್ಕೆ ಹಿಂದೂ ಮುಸ್ಲಿಮರಂತೆ ನಿಮ್ನಜನರೂ ಉತ್ತರಾಧಿಕಾರಿಗಳು. ಆದರೆ ಕ್ರಿಪ್ಸ್ ಯೋಜನೆ ಅವರ ಪೌರಹಕ್ಕುಗಳನ್ನೆಲ್ಲ ಕಸಿದುಕೊಂಡಂತಾಗಿದೆ. ನಿಮ್ನವರ್ಗೀಯರ ಕೂಗು ಲಂಡನ್ ಮುಟ್ಟಿರಬೇಕಾದರೆ, ಅವರಿಗೆ ಅಷ್ಟಿಷ್ಟು ಸವಲತ್ತುಗಳು ಲಭಿಸಿದ್ದರೆ, ಆ ಲಾಭ ಫೆಡರೇಷನ್ನಿನ ಮತ್ತು ಅದರ ನಾಯಕರ

ತ್ಯಾಗದ ಫಲ. ಆದರೆ ಆ ಫಲವನ್ನನುಭವಿಸುವವರು ಕಾಂಗ್ರೆಸ್‌ನ ಹರಿಜನರು. ಫೆಡರೇಷನ್ನಿನ ವಿರೋಧಿಗಳು. ಕಾಂಗ್ರೆಸ್ಸಿನ ಹಿಂದುಗಳು ಬಿಸಾಡುವ ತುಣುಕುಗಳಿಗಾಗಿ ಅವರು ನಡು ಬಗ್ಗಿಸಿ ಅಂಗಲಾಚುತ್ತಿದ್ದಾರೆ. ಪುಣೆಯಲ್ಲಿ ಪ್ರಾರಂಭವಾದ ಸತ್ಯಾಗ್ರಹ ರಾಷ್ಟ್ರವ್ಯಾಪಕವಾದ ಮುಂದಿನ ಹೋರಾಟಕ್ಕೆ ನಾಂದಿಯಾಗಿದೆ. ನಮ್ಮ ಚಳುವಳಿ ಅಹಿಂಸಾತ್ಮಕವಾಗಿರುತ್ತದೆ, ನೈತಿಕವಾಗಿರುತ್ತದೆ. ನಮ್ಮ ನೈತಿಕ ಸಾಧನೆ ಸಾಧನಗಳು ವಿಫಲಗೊಂಡಲ್ಲಿ ಅನ್ಯಮಾರ್ಗಗಳು ಇದ್ದೇ ಇವೆ" ಎಂದವರು ಸರ್ಕಾರಕ್ಕೆ ಹಾಗೂ ಕಾಂಗ್ರೆಸ್ಸಿಗೆ ಎಚ್ಚರಿಕೆ ನೀಡಿದರು. ಸತ್ಯಾಗ್ರಹ ಚಳುವಳಿ ದಿನಗಳುರುಳಿದಂತೆಲ್ಲ ಉಗ್ರವಾಗತೊಡಗಿತು. ಸರ್ಕಾರ ಅಧಿವೇಶನವನ್ನು ರದ್ದುಗೊಳಿಸಿತು.

ಹಾಗೆಯೇ ಬಿಟ್ಟರೆ ಪರಿಸ್ಥಿತಿ ವಿಷಮಗೊಳ್ಳಬಹುದೆಂಬ ಶಂಕೆಯಿಂದ ಎಸ್. ಕೆ. ಪಾಟೀಲರು ಸಿದ್ಧಾರ್ಥ ಕಾಲೇಜಿನಲ್ಲಿ ಅಂಬೇಡ್ಕರರನ್ನು ಭೇಟಿಮಾಡಿದರು. ಅನಂತರ ಅವರಿಬ್ಬರೂ ಎನ್. ಎಮ್. ಜೋಶಿಯವರೊಡನೆ ಸರ್ದಾರ್ ವಲ್ಲಭಭಾಯಿ ಪಟೇಲರನ್ನು ಕಂಡು ಚರ್ಚೆ ನಡೆಸಿದರು. ರಾಜ್ಯಾಂಗ ರಚನಾ ಸಭೆಯಲ್ಲಿ ನಿಮ್ನ ವರ್ಗೀಯರಿಗೆ ನ್ಯಾಯವಾಗಿ ಸಿಗಬೇಕಾಗಿದ್ದ ಪ್ರಾತಿನಿಧ್ಯದ ಬಗ್ಗೆ ಮಾತುಕತೆ ನಡೆದುವು. ಸಂಧಾನ ವಿಫಲಗೊಂಡದ್ದರಿಂದ ಗಾಯಕವಾಡ ಮತ್ತು ರಾಜಭೋಜರ ನಾಯಕತ್ವದಲ್ಲಿ ನಿಮ್ನ ಜನಪ್ರತಿನಿಧಿಗಳು ಆಗಸ್ಟ್ 8ರಂದು ವರ್ಧಾದಲ್ಲಿ ಸೇರಿದ್ದ ಅಖಿಲ ಭಾರತೀಯ ಕಾಂಗ್ರೆಸ್ ಸಮಿತಿಯ ಸಭೆಯ ಮುಂದೆ ತಮ್ಮ ಪ್ರತಿಭಟನೆ ವ್ಯಕ್ತಪಡಿಸಿದರು.

ಈ ನಡುವೆ ಪ್ರಾಂತೀಯ ಶಾಸನಸಭೆಗಳಿಂದ ರಾಜ್ಯಾಂಗ ಸಭೆಗೆ ಚುನಾವಣೆಗಳು ನಡೆದುವು. ರಾಜ್ಯಾಂಗದಲ್ಲಿ ಪರಿಣತಿ ಪಡೆದಿರಲಿ ಪಡೆಯದಿರಲಿ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ಜೈಲಿನಲ್ಲಿ ಕಾಲಕಳೆದರೆಂಬ ಏಕೈಕ ಕಾರಣದಿಂದ ಕಾಂಗ್ರೆಸ್ಸು ತನ್ನ ಅಭ್ಯರ್ಥಿಗಳನ್ನು ನಿಲ್ಲಿಸಿ ಗೆಲ್ಲಿಸಿತು. ಅಂಬೇಡ್ಕರರಂಥ ಮಹಾತಜ್ಞರನ್ನು ಮುಂಬಯಿ ಶಾಸನಸಭೆ ಸಂಪೂರ್ಣವಾಗಿ ಮರೆಯಿತು. ಬಂಗಾಳ ಶಾಸನಸಭೆಯ ನಿಮ್ನ ಜನರ ಪ್ರತಿನಿಧಿಗಳು ಅವರ ನೆರವಿಗೆ ಬಂದು, ರಾಜ್ಯಾಂಗ ಸಭೆಗೆ ಅವರನ್ನು ಚುನಾಯಿಸಿದರು. ಮುಸ್ಲಿಂ ಲೀಗಿನ ಬೆಂಬಲ ಸಿಗದಿದ್ದರೆ ಅವರಿಗೆ ಅಲ್ಲಿಯೂ ಜಯಲಭಿಸುವಂತಿರಲಿಲ್ಲ.

ಆಗಸ್ಟ್ 24ರಂದು ಮಧ್ಯಕಾಲೀನ ಸಚಿವ ಸಂಪುಟದ ಹೆಸರುಗಳು ಪ್ರಕಟಗೊಂಡುವು. ನೆಹ್ರೂ, ಪಟೇಲ್, ಅಜಾದ್, ರಾಜಗೋಪಾಲಾಚಾರಿ, ಶರತ್ ಚಂದ್ರಬೋಸ್ ಮತ್ತು ಜಗಜೀವನರಾಮ್ ಸಂಪುಟದ ಸದಸ್ಯರಾದರು. ಮುಸ್ಲಿಮ್‌ಲೀಗ್ ಬಹಿಷ್ಕರಿಸಲಾಗಿ, ಲೀಗೇತರ ನಾಯಕರನ್ನು ನಿಯೋಜಿಸಿ ಕೊಳ್ಳಲಾಯಿತು. ಸಚಿವ ಸಂಪುಟ ಮತ್ತು ರಾಜ್ಯಾಂಗ ಸಭೆಗಳಲ್ಲಿ ನಿಮ್ನ ಜನರಿಗೆ ನಿಗದಿಸಿರುವ ಪ್ರಾತಿನಿಧ್ಯ ಅಸಮರ್ಪಕವೆಂದು ಬ್ರಿಟಿಷ್ ಪ್ರಧಾನಿಗೆ ಅಂಬೇಡ್ಕರ್ ತಂತಿ ಕಳಿಸಿದರು. ಸಚಿವ ಸ್ಥಾನವನ್ನು ಸ್ವೀಕರಿಸಬಾರದೆಂದು ನಿಮ್ನ ವರ್ಗೀಯ ಸಂಯುಕ್ತ ಸಂಘದ ಕಾರ್ಯಸಮಿತಿ ಜಗಜೀವನರಾಮ್ ಅವರಿಗೆ ಕೋರಿಕೆ ಸಲ್ಲಿಸಿತು. ನೂತನ ಸರ್ಕಾರದಲ್ಲಿ ಅವಿಶ್ವಾಸ ವ್ಯಕ್ತಪಡಿಸಿತು; ಬ್ರಿಟಿಷ್ ಸರ್ಕಾರ ಅನುಗ್ರಹಿಸಿದ್ದ ಬಿರುದು ಬಾವಲಿಗಳನ್ನು ಹಿಂದಿರುಗಿಸು ವಂತೆ ತಮ್ಮ ನಾಯಕರನ್ನು ಕೇಳಿಕೊಂಡಿತು. ಕೆಲವು ದಿನಗಳ ನಂತರ ಲೀಗು ಸಂಪುಟವನ್ನು ಪ್ರವೇಶಿಸಿದಾಗ ಅಂಬೇಡ್ಕರರ ಯೋಜನೆಗಳೆಲ್ಲ ತಲೆಕೆಳಗಾಗಿ, ಅವರು ಭಗ್ನಮನೋರಥರಾದರು.

ಪ್ರತಿಭಟನೆ ಸತ್ಯಾಗ್ರಹಗಳು ದೂರದ ಬ್ರಿಟಿಷ್ ಸರ್ಕಾರದ ಮೇಲೆ ಪ್ರಭಾವ ಬೀರಲಾರವೆಂದು ತಿಳಿದ ಬಾಬಾ ಸಾಹೇಬರು ಕೊಟ್ಟ ಕೊನೆಯ ಪ್ರಯತ್ನಕ್ಕಾಗಿ ಅಕ್ಟೋಬರ್ 15ರಂದು ಕರಾಚಿಯ ಮೂಲಕ ಲಂಡನ್ನಿಗೆ ಪ್ರಯಾಣ ಬೆಳೆಸಿದರು. ಅಲ್ಲಿ ಅನೇಕ ರಾಜಕಾರಣಿಗಳನ್ನು ಭೇಟಿಮಾಡಿದರು. ಪತ್ರಿಕಾ ಪ್ರತಿನಿಧಿಗಳು ಮಧ್ಯಕಾಲೀನ ಸರ್ಕಾರದ ಸಾಮರ್ಥ್ಯ ಸಂಸಿದ್ಧಿಗಳ ಬಗ್ಗೆ ಪ್ರಶ್ನಿಸಲಾಗಿ, ಅದು ಒಂದು ಸರ್ಕಾರವಲ್ಲ, ಒಂದು ನಾಡಿನಲ್ಲಿರುವ ಎರಡು ರಾಷ್ಟ್ರೀಯ ಸರ್ಕಾರಗಳೆಂದೂ, ಭಾರತ ಅಂತರ್ಯುದ್ಧದ ಅಂಚಿನಲ್ಲಿದೆ ಯೆಂದೂ ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸಿದರು. ತಮ್ಮ ಪಕ್ಷದ ಸದಸ್ಯರಾದ ಜೋಗೇಂದ್ರನಾಥ ಮಂಡಲರನ್ನು ಮುಸ್ಲೀಮ್‌ಲೀಗು ತನ್ನ ಪರವಾಗಿ ಸಂಪುಟಕ್ಕೆ ಸೇರಿಸಿಕೊಂಡದ್ದರಿಂದ ತಮ್ಮ ಶ್ರಮ ಫಲಿಸಿತೆಂದು ಹರ್ಷಿಸಿದರು. 1935ನೆಯ ಸಂವತ್ಸರದ ಕಾನೂನನ್ನು ಜಾರಿಗೊಳಿಸಿ, ಹತ್ತು ವರ್ಷದನಂತರ ಏಕೈಕ ಭಾರತಕ್ಕೆ ಆಡಳಿತವನ್ನೊಪ್ಪಿಸುವುದು ಸೂಕ್ತವೆಂದು ತಮ್ಮ ನಿಲವನ್ನು ಮುಂದಿಟ್ಟರು. ಪ್ರಧಾನಿಗೊಂದು ಮನವಿ ಪತ್ರವೊಪ್ಪಿಸಿದರು. ಚರ್ಚಿಲ್ಲರೊಡನೆ ಚರ್ಚಿಸಿದರು. ಕನ್ಸರ್ವೇಟಿವ್ ಪಕ್ಷದ ಇಂಡಿಯಾ ಸಮಿತಿಯನ್ನುದ್ದೇಶಿಸಿ ಭಾಷಣ ಮಾಡಿದರು ಶ್ರೋತೃಗಳು ತಲೆದೂಗಿದರೆ ಹೊರತು. ಸಹಾನು

ಭೂತಿ ತೋರಿಸಲಿಲ್ಲ. ಪರಿಸ್ಥಿತಿಯೊಡನೆ ಹೊಂದಿಕೊಳ್ಳುವುದು ಸೂಕ್ತವೆಂದು ಕೆಲವು ರಾಜಕಾರಣಿಗಳು ಅವರಿಗೆ ಬುದ್ಧಿ ಹೇಳಿದರು. ತಮ್ಮ ದೀರ್ಘಕಾಲದ ಶ್ರಮ ವ್ಯರ್ಥವಾಯಿತೆಂಬ ವ್ಯಾಕುಲದಿಂದ ಅವರು ಬರಿಗೈಯಲ್ಲಿ ಮುಂಬಯಿಗೆ ಮರಳಿದರು.

ದುಃಖನಿರಾಶೆಗಳು ಮುಸುಗಿ ಭವಿಷ್ಯ ಮಸುಕಾದಾಗ ಅಂಬೇಡ್ಕರರು ಓದುಬರಹಗಳ ಮೂಲಕ ನವಚೈತನ್ಯ ಪಡೆಯುತ್ತಿದ್ದರು ; ಮನಸ್ಸಿಗೆ ಶಾಂತಿ ತಂದುಕೊಳ್ಳುತ್ತಿದ್ದರು. ರಾಜಕೀಯಕ್ಷೇತ್ರದ ಸುಳಿಯಲ್ಲಿ ಸಿಕ್ಕಿಕೊಂಡಾಗಲೂ ಅವರು ಜ್ಞಾನಾರ್ಜನೆಗಾಗಲೀ ಸಂಶೋಧನೆಗಾಗಲೀ ವಿರಾಮ ಕೊಡುತ್ತಿರಲಿಲ್ಲ. ಆ ಕ್ಷೇತ್ರದ ಸೋಲುಗೆಲವುಗಳಿಗೆ ವಿದ್ವತ್ತು ಬಹುಮಟ್ಟಿಗೆ ಕಾರಣವೆಂದವರು ಭಾವಿಸಿದರು. ಲಂಡನ್ನಿನಿಂದ ಹಿಂದಿರುಗಿದ ಕೂಡಲೇ ಅವರು "ಶೂದ್ರರು ಯಾರು?" ಎಂಬ ಗ್ರಂಥವನ್ನು ಪ್ರಕಟಿಸಿದರು. ಸಮಾಜ ಸುಧಾರಕರಲ್ಲೆಲ್ಲ ಶಿಖರ ಸ್ಥಾನದಲ್ಲಿದ್ದ ಮಹಾತ್ಮ ಜೋತಿಬಫೂಲೆಯವರಿಗೆ ಅದನ್ನರ್ಪಿಸಿದರು. ನಿರಂತರ ವ್ಯವಸಾಯದ, ವೈಜ್ಞಾನಿಕ ಕುತೂಹಲದ, ನಿಷ್ಪಕ್ಷಪಾತ ವಿಶ್ಲೇಷಣೆಯ ಫಲವೇ ಈ ಕೃತಿ. ವಿಷಯ ಸಂಗ್ರಹಣೆಯಲ್ಲಿ, ತಾತ್ತ್ವಿಕ ಪ್ರತಿಪಾದನೆಯಲ್ಲಿ, ಸುಸಂಬದ್ಧವಾದ ವ್ಯಾಖ್ಯಾನದಲ್ಲಿ ಈ ಕೃತಿಕಾರರರಿಗೆ ಸರಿಗಟ್ಟುವವರು ವಿರಳ. ಶೂದ್ರಾತಿಶೂದ್ರರ ಉಗಮವನ್ನೂ ವರ್ಣವ್ಯವಸ್ಥೆಯಿಂದೊದಗಿದ ಅನಾಹುತ ಗಳನ್ನೂ, ಪುರೋಹಿತಶಾಹಿಯ ದೌರ್ಜನ್ಯವನ್ನೂ ಅವರು ಸಾಧಾರವಾಗಿ ಚರ್ಚಿಸಿದ್ದಾರೆ.

ಈ ಗ್ರಂಥವನ್ನೋದಿ ಮುಗಿಸಿದನಂತರ, ಗ್ರಂಥಕರ್ತರು ತಮ್ಮ ಪ್ರಮೇಯಗಳ ಸಮರ್ಥನೆಗಾಗಿ ಹಿಂದೂ ಪವಿತ್ರ ಗ್ರಂಥಗಳಿಂದಾಯ್ದು ಕೊಂಡಿರುವ ಉದ್ಧರಣೆಗಳು, ನಿದರ್ಶನಗಳು, ಕಥೆಗಳು, ಘಟನೆಗಳು, ಜತೆಗೆ ಬೇರೆ ಬೇರೆ ಕಡೆಗಳಿಂದ ಒದಗಿಸಿರುವ ರುಜುವಾತುಗಳು, ವಿಶ್ಲೇಷಣೆ ಸಂಶ್ಲೇಷಣೆಗಳ ಮೂಲಕ ಕೈಕೊಂಡಿರುವ ತೀರ್ಮಾನಗಳು ಎಂಥ ಮಹಾ ವಿದ್ವಾಂಸರನ್ನಾದರೂ ಗಾಬರಿಗೊಳಿಸುವಂತಿವೆ. ಪೂರ್ವಾಗ್ರಹಕ್ಕೆಡೆಗೊಡದಂತೆ, ಐತಿಹಾಸಿಕ ಪ್ರಮಾಣಗಳಿಗೆ ಬಾಧಕವುಂಟಾಗದಂತೆ, ಸುಸಂಬದ್ಧವಾದ ತಾರ್ಕಿಕಾ ಧಾರಗಳ ಮೇಲೆ ತಮ್ಮ ತೀರ್ಮಾನಗಳನ್ನು ನಿಲ್ಲಿಸಿರುವುದು ಈ ಕೃತಿಯ ಮಹತ್ವವನ್ನಧಿಕಗೊಳಿಸುತ್ತದೆ. ಸತ್ಯ ಶೋಧನೆಯೇ ಈ ಕೃತಿಯ ಪ್ರಮುಖ ಧ್ಯೇಯವೆಂಬುದು ಅದನ್ನೋದಿದಾಗ ಗ್ರಹಿಕೆಯಾಗುತ್ತದೆ. ಸಂಪ್ರದಾಯಸ್ಥ

ರಾದ ಹಿಂದುಗಳು ಮತ್ತು ಆರ್ಯಸಮಾಜಿಗಳು ಈ ಕೃತಿ ಪ್ರಕಟವಾದಾಗ, ಅಂಬೇಡ್ಕರರ ಮೇಲೆ ಕೋಪಕಾರಿದ್ದುಂಟು. ಆದರೆ ಯಾವ ಹಿಂದೂ ವಿದ್ವಾಂಸನೂ ಅಂಬೇಡ್ಕರರು ಎತ್ತಿರುವ ಸಮಸ್ಯೆಗಳಿಗೆ ಪರಿಹಾರ ಒದಗಿಸ ಲಿಲ್ಲ : ಅವರ ವ್ಯಾಖ್ಯಾನದಲ್ಲಿ ದೋಷ ಕಂಡುಹಿಡಿಯಲಿಲ್ಲ ; ಅವರ ತೀರ್ಮಾನ ಗಳು ತಪ್ಪೆಂದು ಸಕಾರಣವಾಗಿ ಸಾಧಿಸಲಿಲ್ಲ. ಇಂದಿಗೂ ಈ ಗ್ರಂಥ ಸಂಪ್ರದಾಯ ವಾದಿಗಳಿಗೆ ಮಾತ್ರವಲ್ಲ. ವಿದ್ವಾಂಸರಿಗೂ ಸವಾಲಾಗುಳಿದಿದೆ.

9–12–1946ರಂದು ರಾಜ್ಯಾಂಗ ಸಭೆ ಸೇರಿ ರಾಜೇಂದ್ರ ಪ್ರಸಾದ ರನ್ನು ಅಧ್ಯಕ್ಷ ಪದವಿಗೆ ಚುನಾಯಿಸಿತು : ಕಾರ್ಯ ವ್ಯವಹಾರ ನಿಯಮಗಳ ರಚನೆಗಾಗಿ ಸಮಿತಿಯೊಂದನ್ನು ನೇಮಿಸಿತು. ಮುಸ್ಲಿಮ್‌ಲೀಗಿನ ಸದಸ್ಯರು ಸಭೆಗೆ ಬರಲಿಲ್ಲ. 13ರಂದು ನೆಹ್ರೂರವರು ತಮ್ಮ ಮಹತ್ವ ಪೂರ್ಣ ಭಾಷಣದಲ್ಲಿ ರಾಜ್ಯಾಂಗದ ಧ್ಯೇಯೋದ್ದೇಶಗಳನ್ನು ವಿಸ್ತಾರವಾಗಿ ಪ್ರತಿಪಾದಿಸಿ. ಸಭೆಯ ಮುಂದೆ ಅವುಗಳಿಗೆ ಸಂಬಂಧಿಸಿದ ನಿರ್ಣಯವನ್ನು ಮಂಡಿಸಿದರು. ಮುಸ್ಲಿಮ್‌ಲೀಗಿನ ಮತ್ತು ಸಂಸ್ಥಾನಿಕರ ಪ್ರತಿನಿಧಿಗಳು ಸಭೆಗೆ ಬರುವ ತನಕ ನಿರ್ಣಯದ ಮೇಲಣ ಚರ್ಚೆಯನ್ನು ಮುಂದೂಡಬೇಕೆಂದು ಎಂ. ಆರ್. ಜಯಕರ್ ಅವರು ತಿದ್ದುಪಡಿ ಸೂಚಿಸಿದರು. ಮಸಾನಿ ಮುಖರ್ಜಿಯವರು ಮೂಲ ನಿರ್ಣಯವನ್ನು ಬೆಂಬಲಿಸಿದರೆ. ಫ್ರಾಂಕ್ ಅಂಥೋನಿಯವರು ತಿದ್ದು ಪಡಿಯ ಪರವಾಗಿ ವಾದಿಸಿದರು. ತಮ್ಮ ಕಾನೂನು ಜ್ಞಾನವನ್ನೂ. ವಾಕ್ಪ್ರೌಢಿಮೆಯನ್ನೂ. ಪ್ರತಿಭಾ ಸಾಮರ್ಥ್ಯವನ್ನೂ, ಸಾರ್ಥಕಪಡಿಸಿಕೊಳ್ಳುವ ಕಾಲ ಅಂಬೇಡ್ಕರರಿಗೆ ಸನ್ನಿಹಿತವಾಗಿತ್ತು. "ಪಂಡಿತ ನೆಹ್ರೂರವರು ಮಂಡಿ ಸಿರುವ ನಿರ್ಣಯದ ಮೊದಲ ಭಾಗ ಮಾತ್ರ ವಿವಾದಾಸ್ಪದವಾದುದು. ಎರಡನೆಯ ಭಾಗದಲ್ಲಿ ಹಕ್ಕುಗಳ ಜತೆಗೆ ಸಂತ್ರಸ್ತರಿಗೆ ಸಂಬಂಧಿಸಿದಂತೆ ಪರಿಹಾರ ಸೂತ್ರಗಳನ್ನು ಸೇರಿಸಬಹುದಿತ್ತು. ನಾವಿಂದು ರಾಜಕೀಯವಾಗಿ. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಛಿದ್ರವಿಚ್ಛಿದ್ರವಾಗಿದ್ದೇವೆ. ಯುದ್ಧ ಶಿಬಿರಗಳಲ್ಲಿದ್ದೇವೆ. ನಾನೂ ಅಂಥ ಶಿಬಿರವೊಂದರ ನಾಯಕ. ಆದರೂ ಮುಂದಿನ ದಿನಗಳಲ್ಲಿ ನಮಗೆ ಜ್ಞಾನೋದಯವಾಗುತ್ತದೆ, ನಾವೆಲ್ಲರೂ ಒಂದಾಗುತ್ತೇವೆ ಎಂಬ ನಂಬಿಕೆ ನನಗಿದೆ. ಅಖಂಡ ಭಾರತದಿಂದ ಮಾತ್ರ ಸರ್ವಾಭ್ಯುದಯ ಸಾಧ್ಯವೆಂಬ ಪ್ರಜ್ಞೆ ಮುಸ್ಲಿಮ್ ಬಂಧುಗಳ ಮನಸ್ಸಿನಲ್ಲಿ ಮೂಡುವ ಕಾಲ ಬರುತ್ತದೆ. ವಿಭಜನೆಯ ಸೂತ್ರವನ್ನಂಗೀಕರಿಸುವ ಮೂಲಕ

ಕಾಂಗ್ರೆಸ್ಸು ದೇಶಕ್ಕೆ ದ್ರೋಹ ಬಗೆದಿದೆ. ಅಧಿಕಾರಬೇಕು : ಬೇಡವೆನ್ನುವುದಿಲ್ಲ. ಅದರ ಜತೆಗೆ ದೂರದೃಷ್ಟಿ ವಿವೇಕಗಳೂ ಬೇಕು. ನಾಡಿನ ಹಿರಿಯ ಪಕ್ಷವಾಗಿ ಕಾಂಗ್ರೆಸ್ಸು ಮತ್ತೊಮ್ಮೆ ರಾಜೀ ಪ್ರಯತ್ನ ಮಾಡುವುದು ಸೂಕ್ತ. ಸ್ವಪ್ರತಿಷ್ಠೆಯಿಂದ ಸುಖವಿಲ್ಲ, ವಿನಯದಿಂದ ನಷ್ಟವಿಲ್ಲ. ಯುದ್ಧ ಅಥವಾ ಶಾಂತಿಯ ಮೂಲಕ ಇಂದಿನ ಸಮಸ್ಯೆಯನ್ನು ಪರಿಹರಿಸಿಕೊಳ್ಳಬೇಕಾಗಿದೆ. ಯುದ್ಧದ ಮೂಲಕ ಸಮಸ್ಯೆಯನ್ನು ಬಗೆಹರಿಸಬಹುದೆನ್ನುವ, ಅಥವಾ ಮುಸ್ಲಿಮರ ಸಮ್ಮತಿಯಿಲ್ಲದೆ ರಾಜ್ಯಾಂಗವನ್ನು ಅವರ ಮೇಲೆ ಹೇರಬಹುದೆನ್ನುವ ತಿಳಿವಳಿಕೆ ತಪ್ಪಾಗುತ್ತದೆ. ಬರ್ಕ್ ಹೇಳಿದಂತೆ, ನಮ್ಮಲ್ಲಿ ಅಧಿಕಾರ ವಿವೇಕಗಳೆರಡೂ ಇವೆ. ಅವು ನಮ್ಮನ್ನು ಒಕ್ಕೂಟದ ಕಡೆಗೆ ಕೊಂಡೊಯ್ಯುತ್ತವೆಂದು ಪ್ರಪಂಚಕ್ಕೆ ತೋರಿಸಬಹುದಾದ ಅವಕಾಶ ಇಂದು ನಮಗೆ ದೊರೆತಿದೆ. ಅಂಥ ಅವಕಾಶವನ್ನು ತಿರಸ್ಕರಿಸುವ ತಿಳಿಗೇಡಿತನ ಸಲ್ಲದು. ಒಮ್ಮೆ ಅದು ಕೈತಪ್ಪಿ ಹೋದರೆ ಮತ್ತೆ ಸಿಗುವಂತಿಲ್ಲ". ಅವರು ಭಾಷಣ ಮುಗಿಸಿ ಕೂರುವ ತನಕ ನಿಶ್ಶಬ್ದವಾಗಿದ್ದ ಸಭೆಯಲ್ಲಿ ಹಠಾತ್ತನೆ ಆವೇಶವುಕ್ಕಿದಂತಾಗಿ, ಕರತಾಡನ ಮೊಳಗಿತು. ಬಹುಮಂದಿ ಹರಿಜನ ಸದಸ್ಯರು ನಿರ್ಣಯದ ಪರವಾಗಿ ಮಾತಾಡಿದರು. ಅಂಬೇಡ್ಕರರು ಹರಿಜನರ ನಿಜವಾದ ನಾಯಕರು ; ಅವರ ಸಹಕಾರದಿಂದ ಹರಿಜನರ ಉದ್ಧಾರ ಶೀಘ್ರಸಾಧ್ಯವಾಗುತ್ತದೆ ; ಆದ್ದರಿಂದ ಅವರು ರಾಜ್ಯಾಂಗ ರಚನೆಯ ಕಾರ್ಯದಲ್ಲಿ ರಾಷ್ಟ್ರನಾಯಕರೊಡನೆ ಸಹಕರಿಸಬೇಕೆಂಬುದಾಗಿ ಮದ್ರಾಸಿನ ಹರಿಜನ ಪ್ರತಿನಿಧಿ ಶ್ರೀಮತಿ ದಾಕ್ಷಾಯಣಿ ವೇಲಾಯುಧನ್ ವಿನಂತಿ ಮಾಡಿಕೊಂಡರು. ಅಧ್ಯಕ್ಷರು ಸಭೆಯನ್ನು ಮುಂದೂಡಿದರು. ನಿರ್ಣಯದ ಮೇಲಣ ಚರ್ಚೆ ಜನವರಿ 20 ಕ್ಕೆ ಹೋಯಿತು.

ರಾಜ್ಯಾಂಗ ಸಭೆ ಮುಂದೆ ಹೋಗಲಾಗಿ ಅಂಬೇಡ್ಕರರು ಜನತಾ ಶಿಕ್ಷಣ ಸಮಿತಿಯ ಕಾರುಬಾರುಗಳ ಕಡೆಗೆ ಗಮನ ಹರಿಸುವ ಸಲುವಾಗಿ ಮುಂಬಯಿಗೆ ಹಿಂದಿರುಗಿದರು. ಅವರ ಮತ್ತು ಕಾಂಗ್ರೆಸ್ ಪಕ್ಷಗಳ ನಡುವಣ ಸಂಘರ್ಷ ಕೊನೆಗೊಂಡಿರಲಿಲ್ಲ. ಅವರ ಮಗನ ಮತ್ತು ಅಣ್ಣನ ಮಗನ ಪ್ರಾಣಕ್ಕೆ ಅಪಾಯ ತಪ್ಪಿರಲಿಲ್ಲ. ಕೊನೆಗೆ ಅವರು ಒಬ್ಬೊಂಟಿಗರಾಗಿ ಹಾದಿಬೀದಿಗಳಲ್ಲಿ ತಿರುಗಾಡಬಾರದೆಂಬ ಸೂಚನೆಯೂ ಅವರ ಹಿತೈಷಿಗಳಿಂದ ಬಂತು. ರಾಜಗೃಹದ ಸುತ್ತ ಗೂಂಡಾಗಳು ಅಲೆದಾಡುತ್ತಿದ್ದರೆಂಬ ಸುದ್ದಿಯಿಂದ ಅವರು ಭೀತರಾಗಲಿಲ್ಲ. ಆದರೆ ತಮ್ಮ ಮಕ್ಕಳ ಕ್ಷೇಮದ ಬಗ್ಗೆ ಮಾತ್ರ ಕಾತರತೆ

ವ್ಯಕ್ತಪಡಿಸಿದರು. ಬಿಡುವು ವೇಳೆಯಲ್ಲಿ ಕೋರ್ಟುಗಳಿಗೆ ಹೋಗಿ ತಮ್ಮ ಪಕ್ಷದ ಸದಸ್ಯರ ಮತ್ತು ದಲಿತರ ಪರವಾಗಿ ವಕಾಲತ್ತು ವಹಿಸುತ್ತಿದ್ದರು.

1948ನೆಯ ಜೂನ್ ತಿಂಗಳಲ್ಲಿ ಅಧಿಕಾರವನ್ನು ಯಾವುದಾದರೂ ರೂಪದಲ್ಲಿ ಭಾರತೀಯರಿಗೆ ವಹಿಸಿಕೊಡುವುದಾಗಿ ಬ್ರಿಟಿಷ್ ಸರ್ಕಾರ ಘೋಷಿಸಿತು: ಲಾರ್ಡ್ ವೇವೆಲ್ಲರ ನೀತಿ ಸರಿಬೀಳದೆ ಅವರನ್ನು ಹಿಂದಕ್ಕೆ ಕರೆಸಿಕೊಂಡಿತು. ಅದೇ ಸುಸಮಯವೆಂದು ಬಗೆದು ರಾಜ್ಯಾಂಗ ಸಭೆಯ ಮುಂದಿಡುವ ಸಲುವಾಗಿ ಅಂಬೇಡ್ಕರರು ನಿವೇದನ ಪತ್ರವೊಂದನ್ನು ಸಿದ್ಧಪಡಿಸಿದರು. 'ರಾಜ್ಯಗಳು ಮತ್ತು ಅಲ್ಪಸಂಖ್ಯಾತರು' ಎಂಬ ಹೆಸರಿನ ಕಿರುಹೊತ್ತಗೆಯಲ್ಲಿ ಮೂಲಭೂತಹಕ್ಕುಗಳನ್ನೂ ಅಲ್ಪ ಸಂಖ್ಯಾತರ ಸವಲತ್ತುಗಳನ್ನೂ. ನಿಮ್ನ ವರ್ಗೀಯರಿಗೆ ಬೇಕಾದ ರಕ್ಷಣೆಗಳನ್ನೂ ಕುರಿತು ಕೂಲಂಕಷವಾಗಿ ಚರ್ಚಿಸಿದರು. ನಿಮ್ನವರ್ಗೀಯರನ್ನು ಇತರ ಅಲ್ಪಸಂಖ್ಯಾತರಿಗೆ ಸಂವಾದಿಯಾಗಿ ಪರಿಗಣಿಸಬಾರದೆಂದೂ. ಬಹುಸಂಖ್ಯಾತರ ಹಿಂಸೆಯಿಂದ ಪಾರುಮಾಡಿಸುವಂಥ ರಕ್ಷಣೆಗಳನ್ನು ರಾಜ್ಯಾಂಗದಲ್ಲಿ ಸಮಾವೇಶಗೊಳಿಸಬೇಕೆಂದೂ ಅವರು ವಾದಿಸಿದರು. "ಪ್ರಜಾ ಪ್ರಭುತ್ವದಲ್ಲಿ ಸಾಮಾಜಿಕ ಪ್ರತಿಬಂಧಕಗಳಿಗಾಗಲೀ ಪ್ರತ್ಯೇಕತೆಗಾಗಲೀ ಸ್ಥಾನವಿರಕೂಡದು. ಸಮಾಜದಲ್ಲಿ ವಿಕಟವಾಗಿ ನರ್ತಿಸುತ್ತಿರುವ ಆಸುರೀಶಕ್ತಿಗಳಿಗೆ. ತಲೆದೋರುತ್ತಿರುವ ಅನಿಷ್ಟಗಳಿಗೆ ಕೈಗಾರಿಕೀಕರಣವಾಗಲೀ ಆಧುನಿಕ ನಾಗರೀಕತೆಯಾಗಲೀ ಕಾರಣವಲ್ಲ. ಸಾಮಾಜಿಕ ದುರ್ವ್ಯವಸ್ಥೆಯೇ ಮೂಲ : ಆಸ್ತಿ ಸಂಗ್ರಹಕ್ಕವಕಾಶ ಕೊಟ್ಟಿರುವುದೇ ಕಾರಣ. ಸಮಾಜದ ಹಿರಿಮೆಗೆ ಸಂಸ್ಕೃತಿಯೇ ಮೂಲ : ಮಾನಸಿಕ ಮತ್ತು ಬೌದ್ಧಿಕ ಕೃಷಿಯಿಂದ ಸಂಸ್ಕೃತಿ ವಿಕಾಸಗೊಳ್ಳುತ್ತದೆ: ಇಂಥ ಕೃಷಿ ಕಾರ್ಯಕ್ಕೆ ವಿರಾಮಬೇಕು: ಯಾಂತ್ರೀಕರಣ ಮನುಷ್ಯನಿಗೆ ವಿರಾಮವೊದಗಿಸುತ್ತದೆ. ರಾಷ್ಟ್ರೀಕರಣ ಮತ್ತು ಸಹಕಾರ ಕೃಷಿಕ್ಷೇತ್ರಗಳ ಮೂಲಕ ಸರ್ವಕಲ್ಯಾಣ ಸಾಧನೆ ಸಾಧ್ಯ. ಭೂಮಿ ಸರಕಾರಕ್ಕೆ ಸೇರಬೇಕು. ಕಾನೂನು ರಾಜಕೀಯ ವಿಧಾನವನ್ನಷ್ಟೇ ಅಲ್ಲ. ಆರ್ಥಿಕ ರಚನೆಯನ್ನೂ ನಿಯಂತ್ರಿಸಬೇಕು". ನಿಮ್ನವರ್ಗೀಯರ ಕ್ಷೇಮ ಸಾಧನಾಕಾಂಕ್ಷೆಯಿಂದ ಆ ಸಲಹೆಗಳು ಮೂಡಿದುವಾದರೂ ಅವುಗಳಲ್ಲಿ ರಾಜಕೀಯ ವಿಜ್ಞಾನಿ ಅಥವಾ ಅರ್ಥಶಾಸ್ತ್ರಜ್ಞನಿಂದ ನಿರೀಕ್ಷಿಸಬಹುದಾದ ಮೂಲಭೂತ ತತ್ತ್ವಗಳ ಪ್ರತಿಪಾದನೆಯನ್ನು ಗುರುತಿಸಬಹುದು.

ಅಸ್ಪೃಶ್ಯತೆಯನ್ನು ತೊಡೆದುಹಾಕುವ ಮತ್ತು ಅದನ್ನು ಮಹಾಪರಾಧವೆಂದು ಪರಿಗಣಿಸುವ ನಿರ್ಣಯವೊಂದು 29–4–1947 ರಂದು

ನಡೆದ ರಾಜ್ಯಾಂಗ ಸಭೆಯಲ್ಲಿ ಸರ್ವಾನುಮತದಿಂದ ಅಂಗೀಕೃತವಾಯಿತು. ಅದನ್ನು ಮಂಡಿಸಿದವರು ಸರದಾರ್ ಪಟೇಲರು. ಅಸ್ಪೃಶ್ಯ ವಿಮೋಚನೆ ಭಾರತೀಯ ಇತಿಹಾಸದಲ್ಲಿ ಸಂಭವಿಸಿದ ಅತ್ಯಪೂರ್ವ ಅಘಟಿತ ಘಟನೆ ಯೆಂದೂ ಮನುಕುಲದ ಸ್ವಾತಂತ್ರ್ಯಕ್ಕೆ ಸಂದ ವಿಜಯವೆಂದೂ, ಗುಲಾಮಿ ಪದ್ಧತಿಯ ನಿರ್ಮೂಲನಕ್ಕೆ ಸಮನಾದ ಐತಿಹಾಸಿಕ ಸಂಗತಿಯೆಂದೂ ದೇಶ ವಿದೇಶಗಳ ಪತ್ರಿಕೆಗಳು ಒಕ್ಕೊರಲಿನಿಂದ ಸಾರಿದುವು. ಎಲ್ಲ ಪತ್ರಿಕೆಗಳೂ ಆ ಲೋಕೋತ್ತರ ಘಟನೆಯ ಯಶಸ್ಸನ್ನು ಕಾಂಗ್ರೆಸ್ ಪಕ್ಷದ ಮತ್ತು ಗಾಂಧಿಯವರ ಹೆಸರಿಗೆ ಜಮಾ ಮಾಡಿದುವು. ಅಂಬೇಡ್ಕರರ ಹೋರಾಟದ ವಿಷಯ ಮಾತ್ರ ಎಲ್ಲಿಯೂ ಪ್ರಕಟವಾಗಲಿಲ್ಲ.

ಹೊಸ ವೈಸ್‌ರಾಯ್ ಲಾರ್ಡ್ ಮೌಂಟ್ ಬೇಟನ್ನರು ಮತ್ತೊಂದು ಯೋಜನೆಯೊಡನೆ 3–6–1947ರಂದು ಇಂಡಿಯಾಕ್ಕೆ ಬಂದರು. ಎರಡು ಕೇಂದ್ರ ಸರ್ಕಾರಗಳೂ, ಎರಡು ರಾಜ್ಯಾಂಗ ಸಭೆಗಳೂ ಆದಷ್ಟು ಬೇಗ ಅಸ್ತಿತ್ವಕ್ಕೆ ಬರುತ್ತವೆಂದು ಯೋಜನೆ ಪ್ರಕಟಿಸಿತು. ಸಿಲ್ಹೆಟ್ ಮತ್ತು ವಾಯುವ್ಯ ಸರಹದ್ದಿನ ಪ್ರಾಂತ್ಯಗಳಲ್ಲಿ ಜನಮತಗಣನೆ ನಡೆಯತಕ್ಕದ್ದೆಂದೂ ಅದು ಘೋಷಿಸಿತು. ಆ ಯೋಜನೆಗೆ ಕಾಂಗ್ರೆಸ್ಸು ಅಸ್ತು ಎಂದಿತು. ಸಮಾಜವಾದಿಗಳು ಮೌನತಾಳಿದರು. ಹಿಂದೂ ಮಹಾಸಭೆ ವ್ಯರ್ಥವಾಗಿ ಜಲ್ಪಿಸಿತು ತಾವು ಸ್ವತಂತ್ರವಾಗುಳಿಯುವುದಾಗಿ ತಿರುವಾಂಕೂರು ಮತ್ತು ಹೈದರಾಬಾದು ಸಂಸ್ಥಾನಗಳು ಉದ್ಘೋಷಿಸಿದುವು. ಸಂಸ್ಥಾನಗಳು ಇಂಡಿಯಾ ಒಕ್ಕೂಟದಲ್ಲಿ ವಿಲೀನಗೊಳ್ಳುವುದು ಶ್ರೇಯಸ್ಕರವೆಂದೂ. ಹಾಗೆ ವಿಲೀನಗೊಳ್ಳದಿದ್ದರೆ ಕಷ್ಟಪರಂಪರೆಗಳನ್ನೆದುರಿಸಬೇಕಾಗುತ್ತದೆಂದೂ ಅಂಬೇಡ್ಕರರು ಮುನ್ನೆಚ್ಚರಿಕೆ ನೀಡಿದರು. ಜುಲೈ 15ರಂದು ಬ್ರಿಟಿಷ್ ಪಾರ್ಲಿಮೆಂಟು ಭಾರತೀಯ ಸ್ವಾತಂತ್ರ್ಯ ಶಾಸನಕ್ಕೆ ಅಂಗೀಕಾರ ಮುದ್ರೆಯೊತ್ತಿತು. ರಾಜ್ಯಾಂಗಸಭೆ ಪರಮಾಧಿಕಾರವುಳ್ಳ ಸಂಸ್ಥೆಯಾಯಿತು. ಬಂಗಾಳ ವಿಭಜನೆಯ ಪರಿಣಾಮವಾಗಿ ಅಂಬೇಡ್ಕರರು ರಾಜ್ಯಾಂಗ ಸಭೆಯ ಸದಸ್ಯತ್ವವನ್ನು ಕಳೆದುಕೊಂಡರು. ಮುಂಬಯಿ ಶಾಸನ ಸಭೆಯ ಕಾಂಗ್ರೆಸ್ ಪಕ್ಷ ತೆರವಾಗಿದ್ದೊಂದು ಜಾಗಕ್ಕೆ ಅವರನ್ನು ಆರಿಸಿತು.

ಸ್ವತಂತ್ರ ಭಾರತದ ಪ್ರಪ್ರಥಮ ಸಚಿವ ಸಂಪುಟ ಜುಲೈ ತಿಂಗಳ ಕೊನೆಯಲ್ಲಿ ರಚನೆಗೊಳ್ಳಬೇಕಾಗಿತ್ತು. ಜನರ ಬಾಯಲ್ಲಿ, ಪತ್ರಿಕೆಗಳಲ್ಲಿ

ಅನೇಕ ಹೆಸರುಗಳು ಗಾಳಿಸುದ್ದಿಯಾಗಿ ಸುಳಿಯುತ್ತಿದ್ದುವು. ಪಂಡಿತ ನೆಹರೂ ಅವರು ಅಂಬೇಡ್ಕರರನ್ನು ತಮ್ಮ ಕೋಣೆಗೆ ಬರಮಾಡಿಕೊಂಡು. ಕಾನೂನು ಸಚಿವರಾಗಿ ಸಂಪುಟ ಸೇರುವ ವಿಷಯದಲ್ಲಿ ಅವರ ಅಭಿಪ್ರಾಯ ಕೇಳಿದರು. ಅಂಬೇಡ್ಕರರು ಒಪ್ಪಿಗೆ ಸೂಚಿಸಿದರು. ಭಂಗಿ ಕಾಲೋನಿಯಲ್ಲಿದ್ದ ಗಾಂಧೀಜಿ ಆ ಪಟ್ಟಿಯನ್ನು ಹರಸಿದರು. ಆ ತನಕ ಅಂಬೇಡ್ಕರರನ್ನು ಗುರುತಿಸದಿದ್ದ ಕಾಂಗ್ರೆಸ್ಸು ಸ್ವಾತಂತ್ರ್ಯಾವತರಣ ಸಂದರ್ಭದಲ್ಲಾದರೂ ಗುರುತಿಸಿದ್ದು ನಾಡಿನ ಭದ್ರತೆಯ ಮತ್ತು ಐಕ್ಯದ ದೃಷ್ಟಿಯಿಂದ ಒಳಿತಾಯಿತು. ಅಂಬೇಡ್ಕರರೂ ಹಳೆಯ ಕಹಿನೆನಪುಗಳನ್ನು ಮರೆತರು. ರಾಷ್ಟ್ರಕ್ಕೆರಾಷ್ಟ್ರವೇ ಅವರ ಮುತ್ಸದ್ದಿತನ ವನ್ನೂ ಮಹೌದಾರ್ಯವನ್ನೂ ಮುಕ್ತ ಕಂಠದಿಂದ ಹೊಗಳಿತು. ಕಾರ್ಮಿಕರು, ವಕೀಲರು, ನಿಮ್ನವರ್ಗೀಯರು, ನಾನಾ ರೀತಿಯ, ನಾನಾ ಕಸಬುಗಳ ಜನ ಸನ್ಮಾನ ಸಮಾರಂಭಗಳನ್ನೇರ್ಪಡಿಸಿ, ಅವರನ್ನು ಗೌರವಿಸಿದರು. ಆ ಗೌರವ ಪ್ರದರ್ಶನದಲ್ಲಿ ಯಾದೃಚ್ಛೆಯಿತ್ತು. ಅಪೂರ್ವ ಸಂಭ್ರಮವಿತ್ತು, ನಿರ್ವ್ಯಾಜ ವಾತ್ಸಲ್ಯವಿತ್ತು.

15–8–1947ರಂದು ಸ್ವತಂತ್ರ ಭಾರತದ ಉದಯವಾಯಿತು. ಸಚಿವ ಪದವಿಯ ಜತೆಗೆ ಮತ್ತೊಂದು ಗುರುತರವಾದ ಜವಾಬ್ದಾರಿ ಅಯಾಚಿತವಾಗಿ ಅವರ ಹೆಗಲ ಮೇಲೇರಿತು. ಆಗಸ್ಟ್ 29ರಂದು ಸಂವಿಧಾನ ಸಭೆ ಅವರನ್ನು ಪ್ರಾರೂಪ ಸಮಿತಿಯ ಅಧ್ಯಕ್ಷರಾಗಿ ನೇಮಿಸಿತು. ಸಾವಿರಾರು ವರ್ಷಗಳ ದಾಸ್ಯದಿಂದ ಜೀವಶವಗಳಂತೆ ಬಾಳು ಸಾಗಿಸಿಕೊಂಡು ಬಂದಿದ್ದ ಅಸ್ಪೃಶ್ಯರ ನಡುವೆ ಹುಟ್ಟಿ ಬೆಳೆದ ವ್ಯಕ್ತಿಯೊಬ್ಬರು ಪ್ರಾಚೀನ ಕಾಲದ ಸ್ಮೃತಿಕಾರರ ಲೋಪದೋಷಗಳನ್ನು ತಿದ್ದಿ, ಭಾರತದ ಗೌರವವನ್ನು ಹೆಚ್ಚಿಸುವ, ಪುನರುಜ್ಜೀವನಗೊಂಡ ಭಾರತದ ಇತಿಹಾಸವನ್ನು ನಿರ್ಮಿಸುವ, ರಾಜಕೀಯಾರ್ಥಿಕ ಸಾಮಾಜಿಕ ಭೇದ ಭಾವನೆಗಳನ್ನು ತೊಲಗಿಸಿ ಸರ್ವಸಮಾನತೆಯ ಸಂದೇಶ ವನ್ನು ಶಾಸನದ ಮೂಲಕ ಅನುಷ್ಠಾನಕ್ಕೆ ತರುವ ಪುಣ್ಯಕ್ಕೆ ಪಾತ್ರರಾಗುವ ಸಂಗತಿ ಅಸಾಮಾನ್ಯ ಘಟನೆಯೇ ಸರಿ. ಪ್ರಪಂಚದ ಸಕಲ ರಾಷ್ಟ್ರಗಳ ಸಂವಿಧಾನಗಳನ್ನು ಕರತಲಾಮಲಕ ಮಾಡಿಕೊಂಡಿದ್ದ ವಾಲ್ಟೇರ್, ರೂಸೋ. ಲಾಕ್, ಬರ್ಕ್ ಮೊದಲಾದ ಸ್ವಾತಂತ್ರ್ಯಾಲೋಚಕರ ವೈಚಾರಿಕ ಸಂದೇಶವನ್ನು ಮೈಗೂಡಿಸಿಕೊಂಡಿದ್ದ, ಹಿಂದೂ ಸಮಾಜದ ಉಗಮ ಸ್ವರೂಪ ವಿಕಾಸ ಗಳನ್ನೂ ಅವರ ನ್ಯೂನತೆಗಳನ್ನೂ ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದ್ದ

ಅಂಬೇಡ್ಕರರಂಥ ಪ್ರತಿಭಾವಂತರು ಇಂಡಿಯಾದಲ್ಲಿಯೇ ವಿರಳರ ಗಿದ್ದುದರಿಂದ ಆ ಸುವರ್ಣಾವಕಾಶ ಅವರಿಗೆ ಲಭ್ಯವಾಯಿತು.

ವಿಭಜನೆಯ ಫಲಾಫಲಗಳ ವಿಷಯದಲ್ಲಿ ಅಂಬೇಡ್ಕರರ ಭವಿಷ್ಯವಾಣಿ ನಿಜವಾಯಿತು. ದೆಹಲಿ ಲಾಹೋರಿನ ಬೀದಿಗಳು ರಕ್ತದ ಮಡುಗಳಾದುವು. ಪಾಕಿಸ್ತಾನದ ಹಿಂದುಗಳು ಅನಾಥರಾದರು. ಮತಾಂತರ ಅಥವಾ ಮರಣ ಇವೆರಡೇ ಅವರ ಮುಂದಿದ್ದ ದಾರಿಗಳು. ದೇಶತ್ಯಾಗಕ್ಕೂ ಅಲ್ಲಿಯ ಸರ್ಕಾರ ಅವಕಾಶ ಕೊಡಲಿಲ್ಲ. ಮಾರಮ್ಮನ ಜಾತ್ರೆಯಲ್ಲಿ ಪ್ರಾಣಿಗಳನ್ನು ವಧಿಸು ವಂತೆ ಮಕ್ಕಳುಮರಿಗಳ ತಲೆಗಳನ್ನು ಚೆಂಡಾಡಿದರು. ಪಾಕಿಸ್ತಾನದಲ್ಲಿ ಮಾತ್ರ ವಲ್ಲ, ಹೈದರಾಬಾದಿನಲ್ಲಿಯೂ ಮತಾಂತರ ಹೊಂದದೆ ಅಸ್ಪೃಶ್ಯರಿಗೆ ಉಳಿಗಾಲವಿಲ್ಲವೆಂದು ಅಂಬೇಡ್ಕರರು ಹೇಳಿಕೆಯಿತ್ತರು. "ಪಾಕಿಸ್ತಾನದಲ್ಲಿ ರುವ ನಿಮ್ನವರ್ಗೀಯರು ಹೇಗಾದರೂ ತಲೆತಪ್ಪಿಸಿಕೊಂಡು ಇಂಡಿಯಾಕ್ಕೆ ಬಂದು ಬಿಡಬೇಕು. ಅವರೆಲ್ಲಿಯೇ ಇರಲಿ, ಮುಸ್ಲಿಮರನ್ನು ನಂಬಬಾರದು, ಅದರಿಂದ ಅವರಿಗೆ ಸರ್ವಹಾನಿಗಳೂ ಪ್ರಾಪ್ತವಾಗುತ್ತವೆ. ಹಿಂದುಗಳ ಮೇಲಣ ಅವರ ದ್ವೇಷ ಮುಸ್ಲಿಮರ ಮೇಲಣ ಸ್ನೇಹವಾಗಿ ಪರಿಣಮಿಸಿದೆ. ಇದು ತಪ್ಪು . ಬಲಾತ್ಕಾರವಾಗಿ ಮತಾಂತರಗೊಂಡವರನ್ನು ಮತ್ತೆ ಸೇರಿಸಿ ಕೊಂಡು, ಸೋದರರಂತೆ ಪ್ರೀತಿಸುತ್ತೇವೆ. ಹಿಂದುಗಳು ತಪ್ಪುಮಾಡಿದರೆಂದು ನಾವು ಕರ್ತವ್ಯಚ್ಯುತರಾಗಬಾರದು, ಸಹನೆ ಕಳೆದುಕೊಳ್ಳಬಾರದು. ಭಾರತದ ಶತ್ರುವಾದ ನಿಜಾಮನ ಪಕ್ಷವಹಿಸಿ, ದೇಶದ್ರೋಹಿಗಳಾಗಬಾರದು."ಅಂಬೇಡ್ಕರರ ನಿಜ ಸ್ವಭಾವ ಈ ಹೇಳಿಕೆಯಿಂದ ಸುಸ್ಪಷ್ಟವಾಗುತ್ತದೆ. ನಾಡಿನ ಎಲ್ಲ ಪತ್ರಿಕೆ ಗಳೂ ಅವರ ಔದಾರ್ಯವನ್ನೂ ನಿಷ್ಕಳಂಕ ದೇಶಾಭಿಮಾನವನ್ನೂ ಕೊಂಡಾಡಿ ದುವು. ಇದೇ ಸಂದರ್ಭದಲ್ಲಿ ಮುಂಬಯಿ ಸರ್ಕಾರ ದೇವಾಲಯ ಪ್ರವೇಶ ಮಸೂದೆಗೆ ಶಾಸನ ಸಭೆಯ ಅಂಗೀಕಾರ ಪಡೆದು, ಅದನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಿದ್ದರಿಂದ ತಮ್ಮ ಶ್ರಮ ಸಾರ್ಥಕವಾಯಿತೆಂದೂ, ತಮ್ಮ ನಾಯಕರ ಉದ್ದೇಶ ಈಡೇರಿತೆಂದೂ ನಿಮ್ನ ವರ್ಗದ ಜನ ಹರ್ಷಿಸಿದರು.

ವಿಭಜನೆಯ ಪೀಡೆ ಮಿಲಿಯಗಟ್ಟಲೆ ಜನರನ್ನು ಬಲಿತೆಗೆದುಕೊಂಡಿತು ; ಸ್ವಾತಂತ್ರ್ಯವನ್ನು ತಂದುಕೊಟ್ಟು, ರಾಷ್ಟ್ರಪಿತನೆಂದು ಹೆಸರಾದ ಬಾಪೂಜಿ ಯನ್ನು ಸಹ ಆಹುತಿ ತೆಗೆದುಕೊಂಡಿತು. 30–1–1948ರಂದು ಅವರು ನಾಥೂರಾಮ್ ಗೋಡ್ಸೆಯ ಗುಂಡಿನಿಂದ ಸತ್ತರು. ಅಂಬೇಡ್ಕರರು ಆ ದುರಂತ

ಘಟನೆಯ ಬಗ್ಗೆ ಪ್ರತಿಕ್ರಿಯೆ ವ್ಯಕ್ತಪಡಿಸಲಿಲ್ಲ. ಪತ್ರಿಕೆಗಳಿಗೆ ಹೇಳಿಕೆಯನ್ನು ಕೊಡಲಿಲ್ಲ. ತುಸು ಹೊತ್ತು ಶ್ಮಶಾನ ಯಾತ್ರೆಯಲ್ಲಿ ಭಾಗವಹಿಸಿ, ತಮ್ಮ ಅಧ್ಯಯನ ಮಂದಿರಕ್ಕೆ ಹಿಂದಿರುಗಿದರು.

ಸಂವಿಧಾನ ರಚನೆಯ ಕಾರ್ಯದಿಂದಾಗಿ ಅಂಬೇಡ್ಕರರು ದಿನಕ್ಕೆ ಹದಿನೆಂಟು ಗಂಟೆ ದುಡಿಯಬೇಕಾಯಿತು. ಹಗಲೆಲ್ಲ ಪ್ರಾರೂಪ ಸಮಿತಿಯ ಸದಸ್ಯರೊಡನೆ ಮತ್ತು ಕಾನೂನು ತಜ್ಞರ ಕೂಡೆ ಚರ್ಚೆ. ರಾತ್ರಿಯೆಲ್ಲ ಕಚೇರಿ ತಯಾರಿಸಿದ ಕರಡಿನ ಪರಿಶೀಲನೆ : ಜತೆಗೆ ಹಲವು ಸಂವಿಧಾನಗಳ ವ್ಯಾಸಂಗ. ಎಷ್ಟೋ ರಾತ್ರಿ ನಿದ್ದೆ ತೊರೆದು ದೀಪದ ಮುಂದೆ ಕುಳಿತದ್ದುಂಟು. ಅವರು ಯಾವ ಕೆಲಸ ಕೈಗೆತ್ತಿಕೊಂಡರೂ ಅದರಲ್ಲಿ ವಿಜ್ಞಾನಿಯ ನಿಖರತೆಯನ್ನೂ ತತ್ತ್ವಜ್ಞಾನಿಯ ಸೂಕ್ಷ್ಮದೃಷ್ಟಿಯನ್ನೂ ಗುರುತಿಸಬಹುದಿತ್ತು. ಅವರ ಪ್ರತಿಭಾಮೂಷೆಯನ್ನು ಪ್ರವೇಶಿಸದೆ. ಅವರ ವಿವೇಕದ ತಕ್ಕಡಿಯಲ್ಲಿ ತುಲನೆಗೊಳ್ಳದೆ. ಅವರ ಲೇಖನಿಯಿಂದ ಪರಿಷ್ಕಾರಗೊಳ್ಳದ ಯಾವೊಂದು ಪಂಕ್ತಿಯೂ ಸಮಿತಿಯ ಮುಂದೆ ಹೋಗುವಂತಿರಲಿಲ್ಲ. ಹೆಸರಿಗೆ ಸಮಿತಿಯಿದ್ದರೂ ಸಂವಿಧಾನದ ಕರಡು ಸಿದ್ಧಮಾಡಿದವರು ಅಂಬೇಡ್ಕರ್ ಮತ್ತು ಅವರ ಕಾರ್ಯದರ್ಶಿಗಳು. 1948ನೆಯ ವರ್ಷದ ಫೆಬ್ರುವರಿ ಕೊನೆಯ ವಾರದಲ್ಲಿ ತಮ್ಮ ಕೆಲಸ ಮುಗಿಸಿ. ಕರಡು ಪ್ರತಿಯನ್ನು ಸಂವಿಧಾನ ಸಭೆಯ ಅಧ್ಯಕ್ಷರಿಗೆ ಒಪ್ಪಿಸಿದರು.

ಹಗಲಿರುಳು ಬಿಡುವಿಲ್ಲದೆ ದುಡಿದದ್ದರಿಂದ ಅವರ ಆರೋಗ್ಯ ಕೆಟ್ಟಿತು. ಚಿಕಿತ್ಸೆಗಾಗಿ ಅವರು ಮುಂಬಯಿಗೆ ಹೋದರು. ಹಿಂದಿನ ಒಂದು ವರ್ಷದಿಂದಲೂ ಅವರ ದೇಹಸ್ಥಿತಿ ಕುಂದುತ್ತಿತ್ತು. ಎಷ್ಟೋ ದಿನಗಳು ಕಣ್ಣಿಗೆ ನಿದ್ದೆ ಹತ್ತುತ್ತಿರಲಿಲ್ಲ. ಅಕಸ್ಮಾತ್ ಕಣ್ಣು ಮುಚ್ಚಿದರೆ ದುಃಸ್ವಪ್ನಗಳ ಕಾಟ. ಪ್ರತಿನಿತ್ಯ ಮಧ್ಯರಾತ್ರಿ ಸಮಯದಲ್ಲಿ ನರವ್ಯಾಧಿ ಪ್ರಾರಂಭವಾಗಿ ಬೆಳಕು ಹರಿಯುವತನಕ ವಿಪರೀತವಾಗಿ ಬಾಧಿಸುತ್ತಿತ್ತು. ಇನ್‌ಸುಲಿನ್ ಜತೆಗೆ ಹೋಮಿಯೋಪಥಿಕ್ ಮದ್ದು ತೆಗೆದುಕೊಳ್ಳುತ್ತಿದ್ದರು. ಆದರೆ ಅವುಗಳಿಂದ ಗುಣಕಾಣಲಿಲ್ಲ. ಈ ಮಧ್ಯೆ ಮಗ ಯಶವಂತನ ಭವಿಷ್ಯದ ಚಿಂತೆಯೂ ಅವರನ್ನು ಕಾಡುತ್ತಿತ್ತು. ಮಗ ಮತ್ತು ಅಣ್ಣನ ಮಗ ಇಬ್ಬರಿಗೂ ಯಾವುದಾದರೊಂದು ಕೈಗಾರಿಕೆಯನ್ನು ಏರ್ಪಾಡು ಮಾಡಿಕೊಟ್ಟು, ಜೀವನಯಾಪನೆಗನುಕೂಲಮಾಡಿಕೊಟ್ಟರೆ, ಉಳಿದ ಆಯುಷ್ಯವನ್ನು ನಿಶ್ಚಿಂತೆಯಿಂದ ಕಳೆಯ

ಬಹುದೆಂದು ಎಣಿಸಿಕೊಂಡಿದ್ದರು. ಅವರ ಆ ಮಕ್ಕಳಿಗೆ ಪಿತೃವಾತ್ಸಲ್ಯದಿಂದ ವ್ಯವಹಾರ ಕಲಿಸಿಕೊಟ್ಟು, ಸನ್ಮಾರ್ಗತೋರಿಸುವಂತೆ ತಮ್ಮ ಗೆಳೆಯ ನವಲ್ ಭಾತೇನ ಅವರನ್ನು ಕೇಳಿಕೊಂಡರು. ಮಕ್ಕಳು ಉದ್ಯೋಗ ಪ್ರಾರಂಭಿಸಿದ ಕೆಲವು ದಿನಗಳಲ್ಲಿಯೇ ಆ ವಿಷಯದಲ್ಲಿ ತಂದೆಗೆ ನಿರಾಶೆಯಾಯಿತು.

ಈ ನಿರಾಶೆ ಉದ್ವೇಗಗಳು ದಿನೇ ದಿನೇ ಅವರನ್ನು ಹಣ್ಣು ಮಾಡುತ್ತಿದ್ದುವು. ದೇಹ ಸ್ವಸ್ಥವಾಗಿದ್ದು, ಸದಾ ಕ್ರಿಯಾಶೀಲರಾಗಿದ್ದಾಗ ಮಡದಿಯ ಸಾವು ನೆನಪಿಗೆ ಬರುತ್ತಿರಲಿಲ್ಲ. ರೋಗ ಪೀಡಿತರಾಗಿ ಹಾಸುಗೆಯ ಮೇಲೆ ಬಿದ್ದುಕೊಂಡು ನರಳುವಾಗ ಸಂಗಾತಿಯ ನೆನಪಾಗುತ್ತಿತ್ತು. ಓದು ಬರಹಗಳಲ್ಲಿ ಕೈಮನಗಳನ್ನು ತೊಡಗಿಸುವಂತಿದ್ದರೆ ಶಾರೀರಕ ಯಾತನೆಯನ್ನು ಸಹಿಸಿಕೊಳ್ಳಬಹುದಿತ್ತು. ಆದರೆ ವೈದ್ಯರ ಸಲಹೆಯ ಮೇರೆಗೆ ವಿಶ್ರಾಂತಿ ಅನಿವಾರ್ಯವೆಂದು ಕಂಡುಬಂದಾಗ ಅವರಿಗೆ ಬೇರೆ ದಾರಿಯೇ ಇರಲಿಲ್ಲ. ಬುದ್ಧಿಯ ಕಾರ್ಯ ಸ್ಥಗಿತಗೊಂಡಾಗ ನರಗಳಬಾಧೆ ಅಸಹನೀಯವಾಗುತ್ತಿತ್ತು. ವಯಸ್ಸು ಮಾಗುತ್ತಿದ್ದಂತೆ ಸಂಗಾತಿಯ ಆವಶ್ಯಕತೆ ತೀವ್ರಗೊಳ್ಳುತ್ತದೆ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಅವರಿಗೆ ಕುಮಾರಿ ಶಾರದಾಕಬೀರ್ ಅವರ ಪರಿಚಯವಾಗುತ್ತದೆ. ಅವರು ವೈದ್ಯರು. ಅಂಬೇಡ್ಕರರು ಆಸ್ಪತ್ರೆಯಲ್ಲಿದ್ದಾಗ ಅವರ ಶುಶ್ರೂಷೆಯಲ್ಲಿ ಶಾರದಾ ಅವರು ತುಂಬ ಮುತುವರ್ಜಿ ವಹಿಸುತ್ತಿದ್ದರು. ಅವರು ಸಾರಸ್ವತ ಬ್ರಾಹ್ಮಣರಾದರೂ ಅಂಬೇಡ್ಕರರ ವ್ಯಕ್ತಿತ್ವಕ್ಕೆ ಮಾರುಹೋಗಿದ್ದರು. ಗುಣಾನುರಾಗಿಯೂ ಜ್ಞಾನಪಕ್ಷಪಾತಿಯೂ ಆದ ಆ ಮಹಿಳೆಯ ಕಣ್ಣಿನಲ್ಲಿ ಅವರು ಅಸ್ಪೃಶ್ಯರಾಗಿರಲಿಲ್ಲ. ಅವರ ಪರಿಚಯ ಸ್ನೇಹವಾಗಿ, ಸ್ನೇಹ ಪ್ರೇಮಕ್ಕೆ ತಿರುಗಿತು.

1948ರ ಜನವರಿ ತಿಂಗಳಲ್ಲೊಂದು ದಿನ ಬೆಳಗಿನ ಜಾವ ನಾಲ್ಕುಗಂಟೆಗೆ ಕಾಲಿನಲ್ಲಿ ನೋವು ಕಾಣಿಸಿಕೊಂಡಿತು. ಅದು ದಿನವಿಡೀ ಕಾಡುತ್ತಿತ್ತು. ತಮ್ಮ ಆರೋಗ್ಯ ದಿನೇ ದಿನೇ ಇಳಿಮುಖವಾಗುತ್ತಿದ್ದುದಾಗಿ ಚಿತ್ರೆಯವರಿಗೆ ಪತ್ರಬರೆದರು. ದಾರುಣವೇದನೆಯಿಂದಾಗಿ ನಾಲ್ಕಾರು ರಾತ್ರಿ ಎವೆಮುಚ್ಚಿಲ್ಲ. ಆಳುಗಳು ಮೂರು ಹೊತ್ತೂ ಅವರ ಬಳಿ ಕುಳಿತಿರಬೇಕಾಗುತ್ತಿತ್ತು. ಅವರು ಚಿತ್ರೆಯವರಿಗೆ ಬರೆದ ಮತ್ತೊಂದು ಪತ್ರದಲ್ಲಿ "ಖ್ಯಾತಿವೆತ್ತ ವೈದ್ಯರು ಪರೀಕ್ಷೆಮಾಡಿದರು. ಇಷ್ಟರಲ್ಲೇ ನೋವು ಗುಣವಾಗದಿದ್ದರೆ ಕಾಲಿನ ಬೇನೆ ಬಹುಕಾಲ ಎಳೆಯುತ್ತದೆ. ನನ್ನ ಆರೋಗ್ಯವನ್ನು ನೋಡಿಕೊಳ್ಳುವ,

ನನಗೆ ಶುಶ್ರೂಷೆ ಮಾಡುವ ಸಂಗಾತಿಯೊಬ್ಬರು ಬಳಿಯಿದ್ದರೆ ಮೇಲೆಂದು ಮನಸ್ಸು ಹಾತೊರೆಯುತ್ತಿದೆ. ನನ್ನ ಪರಿಸ್ಥಿತಿ ನಿಮಗರ್ಥವಾಗುತ್ತದೆಂದು ನಂಬಿದ್ದೇನೆ. ಡಾ॥ ಕಬೀರ್ ಅವರನ್ನು ಲಗ್ನವಾಗಬೇಕೆಂದು ನಿಶ್ಚಯಿಸಿದ್ದೇನೆ. ಅವರೂ ಒಪ್ಪಿದ್ದಾರೆ. ನಮ್ಮದು ಹೇಳಿ ಮಾಡಿಸಿದಂಥ ಜೋಡಿ. ತಪ್ಪೋ ಸರಿಯೋ ನಿರ್ಧಾರವಾದಿಯಾಗಿದೆ. ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿ ಅವರ ಉತ್ತರಕ್ಕಾಗಿ ಕಾದರು. ಬಾಪುರಾವ್ ಗಾಯಕವಾಡರಿಗೂ ತಮ್ಮ ಮದುವೆಯ ವಿಷಯ ತಿಳಿಸಿದರು. "ನನ್ನ ಮಡದಿ ತೀರಿಕೊಂಡನಂತರ ಮತ್ತೆ ಮದುವೆಯಾಗಬಾರದೆಂದು ತೀರ್ಮಾನಿಸಿಕೊಂಡಿದ್ದೆ. ನನ್ನ ಆರೋಗ್ಯ ಕುಸಿದನಂತರ ಸಂಗಾತಿಯ ಅವಶ್ಯಕತೆ ತಲೆ ದೋರಿತು. ವೈದ್ಯ ಗೊತ್ತಿರುವ, ಅಡುಗೆ ಮಾಡಬಲ್ಲ, ಮಹಿಳೆ ಸಿಗುವುದು ಕಷ್ಟ. ನಿಮ್ಮ ವರ್ಗದಲ್ಲಂತು ಇಲ್ಲವೇ ಇಲ್ಲ. ಆದ್ದರಿಂದ ಡಾ॥ ಕಬೀರ್‌ರವರೇ ಸರಿಯೆಂದು ತಿಳಿದಿದ್ದೇನೆ". ಈ ಇಬ್ಬರು ಮಿತ್ರರೂ ಅಂಬೇಡ್ಕರರನ್ನು ಹತ್ತಿರದಿಂದ ಬಲ್ಲವರಾದ್ದರಿಂದ ಅವರ ಒಂಟಿತನದ ಬೋಳು ಬಾಳಿನ ಬಗೆಗೆ ಕನಿಕರ ವ್ಯಕ್ತಪಡಿಸಿದರು.

ಆ ಸುದ್ದಿ ಮಗನ ಕಿವಿಗೆ ಬೀಳದಿರುತ್ತದೆಯೆ? ಅವನು ತಂದೆಯ ಬಳಿ ಬರುವುದನ್ನೇ ಬಿಟ್ಟ. ಬಂಧುಬಳಗದಲ್ಲಿ ತಂದೆಯ ನಿರ್ಧಾರವನ್ನು ಕುರಿತು ಟೀಕಿಸಿದ. ಆ ಸಂದರ್ಭವನ್ನುಪಯೋಗಿಸಿಕೊಂಡು ಎರಡು ಕಡೆಯೂ ಚಾಡಿ ಚುಚ್ಚುವರ ಸಂಖ್ಯೆ ಹೆಚ್ಚಿತು. ಅಂಬೇಡ್ಕರರ ಹತ್ತಿರದ ಸಹೋದ್ಯೋಗಿ ಯೊಬ್ಬರು ಕಬೀರ್ ಮತ್ತು ಯಶವಂತರ ನಡುವೆ ಕಲಹ ತಂದಿಕ್ಕಲೂ ಪ್ರಯತ್ನಿಸಿದ್ದಾಯಿತು. ನಿರ್ಧಾರವನ್ನು ಕಾರ್ಯಗತಗೊಳಿಸುವಲ್ಲಿ ತಳುವಿದರೆ ಮದುವೆಯೇ ನಿಂತುಹೋಗಬಹುದೆಂದು ಅಂಬೇಡ್ಕರರು ಹೆದರಿದರು. "ವಿಲಂಬದಿಂದ ಅಪಪ್ರಚಾರಕ್ಕೆಡೆಯಾಗುತ್ತದೆ. ಕೆಟ್ಟನಾಲಗೆಗಳ ಟೀಟೆಗವಕಾಶ ನೀಡಿದಂತಾಗುತ್ತದೆ. ಕಬೀರಳನ್ನು ಮದುವೆಯಾಗುವಲ್ಲಿ ಅನೈತಿಕತೆ ತೋರದು. ಇದು ನನ್ನ ಸ್ವಂತ ವಿಚಾರ. ಯಾರನ್ನೂ ವಂಚಿಸುತ್ತಿಲ್ಲ. ಯಾರಿಗೂ ಅನ್ಯಾಯ ವೆಸಗುತ್ತಿಲ್ಲ. ಯಶವಂತನ ಜೀವಿಕೆಗೂ ಕಡಿಮೆ ಮಾಡಿಲ್ಲ. ಅವನಿಗಾಗಿ ಎಂಬತ್ತು ಸಾವಿರ ರೂಪಾಯಿನ ಮನೆಯಿದೆ. ಮೂವತ್ತು ಸಾವಿರ ರೂಪಾಯಿ ನಗದು ಹಣ ಕೊಟ್ಟಿದ್ದೇನೆ. ತಂದೆಯಾದವನು ಇದಕ್ಕಿಂತ ಹೆಚ್ಚೇನು ಮಾಡಬೇಕಾಗಿದೆ? ಏಪ್ರಿಲ್ 15ರಂದು ಮದುವೆ ನಿಶ್ಚಿತವಾಗಿದೆ. ನೀವು ಬನ್ನಿ" ಎಂದವರು ಚಿತ್ರೆಗೆ ಪತ್ರಬರೆದು ತಿಳಿಸಿದರು.

ಗೊತ್ತಾದ ದಿನದಂದು ದೆಹಲಿಯ ಅವರ ನಿವಾಸದಲ್ಲಿ ಕಾನೂನಿಗನು ಗುಣವಾಗಿ ದೆಹಲಿಯ ಜಿಲ್ಲಾಧಿಕಾರಿಗಳ ಸಮ್ಮುಖದಲ್ಲಿ ಮದುವೆ ಜರುಗಿತು. ನಿರಾಡಂಬರ ಲಗ್ನವಾದದ್ದರಿಂದ, ಕೆಲವೇ ಕೆಲವು ಗೆಳೆಯರನ್ನು ಆಹ್ವಾನಿಸ ಲಾಗಿತ್ತು. ಮದುವೆಯ ಅಂಗವಾಗಿ ಬಂದಿದ್ದ ಗೆಳೆಯರಿಗೆ ಭೋಜನ ಕೂಟ ಏರ್ಪಡಿಸಲಾಗಿತ್ತು. ಅಂಬೇಡ್ಕರರಿಗಾಗ 57 ವರ್ಷ.

ಅದೇ ತಿಂಗಳ ಕೊನೆಯ ವಾರದಲ್ಲಿ ಅಂಬೇಡ್ಕರರು ನಿಮ್ನ ವರ್ಗೀಯರ ಸಮ್ಮೇಲನವನ್ನುದ್ದೇಶಿಸಿ ಮಾತಾಡುತ್ತ, ನಿಮ್ನ ಜನ ಮೂರನೆಯ ಪಕ್ಷ ವಾಗಿ ವಿಕಾಸಗೊಂಡು, ಕಾಂಗ್ರೆಸ್ಸು ಮತ್ತು ಸಮಾಜವಾದೀ ಪಕ್ಷಗಳ ನಡುವೆ ಸಮತೋಲನವನ್ನು ಸಾಧಿಸುತ್ತ ರಾಜಕೀಯಾಧಿಕಾರವನ್ನು ಸಂಪಾದಿಸಿಕೊಳ್ಳ ಬೇಕೆಂದು ಅವರಿಗೆ ಉತ್ತೇಜನ ನೀಡಿದರು. "ನಾನು ಕೇಂದ್ರ ಸರ್ಕಾರ ದಲ್ಲಿದ್ದೇನೆಯೇ ಹೊರತು, ಕಾಂಗ್ರೆಸ್ ಪಕ್ಷ ಸೇರಿಲ್ಲ. ಅದು ಉರಿಯುತ್ತಿರುವ ಮನೆ. ಅದು ಕೆಲವೇ ವರ್ಷಗಳಲ್ಲಿ ನಿರ್ನಾಮವಾಗುವುದಾದರೆ ಆಶ್ಚರ್ಯ ಪಡಬೇಕಾಗಿಲ್ಲ. ನಾನೇನಾದರೂ ಅದನ್ನು ಸೇರುವುದಾದರೆ ಕಲ್ಗುಂಡಿನಂತೆ ಗಟ್ಟಿಯಾಗಿರುತ್ತೇನೆ. ಆದರೆ ಅಲ್ಲಿರುವ ನಮ್ಮವರು ಮಣ್ಣುಹೆಂಟೆಯಂತೆ ಕರಗಿ ಹೋಗಿದ್ದಾರೆ. ಈ ಕಾರಣದಿಂದ ನಿಮ್ನವರ್ಗೀಯ ಸಂಯುಕ್ತ ಸಂಘವನ್ನು ಬಲಪಡಿಸಬೇಕಾಗಿದೆ." ಅವರ ಈ ಭಾಷಣ ಕಾಂಗ್ರೆಸ್ ವೃತ್ತಗಳಲ್ಲಿ ತುಂಬ ಕಿರಿಕಿರಿಯುಂಟುಮಾಡಿತು. "ನೆಹ್ರೂ, ಪಟೇಲರಿಬ್ಬರೂ ಈ ಪ್ರಸ್ತಾಪವೆತ್ತಿದಾಗ ಬಿಸಿ ಬಿಸಿ ಚರ್ಚೆ ನಡೆಯಿತು. ನನ್ನಿಂದವರಿಗೆ ಮುಜುಗರವಾಗಿದ್ದರೆ ರಾಜೀನಾಮೆ ನೀಡಲೂ ಸಿದ್ಧವೆಂದವರಿಗೆ ತಿಳಿಸಿದೆ. ಕೆಲವುದಿನಗಳಲ್ಲಿ ಅತ್ತಲೋ ಇತ್ತಲೋ ತೀರ್ಮಾನವಾಗುವಂತಿದೆ" ಎಂಬುದಾಗಿ ಅವರು ಚಿತ್ರೆ ಅವರಿಗೆ ಪತ್ರ ಬರೆದು ತಿಳಿಸಿದರು. ವಿರೋಧಕ್ಕಾಗಿ ವಿರೋಧಿಸುವ ಚಪಲ ತಮ್ಮಲ್ಲಿಲ್ಲ ವೆಂದೂ, ಸಂಪುಟದಲ್ಲಿದ್ದುಕೊಂಡು ನಿಮ್ನ ಜನರ ಸಮಸ್ಯೆಗಳನ್ನು ಪರಿಹರಿಸ ಲನುಕೂಲವಾಗುತ್ತದೆಂಬ ತಿಳಿವಳಿಕೆಯಿಂದ ನೆಹ್ರೂರವರ ಆಹ್ವಾನವನ್ನಂಗೀ ಕರಿಸಲಾಯಿತೆಂದೂ, ಅವರು ಅನಂತರ ಪತ್ರಿಕೆಗಳಿಗಿತ್ತ ಹೇಳಿಕೆಯಲ್ಲಿ ತಮ್ಮ ನಿಲವನ್ನು ಸ್ಪಷ್ಟಪಡಿಸಿದರು. ಆದರೂ ಆ ವಿವಾದ ಆಗಸ್ಟ್ ತಿಂಗಳತನಕ ಹೊಗೆಯಾಡುತ್ತಲೇ ಇತ್ತು.

ಅನೇಕ ರಾಜಕೀಯ ಘಟನೆಗಳು ವಿದ್ಯುದ್ವೇಗದಲ್ಲಿ ಸಾಗುತ್ತಿದ್ದಾಗ ಕೇಂದ್ರ ಸರ್ಕಾರ ಜನತೆಯ ಒತ್ತಡಕ್ಕೆ ಮಣಿದು ರಾಜ್ಯಪುನರ್ವಿಂಗಡಣಾ

ಸಮಿತಿಯನ್ನು ನೇಮಿಸಬೇಕಾಯಿತು. ಮಹಾರಾಷ್ಟ್ರದ ಪರವಾಗಿ ಅಂಬೇಡ್ಕರರೂ ಸಾಕ್ಷ್ಯನೀಡಿದರು. ತಮ್ಮ ಸ್ವಭಾವಕ್ಕನುಗುಣವಾಗಿ ನಿವೇದನ ಪತ್ರವನ್ನು ಸಿದ್ಧಪಡಿಸಿ. ಸಮಿತಿಗೊಪ್ಪಿಸಿದರು. "ಏಕ ಭಾಷೆ. ಏಕ ಜೀವನ ಮಾರ್ಗ ಮತ್ತು ಏಕಮತ ರಾಷ್ಟ್ರೀಯತೆಯ ಸ್ತಂಭಗಳು ನಿಜ. ಭಾಷಾವಾರು ಪ್ರಾಂತ್ಯ ರಚನೆಯಿಂದ ರಾಷ್ಟ್ರೀಯತೆಗೂ ಏಕತೆಗೂ ಭಂಗಬರುತ್ತದೆ. ಸಂಯುಕ್ತರಾಜ್ಯ ವ್ಯವಸ್ಥೆಯಲ್ಲಿ ಬೇರೆ ಬೇರೆ ಘಟಕಗಳಿರಬೇಕೆಂಬುದು ಸರಿ. ಆಡಳಿತದ ಅನುಕೂಲಕ್ಕೆ ತಕ್ಕಂತೆ ಅವುಗಳನ್ನು ಸೃಷ್ಟಿಸಬೇಕು. ಭಾಷಾವಾರು ಪ್ರಾಂತ್ಯರಚನೆಯಾಗಿ. ಅಲ್ಲಲ್ಲಿಯ ಭಾಷೆಗಳೇ ಆಡಳಿತ ಮಾಧ್ಯಮಗಳಾಗುವ ಪಕ್ಷಕ್ಕೆ ಪ್ರಾಂತೀಯ ಸಂಸ್ಕೃತಿಗಳು ವಿಕಾಸಗೊಂಡು. ಘನೀಕರಿಸಿ. ನಡುಗಡ್ಡೆಗಳಾಗಿ ಸ್ವತಂತ್ರ ರಾಷ್ಟ್ರನಿರ್ಮಾಣಕ್ಕೆ ಸಾಧನಗಳಾಗುವ ಸಂಭವವುಂಟು.

"ಒಂದು ಭಾಷೆಗೊಂದು ರಾಜ್ಯವೆನ್ನುವ ತತ್ತ್ವ ಸರಿಯಾದುದಲ್ಲ. ಭಾಷಾಸೀಮೆಯಾಗಲಿ ರಾಜ್ಯದ ಗಡಿಯಾಗಲಿ ಒಂದೆಡೆ ಸೇರಬೇಕಾಗಿಲ್ಲ. ಜನಸಂಖ್ಯೆಗನುಗುಣವಾಗಿ ಒಂದು ಭಾಷೆ ಚಾಲ್ತಿಯಲ್ಲಿರುವ ಪ್ರದೇಶವನ್ನು ಹಲವು ರಾಜ್ಯಗಳಾಗಿ ವಿಂಗಡಿಸಬಹುದು. ಸಂಯುಕ್ತರಾಜ್ಯ ವ್ಯವಸ್ಥೆಯ ಘಟಕಗಳ ಸಮತೋಲನವಿರಬೇಕು. ಜನಸಂಖ್ಯೆಯಲ್ಲಾಗಲೀ ಅಧಿಕಾರ ಹಂಚಿಕೆಯಲ್ಲಾಗಲೀ ಅಸಮಾನತೆಯಿರುವುದಾದರೆ ದೇಶಕ್ಕೆ ವಿಪತ್ತು ಪ್ರಾಪ್ತವಾಗುತ್ತದೆ. ಸಣ್ಣ ರಾಜ್ಯಗಳಲ್ಲಿ ಮಾತ್ರ ದಕ್ಷ ಆಡಳಿತ ಸಾಧ್ಯ. ಉತ್ತರಪ್ರದೇಶ, ಬಿಹಾರ, ಮಧ್ಯಪ್ರದೇಶ. ಮಹಾರಾಷ್ಟ್ರದಂಥ ದೈತ್ಯಾಕಾರದ ರಾಜ್ಯಗಳು ಕೇಂದ್ರಾಡಳಿತಕ್ಕೂ ಅಲ್ಪಸಂಖ್ಯಾತರಿಗೂ ಅಪಾಯಕಾರಿಯಾಗುತ್ತವೆ. ಉತ್ತರ ಪ್ರದೇಶವನ್ನು ಮೂರಾಗಿ. ಉಳಿದುವನ್ನು ಎರಡೆರಡಾಗಿ ಒಡೆಯುವುದು ಮೇಲು. ಅಷ್ಟೇ ಅಲ್ಲ, ಇಂಡಿಯಾದಂಥ ವೈವಿಧ್ಯಮಯವೂ ಅತಿ ವಿಸ್ತಾರವೂ ಆದ ದೇಶದಲ್ಲಿ ಸಂಯುಕ್ತ ವ್ಯವಸ್ಥೆಗಳಿದ್ದು, ಅವೆರಡಕ್ಕೂ ಕೊಂಡಿಯಾಗಿ ಅಧಿಸಂಯುಕ್ತ ವ್ಯವಸ್ಥೆಯಿರುವುದೊಳ್ಳೆಯದು. ರಕ್ಷಣೆಯ ದೃಷ್ಟಿಯಿಂದ ದಕ್ಷಿಣದಲ್ಲೊಂದು ರಾಜಧಾನಿಯಿರಬೇಕು. ಮಹಾರಾಷ್ಟ್ರದಿಂದ ಮುಂಬಯಿಯನ್ನು ಬೇರ್ಪಡಿಸಲಾಗದು. ಅವೆರಡನ್ನೂ ದೇವರೇ ಒಟ್ಟಿಗೆ ಗಂಟು ಹಾಕಿದ್ದಾನೆ." ಆಂಗ್ಲಭಾಷೆ ನಾಡಿನಿಂದ ಉಚ್ಚಾಟನೆಗೊಳ್ಳಬಾರದೆಂಬುದು ಅವರ ಆಶಯ. ಪುನರ್ವಿಂಗಡಣೆಗೆ ಅವರು ವಿರೋಧಿಯಲ್ಲ. ವೈಧಾನಿಕತೆಯ ವಿಚಾರದಲ್ಲಿ ಮಾತ್ರ ಅವರ ಅಭಿಪ್ರಾಯ ಬಹುಮತಕ್ಕೆ ವಿರೋಧವಾಗಿತ್ತು.

1948 ನೆಯ ಸಂವತ್ಸರದ ನವೆಂಬರ್ 4ನೆಯ ತೇದಿ ಅವರ ಬಾಳಿನ ಮಹಾದಿನಗಳಲ್ಲೊಂದು. ಅಂದು ಅವರು ರಾಜ್ಯಾಂಗ ಸಭೆಯಮುಂದೆ ಕರಡು ಮಸೂದೆಯನ್ನು ಮಂಡಿಸಿ, ಅದರ ಸ್ವರೂಪ ಲಕ್ಷಣಗಳನ್ನೂ ವೈಶಿಷ್ಟ್ಯಗಳನ್ನೂ ವಿಶದೀಕರಿಸಿ "ಪ್ರಪಂಚದ ಪ್ರಪ್ರಥಮ ಲಿಖಿತ ಸಂವಿಧಾನ ಬಂದು ನೂರು ವರ್ಷವಾಗಿದೆ. ಅನೇಕ ರಾಷ್ಟ್ರಗಳಿಗೆ ಅದೇ ಮಾದರಿಯಾಗಿದೆ. ಸಂವಿಧಾನದ ಮೂಲಭೂತ ಸ್ವರೂಪ ವ್ಯಾಪ್ತಿಪರಿಮಿತಿಗಳು ಅದರಲ್ಲಿ ಸ್ಪಷ್ಟವಾಗಿವೆ. ಆದ್ದರಿಂದ ವಿವಿಧ ರಾಷ್ಟ್ರಗಳ ಸಂವಿಧಾನಗಳಲ್ಲಿ ಸಾಮ್ಯಗಳು ಅಧಿಕ ಪ್ರಮಾಣದಲ್ಲಿ ತಲೆದೋರಿದರೆ ತಪ್ಪಲ್ಲ. ಅವುಗಳಲ್ಲಿನ ನ್ಯೂನತೆಗಳನ್ನು ತುಂಬಿಕೊಂಡು, ದೋಷಗಳನ್ನು ತೆಗೆದುಹಾಕಿ, ನಮ್ಮ ಜನರ ಆಶೋತ್ತರಗಳನ್ನು ಪ್ರತಿಬಿಂಬಿಸುವಂತೆ ತಿದ್ದಿಕೊಂಡರೆ ಸಾಕು. ಜೀವನದಲ್ಲಿ ಸ್ವೀಕರಣ ಅನಿವಾರ್ಯ. ಅದಕ್ಕಾಗಿ ನಾಚಿಕೆಪಡಬೇಕಾಗಿಲ್ಲ. ಇದು ಪ್ರಯೋಗಯೋಗ್ಯವಾಗಿದೆ ; ಸಮರ ಶಾಂತಿ ಕಾಲಗಳಲ್ಲಿ ರಾಷ್ಟ್ರೈಕ್ಯವನ್ನು ರಕ್ಷಿಸುವಂಥದಾಗಿದೆ. ಸಂವಿಧಾನ ಜಾರಿಗೆ ಬಂದನಂತರ ಏನಾದರೂ ಅನಾಹುತ ಸಂಭವಿಸಿದ್ದಾದರೆ ಅದಕ್ಕೆ ಸಂವಿಧಾನ ಕಾರಣವಲ್ಲ, ಮಾನವನ ನೀಚತನವೆಂದು ಹೇಳಬೇಕಾಗುತ್ತದೆ. ಅಲ್ಪಸಂಖ್ಯಾತರಿಗೆ ನೀಡಿರುವ ರಕ್ಷಣೆಯ ಬಗ್ಗೆಯೂ ಟೀಕೆಯೆದ್ದಿದೆ. ಆ ರಕ್ಷಣೆ ನಾನು ಕೊಟ್ಟಿದ್ದಲ್ಲ, ರಾಜ್ಯಾಂಗ ಸಭೆ. ಆ ಸಭೆ ಕೈಕೊಂಡಿರುವ ಕಾರ್ಯ ಸ್ತುತ್ಯರ್ಹವಾಗಿದೆ. ಈ ರಕ್ಷಣೆಗಳು ಶಾಶ್ವತವಾಗುಳಿಯಬೇಕೆನ್ನುವವನಲ್ಲ ನಾನು."

ರಾಜ್ಯಾಂಗ ಸಭೆಯ ಸದಸ್ಯರು ಕಣ್ಣಲ್ಲಿ ಕಣ್ಣಿಟ್ಟುಕೊಂಡು ಸಂವಿಧಾನದ ಪ್ರತಿಯೊಂದು ಪದಪಂಕ್ತಿಯನ್ನೂ ಪರಿಶೀಲಿಸಿದರು. ಹಲವು ತಿದ್ದುಪಡಿಗಳ ಮೂಲಕ ಅದನ್ನು ಪರಿಷ್ಕರಿಸಲಾಯಿತು. ಆದರೆ ಅವುಗಳಿಂದ ಸಂವಿಧಾನದ ಮೂಲಸ್ವರೂಪಕ್ಕೆ ಭಂಗ ಬರಲಿಲ್ಲ. ಅಧ್ಯಕ್ಷ ರಾಜೇಂದ್ರಪ್ರಸಾದರು ಪ್ರಧಾನಿ ಜವಾಹರಲಾಲ್ ನೆಹ್ರೂರವರಾದಿಯಾಗಿ ಎಲ್ಲ ಸದಸ್ಯರೂ ಅಂಬೇಡ್ಕರರ ಸಂವಿಧಾನ ಪಾಂಡಿತ್ಯವನ್ನೂ, ಸ್ವೋಪಜ್ಞತೆಯನ್ನೂ, ವಾದ ವೈಖರಿಯನ್ನೂ, ಮೇಲಾಗಿ ಅವರ ಶ್ರಮಸಹಿಷ್ಣುತೆಯನ್ನೂ ಒಕ್ಕೊರಲಿನಿಂದ ಪ್ರಶಂಸಿದರು.

ತೃತೀಯ ವಾಚನಾನಂತರ ಮಸೂದೆಯನ್ನು ಸಭೆಯ ಅಂಗೀಕಾರಕ್ಕಾಗಿ ಮಂಡಿಸುವ ಮುನ್ನ ಅಂಬೇಡ್ಕರರು ಸದಸ್ಯರ ಟೀಕೆಗಳಿಗೆ ಸೂಕ್ತ ಉತ್ತರವಿತ್ತು ತಮ್ಮೊಡನೆ ಸಹಕರಿಸಿದ ಸಹೋದ್ಯೋಗಿಗಳಿಗೆ ಕೃತಜ್ಞತೆಯನ್ನು ಸಲ್ಲಿಸಿ. ತಮ್ಮ ಕಾರ್ಯಕ್ಷಮತೆಯನ್ನು ಪ್ರಶಂಸಿಸಿದ ಸದಸ್ಯರನ್ನು ವಂದಿಸಿದರು. "ನಿಮ್ಮ ಜನರ ಹಿತಾಸಕ್ತಿಗಳನ್ನು ರಕ್ಷಿಸುವ ಸಲುವಾಗಿ ನಾನು ರಾಜ್ಯಾಂಗ ಸಭೆಗೆ

ಬಂದದ್ದು. ಬೇರಾವ ಆಸೆಯೂ ನನ್ನ ಮನಸ್ಸಿನಲ್ಲಿರಲಿಲ್ಲ. ಕಾರ್ಯರೂಪಕ್ಕೆ ತರುವ ಜನ ದುರ್ಜನರಾದರೆ ಒಳ್ಳೆಯ ಸಂವಿಧಾನವೂ ದುಷ್ಟವಾಗುತ್ತದೆ; ದೋಷಪೂರ್ಣವಾದ ಸಂವಿಧಾನ ಸಜ್ಜನರ ಕೈಯಲ್ಲಿ ಶ್ರೇಯಸ್ಕರವಾಗುತ್ತದೆ. ಜನ ಕಾನೂನು ಬದ್ಧವಾಗಿ ವರ್ತಿಸಿದಾಗ ಉದ್ದೇಶ ನೆರವೇರುತ್ತದೆ ; ದಂಗೆಯೆದ್ದಾಗ ಸಂವಿಧಾನ ಸೋತುಹೋಗುತ್ತದೆ. ಕಮ್ಯೂನಿಷ್ಟರಿಗೂ ಸಮಾಜವಾದಿಗಳಿಗೂ ಇದು ಹಿಡಿಸಿಲ್ಲ. ನನ್ನ ಇಚ್ಛೆಗೆ ವಿರುದ್ಧವಾಗಿ ಕೆಲವು ಸಂಗತಿಗಳು ಸೇರ್ಪಡೆಗೊಂಡಿವೆ. ಆದರೆ ಇದು ಒಟ್ಟಿನಲ್ಲಿ ಇಂದಿನ ಪೀಳಿಗೆಯ ಆಶಯವನ್ನು ಪ್ರತಿಬಿಂಬಿಸುತ್ತದೆಂದು ಧಾರಾಳವಾಗಿ ಹೇಳಬಹುದು.

"ನನ್ನ ಮನಸ್ಸನ್ನು ಕಲಕುತ್ತಿರುವ ಒಂದು ವಿಷಯವನ್ನೇ ಇಲ್ಲಿ ನಿರೂಪಿಸಬೇಕಾಗಿದೆ. ಭಾರತ ಈಗ ಸ್ವತಂತ್ರವಾಗಿದೆ. ಜನ ಅದನ್ನುಳಿಸಿಕೊಳ್ಳುತ್ತಾರೆಯೇ? ಚರಿತ್ರೆಯ ಪುಟಗಳನ್ನು ತಿರುವಿಹಾಕಿದಾಗ ಸಂದೇಹ ಮರುಕಳಿಸುತ್ತದೆ. ಹಿಂದೆ ಸ್ವಾತಂತ್ರ್ಯಹಾನಿಗೆ ಯಾರು ಕಾರಣ? ವಿದೇಶೀಯರೆ? ಅಲ್ಲ. ದೇಶದ್ರೋಹಿಗಳು. ಮಹಮದ್ ಬಿನ್ ಕಾಸಿಮ್ ಸಿಂದ್ ರಾಜ್ಯದಮೇಲೆ ಧಾಳಿ ಮಾಡಿದಾಗ. ಅವನಿಂದ ಲಂಚಪಡೆದ ದೊರೆಯ ಸೈನ್ಯಾಧಿಕಾರಿಗಳು ಶಸ್ತ್ರ ಸನ್ಯಾಸ ಸ್ವೀಕರಿಸಿದರು. ಮಹಮದ್ ಘೋರಿಯ ವಿಜಯಕ್ಕೆ ಜಯಚಂದ ಕಾರಣನಲ್ಲವೆ? ಹಿಂದುಗಳ ವಿಮೋಚನೆಗಾಗಿ ಶಿವಾಜಿ ಹೋರಾಡುತ್ತಿದ್ದಾಗ ಮರಾಠಾಸರ್ದಾರರೂ ರಜಪೂತ ದೊರೆಗಳೂ ಮೊಗಲ್ ಚಕ್ರವರ್ತಿಯ ಪಕ್ಷವನ್ನು ವಹಿಸಲಿಲ್ಲವೆ? ಆಂಗ್ಲರು ಸಿಖ್ ದೊರೆಗಳನ್ನು ವಶಪಡಿಸಿಕೊಂಡಾಗ ಸೇನಾಧಿಪತಿ ಗುಲಾಬ್‌ಸಿಂಗ್ ತೆಪ್ಪಗಿರಲಿಲ್ಲವೆ? ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕಾಲದಲ್ಲಿ ಸಿಕ್ಕರು ಮೌನ ಪ್ರೇಕ್ಷಕರಂತೆ ಕುಳಿತಿರಲಿಲ್ಲವೆ? ನಮ್ಮಲ್ಲಿರುವ ನೂರಾರು ಜಾತಿಗಳು ಮತ್ತು ಹಲವಾರು ರಾಜಕೀಯ ಪಕ್ಷಗಳು ರಾಷ್ಟ್ರಭದ್ರತೆಗೆ ತೊಡಕಾಗುವುದಿಲ್ಲವೆ ? ದೇಶ ಕ್ಷೇಮವೇ ಅವುಗಳ ಪ್ರಧಾನ ಧ್ಯೇಯವಾಗುವುದಾದರೆ ಸ್ವಾತಂತ್ರ್ಯಕ್ಕೆ ಧಕ್ಕೆಯೊದಗುವುದಿಲ್ಲ.

"ರಾಜಕೀಯ ಪ್ರಜಾಪ್ರಭುತ್ವದ ಯಶಸ್ಸಿಗೆ ಸಾಮಾಜಿಕ ಪ್ರಜಾಪ್ರಭುತ್ವವೇ ಮೂಲ ಕಾರಣ. ರತ್ನತ್ರಯಗಳಾದ ಸ್ವಾತಂತ್ರ್ಯ ಸಮಾನತೆ ಸೋದರತ್ವಗಳೇ ಸಾಮಾಜಿಕ ಪ್ರಜಾಪ್ರಭುತ್ವದ ಅಡಿಗಲ್ಲು. ಇವುಗಳ ಅನುಷ್ಠಾನವಿಲ್ಲದೆ ಐಕ್ಯವೂ ಇಲ್ಲ, ರಾಷ್ಟ್ರವೂ ಇಲ್ಲ. ಈ ದೇಶದಲ್ಲಿ ರಾಜಕೀಯಾಧಿಕಾರ ಕೆಲವರ ಏಕಸ್ವಾಮ್ಯವಾಗಿರುವುದರಿಂದ ಇಷ್ಟು ಮಾತಾಡಬೇಕಾಯಿತು."

ಸಂವಿಧಾನ ರಚನೆ ಭಾರತೀಯ ಇತಿಹಾಸದಲ್ಲೊಂದು ಮೈಲಿಗಲ್ಲು. ಸಮಸ್ತ ಭಾರತವನ್ನು ಐಕ್ಯಗೊಳಿಸುವಲ್ಲಿ, ಅದರ ಅಖಂಡತ್ವವನ್ನು ಸಾರುವಲ್ಲಿ ಇದೇ ಪ್ರಪ್ರಥಮ ಪ್ರಯತ್ನವೆನ್ನಬಹುದು. ಭಾರತೀಯರೆಲ್ಲರೂ ಸಂಭ್ರಮಾ ನಂದಗಳಿಂದ ಸ್ವಾಗತಿಸಬೇಕಾದ ಮಹದ್ಘಟನೆಯದು. ಅಂಬೇಡ್ಕರರು ರಾಜ್ಯಾಂಗ ಸಭೆಯಲ್ಲಿ ಅದ್ಭುತ ವಿಜಯವನ್ನು ಸಾಧಿಸಿದ ನಂತರ ವಿಮಾನದಲ್ಲಿ ಮುಂಬಯಿಗೆ ಬಂದಾಗ ಇಡೀ ಮಹಾರಾಷ್ಟ್ರವೇ ಹೆಮ್ಮೆಯಿಂದ ಅವರಿಗೆ ಸ್ವಾಗತ ನೀಡಿತು. ಮುಂಬಯಿಯ ನಿಮ್ನವರ್ಗೀಯ ಸಂಯುಕ್ತ ಸಂಘ ಪರೇಲಿನಲ್ಲಿ ಸಭೆ ನಡೆಸಿ. ಸಂವಿಧಾನದ ಪ್ರತಿಯುಳ್ಳ ಕನಕರೂಪದ ಕರಂಡ ವನ್ನವರಿಗೆ ಸಮರ್ಪಿಸಿತು. ಅವರ ಜನ್ಮೋತ್ಸವ ಸಮಾರಂಭದಲ್ಲಿ ಭಾಗ ವಹಿಸಿದ್ದ ನ್ಯಾಯಮೂರ್ತಿ ಎಂ. ಸಿ. ಚಾಗ್ಲಾ ಅವರು ತಮ್ಮ ಮತ್ತು ಅಂಬೇಡ್ಕರರ ಕಾನೂನು ವ್ಯಾಸಂಗ ಏಕಕಾಲದಲ್ಲಿ ಲಂಡನ್ನಿನಲ್ಲಿ ನಡೆಯಿ ತೆಂಬುದನ್ನು ಹೆಮ್ಮೆಯಿಂದ ಸ್ಮರಿಸಿಕೊಂಡರು. "ರಾಜ್ಯಾಂಗದತ್ತ ವಾದ ಹಕ್ಕು ಗಳ ಪ್ರಯೋಜನವನ್ನು ಪಡೆಯುತ್ತಿರುವ ಪ್ರತಿಯೊಬ್ಬ ಭಾರತೀಯನೂ ಅಂಬೇಡ್ಕರರನ್ನು ಕೃತಜ್ಞತೆಯಿಂದ ನೆನೆಯಬೇಕು. ಸಂವಿಧಾನ ಕಾನೂನಿನ ಪ್ರಮಾಣ ಪುರುಷರೆಂದು. ಮಹಾರಾಜನೀತಿಜ್ಞರೆಂದು ಜಗತ್ತಿನಲ್ಲೆಲ್ಲ ಅವರ ಹೆಸರು ಪ್ರಸಿದ್ಧಿಯಾಗಿದೆ" ಎಂದವರು ನುಡಿದರು.

ಸಂವಿಧಾನ ರಚನೆಯ ನಂತರ ಅಂಬೇಡ್ಕರರ ಗಮನವನ್ನು ಸೆಳೆದ ಮತ್ತೊಂದು ಸಮಸ್ಯೆಯೆಂದರೆ ಹಿಂದೂ ವಿಧಿ ನಿಯಮಗಳ ಕೋಡೀಕರಣ. ಹಿಂದೂ ಸಮಾಜದ ಐಕ್ಯ ಭದ್ರತೆಗಳ ದೃಷ್ಟಿಯಿಂದ ಇದು ಅತ್ಯಗತ್ಯವಾಗಿತ್ತು. ಎಲ್ಲ ಹಿಂದುಗಳಿಗೆ ಏಕರೀತಿಯಾಗಿ ಅನ್ವಯವಾಗುವಂಥ ಕಾನೂನು ಎಂದೂ ಇದ್ದದ್ದಿಲ್ಲ. ಒಂದೊಂದು ಜಾತಿಯಲ್ಲಿಯೂ ಪರಸ್ಪರ ಭಿನ್ನವಾದ ವಿವಾಹ ಪದ್ಧತಿ ; ಒಂದೊಂದು ಪ್ರದೇಶದಲ್ಲಿ ಭಿನ್ನಭಿನ್ನ ರೀತಿಯ ದತ್ತುಸ್ವೀಕಾರ ಸಂಪ್ರದಾಯ. ಸ್ಮೃತಿಕಾರರಲ್ಲಿದ್ದ ಭಿನ್ನಾಭಿಪ್ರಾಯಗಳನ್ನು ನೋಡಿದರೆ. ವಿಧಿ ನಿಷೇಧಗಳು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುತ್ತಿದ್ದುದಲ್ಲದೆ. ಕಾಲ ಕಾಲಕ್ಕೆ ಮಾರ್ಪಾಡಾಗುತ್ತಿದ್ದುವೆನ್ನುವುದು ಸುಸ್ಪಷ್ಟ. ಜಾತಿಲಿಂಗಾಧರಿತ ಭೇದ ಕೂಡದೆಂಬ ಸಂವಿಧಾನದ ವಿಧಿಗನುಗುಣವಾಗಿ ಕೋಡೀಕರಣ ಅನಿವಾರ್ಯ ವಾಗಿತ್ತು. ಅಂಬೇಡ್ಕರರು ಸದಸ್ಯರಾಗಿದ್ದ ಕೋಡೀಕರಣ ಸಮಿತಿ ಮಸೂದೆ ಯಲ್ಲಿ ನಾಲ್ಕು ಹೊಸ ಸಂಗತಿಗಳನ್ನು ಸೇರಿಸಿತು : ಜನ್ಮಲಬ್ಧಾಧಿಕಾರ

ನಿರ್ಮೂಲನ. ಸ್ತ್ರೀಯರಿಗೆ ಆಸ್ತಿಯ ಅಧಿಕಾರ. ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೆ ಪಾಲುಗಾರಿಕೆ. ಮತ್ತು ವಿವಾಹ ವಿಚ್ಛೇದನ ಸೌಲಭ್ಯ. ಸಂಪ್ರದಾಯಸ್ಥರಿಗೆ ಇವು ಹಿಡಿಸಲಿಲ್ಲ. ಸ್ಮೃತಿಗಳ ಆಧಾರಗಳನ್ನೆತ್ತಿ ತೋರಿಸಿದರೂ ಅವರಿಗೆ ಒಡಂಬಡಿಕೆಯಾಗಲಿಲ್ಲ. ಕೋಡೀಕರಣದ ಪರವಾಗಿ ಕೆಲವರೂ. ವಿರುದ್ಧವಾಗಿ ಹಲವರೂ ಸೆಟೆದು ನಿಂತರು ; ಕೆಲವು ತಂತ್ರಿಗಳಂತು ಅಡ್ಡಗೋಡೆಯ ಮೇಲೆ ಕುಳಿತರು. ಸಾರ್ವತ್ರಿಕ ಚುನಾವಣೆಗಳ ನಂತರ ಸಂಸತ್ತಿನ ಮುಂದೆ ಮಸೂದೆಯನ್ನು ಮಂಡಿಸಬಹುದೆಂದು ಕೊನೆಯ ಗುಂಪು ಪ್ರತಿಪಾದಿಸಿತು.

ತಮ್ಮ ಜೀವಿತ ಕಾಲದಲ್ಲಿಯೇ ಅಸ್ಪೃಶ್ಯತೆಯನ್ನು ಹೋಗಲಾಡಿಸಿ. ಹಿಂದೂ ಧರ್ಮವನ್ನು ವಿಶ್ವಧರ್ಮವನ್ನಾಗಿ ಪರಿವರ್ತಿಸಬೇಕೆಂಬ ಅವರ ಆಸೆ ನೆರವೇರುವ ಚಿಹ್ನೆ ದಿಗಂತದಲ್ಲಿ ಗೋಚರಿಸಲಿಲ್ಲ ; ಸವರ್ಣ ಹಿಂದುಗಳಲ್ಲಿ ಹೃದಯ ಪರಿವರ್ತನೆಯ ಲಕ್ಷಣ ಕಾಣಲಿಲ್ಲ. ಅವರ ಈ ನಿರಾಶೆ ಬುದ್ಧ ಜಯಂತಿಯ ದಿನ ಹೊಸದೆಹಲಿಯಲ್ಲಿ ಮಾಡಿದ ಅವರ ಭಾಷಣದಿಂದ ವೇದ್ಯವಾಗುತ್ತದೆ. "ಜಗತ್ತಿನ ಜನತೆಯ ಮೇಲೆ ಅದಮ್ಯ ಪ್ರಭಾವ ಬೀರಿರುವ ಮತಸ್ಥಾಪಕರು ನಾಲ್ವರು: ಬುದ್ಧ. ಯೇಸು. ಮಹಮದ್ ಮತ್ತು ಕೃಷ್ಣ. ತಾನು ಸಾಮಾನ್ಯ ಮಾನವನೆಂದು ಬುದ್ಧ ಹೇಳಿಕೊಂಡರೆ ಉಳಿದವರು ತಾವೇ ದೇವರೆಂದೋ. ದೇವಸಂತಾನವೆಂದೋ. ದೇವದೂತರೆಂದೋ ಘೋಷಿಸಿಕೊಂಡರು. ತಮ್ಮನ್ನು ನಂಬದಿದ್ದ ಜನರಿಗೆ ಮುಕ್ತಿಸಿಗದೆಂದು ಸಹ ಅವರು ಜಗತ್ತಿಗೆ ಸಾರಿದರು. ತರ್ಕ ಸಮ್ಮತವಲ್ಲದ. ಅನುಭವ ಸಾಧ್ಯವಲ್ಲದ ಹಾಗೂ ಪ್ರಯೋಗಸಿದ್ಧವಲ್ಲದ ವಿಚಾರಗಳನ್ನು ನಂಬಬಾರದೆಂದು ಬುದ್ಧ ಹೇಳಿದರೆ, ತಮ್ಮ ಬೋಧನೆಯನ್ನು ಸಂದೇಹಿಸದೆ, ಪ್ರಶ್ನಿಸದೆ ಸಂಪೂರ್ಣವಾಗಿ ಒಪ್ಪಿಕೊಳ್ಳಬೇಕೆಂದು ಉಳಿದವರು ಆಜ್ಞಾಪಿಸಿದರು. ಹಿಂದೂಧರ್ಮ ಕರ್ಮ ಪ್ರಧಾನವಾದುದೇ ಹೊರತು ಬೌದ್ಧ ಧರ್ಮದಂತೆ ನೀತಿ ಪ್ರಧಾನವಾದುದಲ್ಲ. ಬೌದ್ಧ ಧರ್ಮದಲ್ಲಿ ನೀತಿಯೇ ಧರ್ಮ. ಅದೇ ದೇವರು. ಸರ್ವಸಮಾನತೆ ಬೌದ್ಧ ಧರ್ಮದ ಅಡಿಗಲ್ಲಾದರೆ. ಅಸಮಾನತೆ ಹಿಂದೂ ಧರ್ಮದ ಮೂಲ ಮಂತ್ರವಾಗಿದೆ. ಸಮಾಜದ ಭದ್ರತೆಗೆ ಕಾನೂನಿನ ಅಥವಾ ನೀತಿ ಸಂಪ್ರದಾಯದ ಅನುಮೋದನೆಯಿರಬೇಕು. ಮತೀಯ ಸಿದ್ಧಾಂತಗಳು ವೈಜ್ಞಾನಿಕ ಪರೀಕ್ಷೆಯಲ್ಲಿ ತೇರ್ಗಡೆಹೊಂದುವಂಥವಿರಬೇಕು. ದಾರಿದ್ರ್ಯಕ್ಕೆ ಪ್ರಾಶಸ್ತ್ಯ ನೀಡುವ ಧರ್ಮ ಪುರಸ್ಕಾರ ಯೋಗ್ಯವಾದದ್ದಲ್ಲ. ಬೌದ್ಧ ಧರ್ಮ ಹೊರತಾಗಿ

ಉಳಿದವು ಈ ನಿಯಮಗಳನ್ನು ಪಾಲಿಸುತ್ತಿಲ್ಲ." ಅವರು ಬೌದ್ಧಧರ್ಮ ವನ್ನಪ್ಪಿಕೊಳ್ಳದಿದ್ದರೂ ಅವರ ಮನಸ್ಸು ಆ ಕಡೆಗೆ ವಾಲುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

ಒಂದಲ್ಲ ಒಂದು ಕಾರಣಕ್ಕಾಗಿ ಹಿಂದೂಕೋಡ್ ಮಸೂದೆಯ ಪರಿಶೀಲನೆ ಮುಂದೆ ಮುಂದೆ ಹೋಗುತ್ತಿತ್ತು. ಅದು ಮುಂದೆ ಹೋದಂತೆಲ್ಲ ಅಂಬೇಡ್ಕರರ ನಿರಾಶೆ ಉಲ್ಬಣಗೊಳ್ಳುತ್ತಿತ್ತು. ನಾಡಿನ ಮೂಲೆಮೂಲೆಗಳಲ್ಲಿದ್ದ ಸಂಪ್ರದಾಯ ವಾದಿಗಳು ಅಪಪ್ರಚಾರದ ಮೂಲಕ ಗುಲ್ಲೆಬ್ಬಿಸಿದರು. ಮಸೂದೆಯ ಪರಿಶೀಲನೆ ಅಕಾಲಿಕವೆಂದೂ, ಪರೋಕ್ಷ ಚುನಾವಣೆಗಳ ಮೂಲಕ ಅಸ್ತಿತ್ವಕ್ಕೆ ಬಂದಿರುವ ಸಂಸತ್ತಿಗೆ ಸರ್ವಜನ ಸಮ್ಮತಿಯ ಅಧಿಕಾರವಿಲ್ಲವೆಂದೂ, ಅದು ತಾತ್ಕಾಲಿಕ ಸರ್ಕಾರದ ವ್ಯಾಪ್ತಿಗೆ ಬರಲಾರದೆಂದೂ ವಿರೋಧ ಪಕ್ಷಗಳು ಅಬ್ಬರಿಸಿದವು. ಆ ವಿಷಯದಲ್ಲಿ ಕಾಂಗ್ರೆಸ್ಸು ಸಹ ಇಬ್ಭಾಗವಾಯಿತು. ಆ ಮಸೂದೆಯನ್ನು ಸಂಸತ್ತು ಅಂಗೀಕರಿಸದಿದ್ದಲ್ಲಿ ತಮ್ಮ ಸರ್ಕಾರ ರಾಜೀನಾಮೆ ನೀಡುವುದಾಗಿ ನೆಹ್ರೂ ಘೋಷಿಸಿದರೆ, ಅದು ಸಂಸತ್ತಿನ ಮುಂದೆಯೇ ಬರುವಂತಿಲ್ಲವೆಂದು ಪಟೇಲರು ಗುಡುಗಿದರು. ಆದರೂ 5–2–1951ರಂದು ಅಂಬೇಡ್ಕರರು ಅದನ್ನು ಸಂಸತ್ತಿನಲ್ಲಿ ಮಂಡಿಸಿದರು. ಅದು ಪಂಜಾಬಿಗೆ ಅನ್ವಯವಾಗಬಾರ ದೆಂದು ಠಾಕೂರದಾಸ್ ಭಾರ್ಗವ ವಾದಿಸಿದರೆ, ಹಿಂದೂಧರ್ಮದಲ್ಲಿ ಸಿಕ್ಕರನ್ನು ಸಮ್ಮಿಲನಗೊಳಿಸುವ ಉಪಾಯವೆಂದು ಸರ್ದಾರ್ ಹುಕುಂಸಿಂಗ್ ಉದ್ಗಾರ ತೆಗೆದರು. "ಹಿಂದೂ ಧರ್ಮಶಾಸ್ತ್ರದ ವಿಧಿನಿಷೇಧಗಳನ್ನು ಹಿಂದಿನಿಂದಲೂ ಬೌದ್ಧ, ಜೈನ, ಸಿಖ್ ಮತೀಯರಿಗೂ ಅನ್ವಯಿಸಲಾಗುತ್ತಿದೆ. ಸಿಕ್ಕರಿಗು ಸಹ ಹಿಂದೂ ಶಾಸನವೇ ಅನ್ವಯವಾಗತಕ್ಕದೆಂದು 1830ರಲ್ಲಿಯೇ ಪ್ರೀವಿಕೌನ್ಸಿಲ್ ತೀರ್ಪು ನೀಡಿತು" ಎಂಬುದಾಗಿ ಎಲ್ಲ ಪ್ರತಿಕ್ರಿಯೆಗಳಿಗೆ ಅಂಬೇಡ್ಕರರು ಉತ್ತರ ಕೊಟ್ಟರು. ಮೂರು ದಿನಗಳ ವಾದವಿವಾದಗಳನಂತರ ಅದನ್ನು ಮುಂದಿನ ಅಧಿವೇಶನಕ್ಕೆ ತಳ್ಳಲಾಯಿತು.

ಒಮ್ಮೆ ಬುದ್ಧಜಯಂತಿಯ ದಿನದಂದು ಭಾಷಣ ಮಾಡುತ್ತ, ಸರ್ಕಾರಿ ಕಚೇರಿಗಳಲ್ಲಿ ತಾಂಡವವಾಡುತ್ತಿರುವ, ಹಿಂಸೆ, ಭ್ರಷ್ಟಾಚಾರ ಮತ್ತು ಅನೈತಿ ಕತೆಗಳು ಹಿಂದೂಧರ್ಮದ ಅವನತಿಯನ್ನು ಸೂಚಿಸುತ್ತವೆಂದೂ, ಬೌದ್ಧ ಧರ್ಮದ ಪುನರುಜ್ಜೀವನವೇ ಸಕಲ ಅತ್ಯಾಚಾರಗಳಿಗೆ ಪರಿಹಾರವೆಂದೂ, ಭಾರತೀಯರು ಆ ಧರ್ಮವನ್ನು ಸ್ವೀಕರಿಸುವುದು ಕ್ಷೇಮವೆಂದೂ ಅವರು

ವೊಳಗಿದರು. ಅವರ ಭಾಷಣಗಳು ಪತ್ರಿಕೆಗಳ ಟೀಕೆಗೊಳಗಾದುವು :
ಕಾಂಗ್ರೆಸ್ ವೃತ್ತದಲ್ಲಿ ತಳಮಳವುಂಟುಮಾಡಿದುವು. ನೆಹ್ರೂ ಅವರು ತಮ್ಮ
ಅಸಮಾಧಾನ ವ್ಯಕ್ತಪಡಿಸಿದರು. ಅಂಬೇಡ್ಕರರು ಸಂಪುಟದಲ್ಲಿ ಮುಂದು
ವರಿಯಬಾರದೆಂದು ಕಾಂಗ್ರೆಸ್ ನಾಯಕರು ಪ್ರಧಾನಿಗಳ ಮೇಲೆ ಒತ್ತಾಯ
ತಂದರು. ಅವರಂಥ ನಾಯಕರಿಗೆ ವಾಕ್ಸ್ವಾತಂತ್ರ್ಯವಿಲ್ಲವೆ ಎಂದು ಕಾಂಗ್ರೆಸ್ಸೇತರ
ನಾಯಕರು ಪ್ರಶ್ನಿಸಿದರು. ಅಪಾದನೆಯನ್ನು ಹಿಂತೆಗೆದುಕೊಳ್ಳದಿದ್ದರೆ ರಾಜೀ
ನಾಮೆ ಕೊಡಬೇಕಾದೀತೆಂದು ಪ್ರಧಾನಿ ಅಂಬೇಡ್ಕರರನ್ನು ಎಚ್ಚರಿಸಿದ್ದೂ
ಆಯಿತು. ಸಚಿವಾಸನಕ್ಕೆ ಅಂಟಿಕೊಂಡಿರಬೇಕೆಂಬ ಹಂಬಲ ಅಂಬೇಡ್ಕರರಿಗಿರ
ಲಿಲ್ಲ. ಇದ್ದಿದ್ದರೆ ನಯವಿನಯಗಳನ್ನು ನಟಿಸುತ್ತಿದ್ದರು. ಕಾಪಟ್ಯವಂತು ಅವರ
ಜಾಯಮಾನಕ್ಕೆ ಒಗ್ಗುತ್ತಿರಲಿಲ್ಲ. ಹಿಂದೂ ಕೋಡ್ ಮಸೂದೆ ಶಾಸನವಾದ
ದಿನವೇ ತಾವು ಅಧಿಕಾರದಲ್ಲಿರುವುದಿಲ್ಲವೆಂದು ಅವರು ತಮ್ಮ ಮಿತ್ರರಿಗೆ
ಸ್ಪಷ್ಟಪಡಿಸಿದರು. ತಮ್ಮ ಆರೋಗ್ಯ ಅನಿಶ್ಚಿತ ಸ್ಥಿತಿಯಲ್ಲಿದ್ದುದರಿಂದ ಆ
ಮಸೂದೆಗೆ ಆದ್ಯತೆ ನೀಡಬೇಕೆಂದು ನೆಹ್ರೂ ಅವರಿಗೆ ಪತ್ರ ಬರೆದರು.
ಸಂಸತ್ ಸದನದ ಹೊರಗೊಳಗೆ ಬಹು ವಿರೋಧವಿದ್ದುದರಿಂದ. ಅದನ್ನು
ಹೆಚ್ಚಾಗಿ ತಲೆಗಂಟಿಸಿಕೊಳ್ಳಬಾರದೆಂದು ನೆಹ್ರೂ ಅವರಿಂದ ಕೂಡಲೇ
ಪ್ರತ್ಯುತ್ತರ ಬಂತು.

ಹಿಂದೂಕೋಡ್ ಬಿಲ್ ಬಗ್ಗೆ ನಾಡಿನ ನಾಯಕರ ಮತ್ತು ಪಂಡಿತರ
ಮನವೊಲಿಸಿಕೊಳ್ಳಬೇಕೆಂದು ಅಂಬೇಡ್ಕರ್ ದೇಶದ ಉದ್ದಗಲಗಳಲ್ಲಿ ತಿರುಗಾಡಿ
ಅವರೊಡನೆ ಚರ್ಚೆ ನಡೆಸಿದರು. ಕಾಂಗ್ರೆಸ್ಸಿಗರು. ಹಿಂದೂ ಮಹಾಸಭೆಯ
ಸದಸ್ಯರು ಮಾತ್ರವಲ್ಲ. ಆರ್ಯಸಮಾಜದ ನಾಯಕರೂ ಅದನ್ನು ವಿರೋಧಿಸಿದ್ದು
ಅವರ ಮನಸ್ಸಿಗೆ ನೋವುಂಟುಮಾಡಿತು. ಆರ್ಯಸಮಾಜದ ಹಿರಿಯ ವಿದ್ವಾಂಸ
ರಾಗಿದ್ದ ಪಂಡಿತ ಗಂಗಾಪ್ರಸಾದ್ ಮತ್ತು ಪಂಡಿತ ಧರ್ಮವಿದ್ಯಾಲಂಕಾರ
ವಾಚಸ್ಪತಿಗಳನ್ನು ಕರೆಸಿಕೊಂಡು, ಅವರೊಡನೆ ದೀರ್ಘಕಾಲ ವಾದಿಸಿದರು.
ಹಿಂದೂಗಳ ಅವಿಭಕ್ತ ಕುಟುಂಬ ವ್ಯವಸ್ಥೆಗೆ ಹೊಸ ಮಸೂದೆಯಿಂದ ಭಂಗ
ಬರುತ್ತದೆಂದು ಗಂಗಾಪ್ರಸಾದ್ ನುಡಿದರು. 'ತಂದೆ ಸತ್ತ ಮೇಲೆ ಮಕ್ಕಳು
ಪ್ರತ್ಯೇಕವಾಗಿ ಗೃಹಾಗ್ನಿ ಸಂಸ್ಕಾರ ಮಾಡಬೇಕೆಂದು ಮನು ಹೇಳಿಲ್ಲವೆ?
ಅದರ ಅಂತರಾರ್ಥವೇನು?' ಎಂದ ಬಾಬಾ ಸಾಹೇಬರು ಮನುಧರ್ಮ
ಶಾಸ್ತ್ರದಿಂದ ನಿದರ್ಶನಗಳನ್ನು ಉದ್ಧರಿಸಿದರು. 'ವಿವಾಹ ವಿಚ್ಛೇದನದಿಂದ

ಗೃಹಸ್ಥಾಶ್ರಮದ ಪ್ರತಿಷ್ಠೆ ಕ್ಷಯಿಸುತ್ತದೆ. ಕ್ಷುದ್ರಕಾರಣಗಳಿಗಾಗಿ ದಂಪತಿಗಳು ನ್ಯಾಯಾಲಯಕ್ಕೆ ಹೋಗಬೇಕಾಗುತ್ತದೆ. ಕೌಟುಂಬಿಕ ಸುಖಕ್ಕೆ ಭಂಗ ಬರುತ್ತದೆ ಎಂಬುದಾಗಿ ಧರ್ಮದೇವರು ಸೊಲ್ಲೆತ್ತಿದರು. ಆಗ ಅಂಬೇಡ್ಕರರು ರಾಮಾಯಣ ಮಹಾಭಾರತ ಕಾಲದ ಬಹುಪತ್ನಿತ್ವ ಪದ್ಧತಿಯನ್ನೂ, ನಿಯೋಗ ವ್ಯವಸ್ಥೆಯನ್ನೂ, ಶ್ರೀರಾಮ ಶೂರ್ಪಣಖಿಗೆ ಲಕ್ಷ್ಮಣ ಮದುವೆಯಾಗಲಿಲ್ಲ ವೆಂದು ನುಡಿದ ಸುಳ್ಳನ್ನೂ, ಕೃಷ್ಣನ ಸ್ತ್ರೀಲೋಲುಪತೆಯನ್ನೂ ವಿವರಿಸಿ, ಕೌಟುಂಬಿಕ ಸುಖದ ಭ್ರಮೆಯನ್ನು ಹೋಗಲಾಡಿಸಿದರು. ಆ ಪಂಡಿತರು ನಿರುತ್ತರರಾದರೂ, ಅಂಬೇಡ್ಕರರ ಮಸೂದೆಯನ್ನೊಪ್ಪಿಕೊಳ್ಳಲು ಸಿದ್ಧರಿರಲಿಲ್ಲ. ಯಾರೇ ಆಗಲಿ ವಾದದಲ್ಲಿ ತಮ್ಮನ್ನು ಮೆಚ್ಚಿಸುವಂತಿದ್ದರೆ ಅವರು ಮಸೂದೆ ಕೈಬಿಡಲು ತಯಾರಾಗಿದ್ದರು. ಹಲವಾರು ಹೂಟಗಳ ಮೂಲಕ ಪ್ರತಿಷ್ಠಿತ ಹಿಂದುಗಳು ಅದನ್ನು ಭಗ್ನಗೊಳಿಸಲು ಮುಂದಾದಾಗ ಅವರಿಗೆ ಅತೀವ ಸಂಕಟವಾಯಿತು.*

ಸೆಪ್ಟೆಂಬರ್ ತಿಂಗಳ ಸಂಸತ್ ಅಧಿವೇಶನದಲ್ಲಿ ಹಿಂದೂಕೋಡ್ ಮಸೂದೆಯನ್ನು ಚರ್ಚಿಸಬಹುದೆಂದು ಕಾಂಗ್ರೆಸ್ ಪಕ್ಷದ ಸಂಸದೀಯ ಸಮಿತಿಯಲ್ಲಿ ನೆಹ್ರೂ ಅವರೇ ಒತ್ತಾಯಪಡಿಸಿದರು. ಚುನಾವಣೆಗಳ ನಂತರ ಆ ಮಸೂದೆಯನ್ನು ಪರಿಶೀಲಿಸಬಹುದೆಂದೂ, ಅದಿಲ್ಲದೆ ಆ ಅಧಿವೇಶನದಲ್ಲಿಯೇ ಚರ್ಚಿಸುವುದಾದರೆ ಸದಸ್ಯರಿಗೆ ಮತಸ್ವಾತಂತ್ರ್ಯ ನೀಡಬೇಕೆಂದೂ ಅನೇಕ ಸದಸ್ಯರು ಆಗ್ರಹದಿಂದ ವಾದಿಸಿದರು. ಉದ್ರಿಕ್ತ ವಾತಾವರಣದಿಂದಾಗಿ ನೆಹ್ರೂ ಅವರಿಗೂ ಸಭೆಯ ಮೇಲಣ ಹಿಡಿತ ತಪ್ಪಿಹೋಗಿ, ಮಸೂದೆಯನ್ನು ಕೈಬಿಡುವಂತೆ ಅಂಬೇಡ್ಕರರಿಗೆ ಸೂಚಿಸಿದರು. ಅಂಬೇಡ್ಕರರ ದೃಷ್ಟಿಯಿಂದ ಅದೊಂದು ದುರಂತ ಘಟನೆಯಾಯಿತು. ಅಳುವವರಿಲ್ಲದೆ ಹಾಡುವವರಿಲ್ಲದೆ ಅದನ್ನು ಕೊಂದು ಸಮಾಧಿ ಮಾಡಲಾಯಿತೆಂದು ಅವರು ವ್ಯಾಕುಲಗೊಂಡರು.

ಛಲವಂತರೂ ಸ್ವಾಭಿಮಾನಿಗಳೂ ಆದ ಅಂಬೇಡ್ಕರರು ತಮ್ಮ ಪೂರ್ವ ನಿರ್ಧಾರದಿಂದ ವಿಚಲಿತರಾಗಲಿಲ್ಲ. ಸೆಪ್ಟೆಂಬರ್ 27ರಂದು ಪ್ರಧಾನಿಯವರಿಗೆ ರಾಜೀನಾಮೆ ಪತ್ರ ಕಳಿಸಿದರು. "ಈ ನನ್ನ ತೀರ್ಮಾನ ತುಂಬ ಹಿಂದಿನದು. ಹಿಂದೂ ಕೋಡ್ ಮಸೂದೆಯನ್ನು ಅನುಷ್ಠಾನಕ್ಕೆ ತರಬೇಕೆಂಬ ಹಂಬಲದಿಂದ

* ಬಾಬಾಸಾಹೇಬ್ ಬಿ. ಆರ್. ಅಂಬೇಡ್ಕರರೊಡನೆ 25 ವರ್ಷ : ವಿದ್ಯಾ ವಾಚಸ್ಪತಿ ಸೋಹನಲಾಲ ಶಾಸ್ತ್ರಿ (-ಹಿಂದಿಯಲ್ಲಿ)

ನಾನು ಈ ತನಕ ಕಾದೆ. ಮಸೂದೆಯನ್ನು ವಿಭಜಿಸಿ ವಿವಾಹ ಮತ್ತು ವಿಚ್ಛೇದನ ಭಾಗಗಳಿಗೆ ಮಿತಿಗೊಳಿಸಲೂ ನಾನು ಸಿದ್ಧನಾಗಿದ್ದೆ. ಆ ಆಸೆಯೂ ಮುರುಟಿ ಹೋದನಂತರ ನಾನು ಸಚಿವ ಸಂಪುಟದಲ್ಲಿ ಮುಂದುವರಿಯಲಾರೆ. ನನ್ನ ಹೆಸರಿನಲ್ಲಿರುವ ಮಸೂದೆಗಳನ್ನು ನಾನೇ ಮಂಡಿಸುವುದು ಅಗತ್ಯವಾದರೆ ಮಾತ್ರ ಪ್ರಸಕ್ತ ಅಧಿವೇಶನದ ಅಂತ್ಯದವರೆಗೆ ತಡೆಯಬಲ್ಲೆ." ನೆಹ್ರೂ ಅವರ ರಾಜೀನಾಮೆಯನ್ನೊಪ್ಪಿಕೊಂಡು ಮಸೂದೆಯ ಪರಿಷ್ಕರಣದಲ್ಲಿ ಅವರು ಪಟ್ಟ ಶ್ರಮವನ್ನು ಪ್ರಶಂಸಿಸಿ, ಅಧಿವೇಶನದ ಕೊನೆಯವರೆಗೆ ಮುಂದುವರಿಯುವಂತೆ ವಿನಂತಿಸಿಕೊಂಡರು. ದಸರಾ ರಜ ಕಳೆಯುವ ತನಕ ಅಂಬೇಡ್ಕರರು ಸಚಿವರಾಗಿ ಮುಂದುವರಿದರು.

1952ರ ಜನವರಿ ತಿಂಗಳಲ್ಲಿ ನಡೆಯಲಿದ್ದ ಸಾರ್ವತ್ರಿಕ ಚುನಾವಣೆಗಳಿಗೆ ತಮ್ಮ ಪಕ್ಷವನ್ನು ಸಜ್ಜುಗೊಳಿಸುವ ಕಾರ್ಯದಲ್ಲಿ ಅಂಬೇಡ್ಕರರು ನಿರತರಾದರು. ಅವರೊಡನೆ ಚುನಾವಣಾಮೈತ್ರಿಯನ್ನೇರ್ಪಡಿಸಿಕೊಳ್ಳಲು ಕೆಲವು ಪಕ್ಷಗಳು ಹಾತೊರೆದುವು. ಆದರೆ ಅವರು ಯಾರ ಹಂಗಿಗೂ ಸಿದ್ಧವಾಗಿರಲಿಲ್ಲ. ಅವರು ತಮ್ಮ ಪ್ರಚಾರ ಭಾಷಣದಲ್ಲಿ ನೆಹ್ರೂ ಮತ್ತು ಕಾಂಗ್ರೆಸ್ಸಿನ ನೀತಿಯನ್ನು ಉಗ್ರವಾಗಿ ಖಂಡಿಸಿದರು. ನೆಹ್ರೂ ಮುಸ್ಲಿಮ್ ಮೋಹಿಯೆಂದೂ, ನಿಮ್ನ ವರ್ಗೀಯರ ಬಗ್ಗೆ ಅಸಡ್ಡೆಯುಳ್ಳವರೆಂದೂ ಹೋದೆಡೆಯಲ್ಲೆಲ್ಲ ಸ್ಪಷ್ಟಪಡಿಸಿದರು. ಇಂಡಿಯಾಕ್ಕೆ ಸ್ವಾತಂತ್ರ್ಯ ಸಂಪಾದಿಸಿಕೊಟ್ಟವರು ಸುಭಾಷ್ ಚಂದ್ರ ಬೊಸರೇ ಹೊರತು, ಕಾಂಗ್ರೆಸ್ಸಲ್ಲವೆಂದು ಘೋಷಿಸಿದರು. ಭ್ರಷ್ಟಾಚಾರ ದೇಶದ ಗಮನವನ್ನು ಸೆಳೆಯುವಷ್ಟು ತೀವ್ರವಾಗಿಲ್ಲವೆಂಬ ನೆಹ್ರೂ ಅವರ ಬೋಧನೆಯನ್ನು ವಿಡಂಬಿಸಿದರು. ಆಡಳಿತ ಪಕ್ಷ ತನ್ನ ಕಾರ್ಯವನ್ನು ಪ್ರಾಮಾಣಿಕವಾಗಿ ನ್ಯಾಯಯುತವಾಗಿ ದಕ್ಷತೆಯಿಂದ ನಿರ್ವಹಿಸಬೇಕಾಗಿದ್ದರೆ, ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಪ್ರಬಲವಾದ ವಿರೋಧಪಕ್ಷ ಅತ್ಯವಶ್ಯವೆಂಬುದನ್ನು ಜನತೆಗೆ ಮನವರಿಕೆ ಮಾಡಿಕೊಟ್ಟರು.

ಅನಾರೋಗ್ಯದ ಕಾರಣದಿಂದಾಗಿ ಅಂಬೇಡ್ಕರರು ಚುನಾವಣಾ ಪ್ರಚಾರಕ್ಕಾಗಿ ಮುಂಬಯಿಯ ಹೊರಗೆ ಹೋಗಲಿಲ್ಲ. ಹತ್ತು ವರ್ಷಗಳ ಕಾಲ ದೆಹಲಿಯಲ್ಲಿಯೇ ಸರ್ಕಾರಿ ಕೆಲಸದಲ್ಲಿ ಮಗ್ನವಾಗಿದ್ದುದರಿಂದ ಸಾಮಾನ್ಯ ಜನರ ಸಂಪರ್ಕ ತಪ್ಪಿಹೋಗಿತ್ತು. ಜತೆಗೆ ಸರ್ವಸೌಲಭ್ಯಗಳನ್ನು ಪಡೆದಿದ್ದ ಆಡಳಿತ ಪಕ್ಷದೊಡನೆ ಸ್ಪರ್ಧಿಸಿ ಜಯ ಸಂಪಾದಿಸುವುದು ಸುಲಭವಾಗಿರಲಿಲ್ಲ.

ಹೀಗಾಗಿ ಅವರ ಪಕ್ಷಮಾತ್ರವಲ್ಲ, ಅವರು ಸಹ ಸೋಲನ್ನನುಭವಿಸಬೇಕಾಯಿತು. ಅವರ ಪಕ್ಷದಲ್ಲಿ ಗೆದ್ದವರು ಒಬ್ಬಿಬ್ಬರು ಮಾತ್ರ. ಪಕ್ಷದ ಸೋಲಿಗೆ ಅವರ ನಿರ್ವಂಚನೆಯು ಹಾಗೂ ನಿರ್ದಾಕ್ಷಿಣ್ಯದ ಪ್ರಚಾರ ಭಾಷಣಗಳೂ ಕಾರಣವಾಗಿದ್ದುವು. ಕಾಶ್ಮೀರ ವಿಭಜನೆಯು ಮತ್ತು ಪ್ರತ್ಯೇಕ ಚುನಾವಣಾ ಕ್ಷೇತ್ರಗಳ ಸಲಹೆಗಳು ಜನಮನಸ್ಸನ್ನು ಪ್ರಕ್ಷುಬ್ಧಗೊಳಿಸಿದ್ದುವು.

ಅಂಬೇಡ್ಕರರ ಸೋಲಿನಿಂದ ಅಧಿಕ ನಷ್ಟವಾದದ್ದು ರಾಷ್ಟ್ರಕ್ಕೆ ಹೊರತು ಅವರಿಗಲ್ಲ. ರಾಷ್ಟ್ರನಿರ್ಮಾಣಕಾರ್ಯದಲ್ಲಿ ಬೇಕಾದದ್ದು ಪ್ರತಿಭೆಯೇ ಹೊರತು ಭೌತಿಕ ಸಂಪತ್ತಲ್ಲ. ಅವರಂಥವರು ಸಂಸತ್ತಿನಲ್ಲಿದ್ದರೆ ಆಡಳಿತಪಕ್ಷ ಸದಾ ಜಾಗರೂಕವಾಗಿರುತ್ತದೆ. ಪ್ರತಿಭೆಯೇ ಚೈತನ್ಯವಾಗುಳ್ಳ ಅಂಬೇಡ್ಕರರು ಕೈಕಟ್ಟಿ ಕುಳಿತುಕೊಳ್ಳುವ ಥವರೂ ಅಲ್ಲ. ರಾಜ್ಯಸಭೆಯ ಚುನಾವಣೆಗಳಿಗೆ ತಾವು ಸ್ಪರ್ಧಿಸಬಹುದಾದ ಸಾಧ್ಯತೆಯನ್ನು ವಿಚಾರಿಸುವಂತೆ ತಮ್ಮ ಬಲಗೈಯಂತಿದ್ದ ಕಮಲಾಕಾಂತ ಚಿತ್ರೆಯವರನ್ನು ಕೇಳಿಕೊಂಡರು. ಪತಿಯ ಮಾನಸಿಕ ಹಾಗೂ ದೈಹಿಕ ಸ್ಥಿತಿಯನ್ನು ಚೆನ್ನಾಗಿ ಬಲ್ಲ ಡಾ॥ ಶಾರದಾ ಅವರು ಚಿತ್ರೆಯವರಿಗೊಂದು ಪತ್ರಬರೆದು, ಅವರಿಗೆ ಪಕ್ಷದ ಪ್ರೋತ್ಸಾಹ ಎಂದಿಗಿಂತ ಅಂದು ಅತ್ಯಗತ್ಯವಾಗಿತ್ತೆಂಬುದನ್ನು ವಿಶದಪಡಿಸಿದರು. "ರಾಜಕೀಯ ಡಾಕ್ಟರ ಬದುಕಿನ ಒಂದು ಭಾಗವಾಗಿದೆ. ಅದೇ ಅವರಿಗೆ ಚೈತನ್ಯದಾಯಿ. ಸಂಸತ್ತಿನ ಕಾರ್ಯಕಲಾಪಗಳಿದ್ದಾಗ ರೋಗಗಳು ಸಹ ಅವರಿಂದ ದೂರ ಸರಿಯುತ್ತವೆ. ಪ್ರಧಾನಿಯಾಗುವ ಯೋಗ್ಯತೆಯುಳ್ಳಂಥವರನ್ನು ಮೂಲೆಗುಂಪು ಮಾಡುವುದು ಸರಿಯಲ್ಲ. ತಾವು ಸಂಸತ್ತಿಗೆ ಹಿಂದಿರುಗಿದಾಗ ಕಾರ್ಯಗತಗೊಳಿಸಬೇಕಾದ ಯೋಜನೆಗಳನ್ನು ಪಟ್ಟಿಮಾಡಿಕೊಂಡಿದ್ದರು. ಅವರಿಗೀಗ ನಿಮ್ಮ ಸಹಾಯ ಬೇಕಾಗಿದೆ. ನೀವವರ ಬಲಗೈಯೆಂಬುದನ್ನು ತೋರಿಸಿಕೊಳ್ಳಲು ಸದವಕಾಶ ದೊರೆತಿದೆ." ಅವರ ಪ್ರಯತ್ನ ಸಫಲಗೊಂಡು. ಅಂಬೇಡ್ಕರರು ಮೇಲ್ಮನೆಯ ಸದಸ್ಯರಾದರು.

ಅವರೆಲ್ಲಿದ್ದರೂ ಶಿಕ್ಷಣಸಂಸ್ಥೆಯ ಮೇಲೆ ಸದಾ ಒಂದು ಕಣ್ಣಿಟ್ಟಿರುತ್ತಿದ್ದರು. ಮುಂಬಯಿಯಲ್ಲಿದ್ದಾಗಲಂತು ಸಿದ್ಧಾರ್ಥ ಕಾಲೇಜೇ ಅವರ ವಾಸ್ತವ್ಯವಾಗಿರುತ್ತಿತ್ತು. ಆಗಾಗ್ಗೆ ಔರಂಗಾಬಾದಿಗೂ ಹೋಗಿಬರುತ್ತಿದ್ದರು. ರಾಜೇಂದ್ರಪ್ರಸಾದರಿಂದ ಪ್ರತಿಷ್ಠಾಪನೆಗೊಂಡಿದ್ದ ಕಾಲೇಜು ದಿನೇ ದಿನೇ ಅಭಿವೃದ್ಧಿಗೊಳ್ಳುತ್ತಿತ್ತು. ಅವರಲ್ಲಿದ್ದಾಗ ಅವರ ಭೇಟಿಯು ಸಲುವಾಗಿ ಅನೇಕ ಜನ ಬರುತ್ತಿದ್ದರು. ಕಾಲೇಜಿನ ಸುತ್ತಮುತ್ತಣ ವಿಶಾಲವಾದ ಮೈದಾನದಲ್ಲಿ ಗಿಡನೆಟ್ಟು ಬಂದವರಿಗೆ ಮಾತ್ರ ಅವರ ಭೇಟಿ ಲಭಿಸುತ್ತಿತ್ತು.

ಈ ಉಪಾಯದ ಫಲವಾಗಿ ಅಲ್ಲೊಂದು ವನವೇ ಸೃಷ್ಟಿಯಾಯಿತು. ಆದರೆ ಕೆಲವು ದಿನ ಆ ಕಡೆ ತಿರುಗಿ ನೋಡಲಿಲ್ಲವೆಂಪರೆ ಅವುಗಳ ಮುಸ್ಸಿದೆ ಕುಂಠಿತ ವಾಗುತ್ತಿತ್ತು: ಕಟ್ಟಡಕ್ಕೆಂದು ಸಂಗ್ರಹವಾಗುತ್ತಿದ್ದ ಹಣವಬಗ್ಗೆ ತುಂಬ ಎಚ್ಚರಿಕೆ ವಹಿಸುತ್ತಿದ್ದರು: ಕಾಸುಕಾಸಿಗೂ ಲೆಕ್ಕ ಕೇಳುತ್ತಿದ್ದರು ಸಕಾಲಕ್ಕೆ ಲೆಕ್ಕಕೊಡದಿದ್ದಲ್ಲಿ ಸಂಬಂಧಪಟ್ಟವರನ್ನವರು ತರಾಟೆಗೆ ತೆಗೆದುಕೊಳ್ಳುತ್ತಿದ್ದರು. ನಿರಕ್ಷರಿಗಳಲ್ಲಿದ್ದ ಪ್ರಾಮಾಣಿಕತೆ. ವಿದ್ಯಾವಂತರಲ್ಲಿಲ್ಲವೆಂದು ಹೇಳುತ್ತಿದ್ದರು.

ಕೊಲಂಬಿಯಾ ವಿಶ್ವವಿದ್ಯಾನಿಲಯ ಅವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಲಿದ್ದ ಸುದ್ದಿ ಅವರ ಗೆಳೆಯರ ಬಳಗದಲ್ಲಿ ಅತ್ಯುತ್ಸಾಹವನ್ನು ಚಿಗುರಿಸಿತ್ತು. ವಿದೇಶೀಯ ವಿಶ್ವವಿದ್ಯಾನಿಲಯ ಅವರ ಸಾಮರ್ಥ್ಯವನ್ನು ಗುರುತಿಸಿದ್ದು ಅಂಬೇಡ್ಕರರಿಗೆ ಸಂತಸದ ಸಂಗತಿಯಾಗಿತ್ತು. ಹಣದ ಅಭಾವದಿಂದಾಗಿ, ಪತ್ನಿಯನ್ನು ಬಿಟ್ಟು ಅವರೊಬ್ಬರೇ ಅಮೆರಿಕೆಗೆ ಹೋಗಬೇಕಾಯಿತು. ಸಂವಿಧಾನದ ಶಿಲ್ಪಿಯಾಗಿ, ಮಂತ್ರಿಮಂಡಲದ ಮತ್ತು ರಾಜ್ಯಸಭೆಯ ಸದಸ್ಯ ರಾಗಿ, ಇಂಡಿಯಾದ ಪ್ರಮುಖ ಪ್ರಜೆಯಾಗಿ, ಮಹಾಸಮಾಜ ಸುಧಾರಕರಾಗಿ ಹಾಗೂ ಮಾನವ ಹಕ್ಕುಗಳ ನಿರ್ಭೀತರಕ್ಷಕರಾಗಿ ಸೇವೆ ಸಲ್ಲಿಸಿರುವ ಅಂಬೇಡ್ಕರರಿಗೆ ಗೌರವದ ಕುರುಹಾಗಿ ವಿಶ್ವವಿದ್ಯಾನಿಲಯ ಜೂನ್ 5ರಂದು ಪದವೀದಾನ ಸಮಾರಂಭದಲ್ಲಿ ಪ್ರಶಸ್ತಿ ಪತ್ರಿಕೆ ನೀಡಿತು. 1953ರ ಜನವರಿ ತಿಂಗಳಲ್ಲಿ ಕೊಲಂಬಿಯಾ ವಿಶ್ವವಿದ್ಯಾನಿಲಯದಿಂದ ಪಾಠಕಲಿತ ಉಸ್ಮಾನಿಯಾ ವಿಶ್ವವಿದ್ಯಾನಿಲಯ ಅವರಿಗೆ ಡಾಕ್ಟೊರೇಟ್ ಪದವಿಕೊಟ್ಟು ಗೌರವಿಸಿತು.

ಅಸ್ಪೃಶ್ಯತೆ ಮಹಾಪರಾಧವೆಂದು ಸಂವಿಧಾನ ಘೋಷಿಸಿತ್ತಷ್ಟೆ. ಅದು ಬರಿಯ ಕಾಗದದ ಘೋಷಣೆಯಾಗುಳಿಯಿತೇಹೊರತು ಕಾರ್ಯರೂಪಕ್ಕೆ ತಿರುಗಲಿಲ್ಲ. ಹೋಟಲು ದೇವಾಲಯಗಳಲ್ಲಿ ಸಭೆ ಸಮಾರಂಭಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶಾವಕಾಶವಿರುತ್ತಿರಲಿಲ್ಲ; ಪ್ರವೇಶಾವಕಾಶವಿದ್ದರೆ ಅವರ ಬಗ್ಗೆ ತಿರಸ್ಕಾರ ವಿರುತ್ತಿತ್ತು. ಹೋಟಲಿನ ಮಾಲೀಕ ತಾವು ಬಳಸಿದ ಬಟ್ಟಲುಗಳನ್ನು ತಮ್ಮೆದುರಿಗೆ ಎಡಗಾಲಿನಲ್ಲೊದ್ದುವಾಗಿ ಸಂಸತ್ತಿನ ಹರಿಜನ ಸದಸ್ಯರು ವರ್ಣಿಸುತ್ತಿದ್ದರು. ಕೇಶಸಂಸ್ಕಾರಕ್ಕಾಗಿ ದೆಹಲಿಯ ಆಯುಷ್ಕರ್ಮ ಶಾಲೆಗೆ ಹೋದ ಹರಿಜನ ಸದಸ್ಯ ಕ್ಷೌರಿಕನ ಅಪಹಾಸ್ಯಕ್ಕೆ ಗುರಿಯಾದನು. ದೇವಾಲಯದೊಳಗೆ ಪ್ರವೇಶಿಸುವುದಾದರೆ ಸ್ವಾಗತಕ್ಕಾಗಿ ದೊಣ್ಣೆಗಳು ಕಾದಿರುತ್ತವೆಂದು ಧರ್ಮದರ್ಶಿಗಳು ಹೈದರಾಬಾದಿನ ಹರಿಜನ ಮಂತ್ರಿ

ಯೊಬ್ಬರಿಗೆ ಜೆವರಿಕೆ ಹಾಕಿದರು. ಇಂಥ ನೂರಾರು ಘಟನೆಗಳು ದಿನಬೆಳಗಾವರೆ ಅಂಬೇಡ್ಕರರ ಗಮನಕ್ಕೆ ಬರುತ್ತಿದ್ದುವು. ತಾವು ಬರೆದ ಸಂವಿಧಾನ ಕಸದ ಬುಟ್ಟಿಯು ಅವಸ್ತುವಾಗಿದೆಯೆಂದು ಪರಿತಪಿಸಿದರು. ಮೂರ್ನಾಲ್ಕು ವರ್ಷಗಳ ನಂತರವೂ ಅದೇ ಪರಿಸ್ಥಿತಿ ಮುಂದುವರಿದದ್ದಾದರೆ ಅಸ್ಪೃಶ್ಯತೆಯ ನಿವಾರಣೆ ಗಾಗಿ ಹಿಂಸಾಮಾರ್ಗವನ್ನು ಹಿಡಿಯಬೇಕಾದೀತೆಂದು ಅವರು ಬಹಿರಂಗವಾಗಿ ಸರ್ಕಾರಕ್ಕೆ ಎಚ್ಚರಿಕೆ ನೀಡಿದರು. ಇಂಡಿಯಾ ಜಪಾನ್ ಸಾಂಸ್ಕೃತಿಕ ಸಂಘ ದಲ್ಲೊಮ್ಮೆ ಮಾತಾಡುತ್ತ "ಇಂದಿನ ಅಥವಾ ಮುಂದಿನ ಪೀಳಿಗೆಗಳು ಬುದ್ಧನ ಅಥವಾ ಮಾರ್ಕ್ಸನ ಸಿದ್ಧಾಂತಗಳನ್ನನುಸರಿಸಬೇಕಾಗುತ್ತದೆ. ಜನ ಬೌದ್ಧ ಸಂಸ್ಕೃತಿಗೆ ಶರಣಾಗದಿದ್ದರೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಾಣುತ್ತಿರುವ ಸಂಘರ್ಷ ಗಳು ಪೂರ್ವದಲ್ಲಿಯೂ ಪುನರಾವರ್ತನೆಯಾಗುತ್ತವೆ." ಎಂದು ಪ್ರವಾದಿ ಯಂತೆ ನುಡಿದರು.

# ೮. ಬುದ್ಧಂ ಶರಣಂ ಗಚ್ಛಾಮಿ

ಪೊಟ್ಟಿ ಶ್ರೀರಾಮುಲು ಅವರ ಬಲಿದಾನದಿಂದಾಗಿ ಭಾಷಾವಾರು ಪ್ರಾಂತರಚನೆ ಅನಿವಾರ್ಯವಾಯಿತು. ತಮ್ಮ ತತ್ತ್ವಕ್ಕೆ ವಿರುದ್ಧವಾಗಿ ಅಂಬೇಡ್ಕರರೂ ಬದಲಾದ ಪರಿಸ್ಥಿತಿಗನುಗುಣವಾಗಿ ಹೊಂದಿಕೊಳ್ಳಬೇಕಾಯಿತು. 2–9–1953ರಂದು ಆಂಧ್ರ ಪ್ರದೇಶ ಮಸೂದೆ ರಾಜ್ಯಸಭೆಯ ಮುಂದೆ ಬಂದಾಗ ಅನಿಶ್ಚಿತವಿಲಂಬನೀತಿಗಾಗಿ ಸರ್ಕಾರವನ್ನು ಖಂಡಿಸಿದರು. ರಾಜ್ಯ ಪುನರ್ವಿಂಗಡಣೆಯಿಂದ ರಾಷ್ಟ್ರೈಕ್ಯಕ್ಕೆ ಭಂಗ ಬರುತ್ತದೆಂಬ ವಾದವನ್ನಲ್ಲಗಳೆದರು. ರಾಜ್ಯ ಪುನರ್ವಿಂಗಡಣಾ ಸಮಿತಿಯ ನಿರ್ಣಯಗಳನ್ನು ಪರಿಶೀಲಿಸಿ. ಸಕಾಲದಲ್ಲಿ ಕಾರ್ಯಕ್ರಮ ಕೈಗೊಂಡಿದ್ದರೆ ಪ್ರಾಣಹಾನಿ ಆಸ್ತಿನಷ್ಟ ಸಂಭವಿಸುತ್ತಿರಲಿಲ್ಲವೆಂದೂ, ಆ ಎಲ್ಲ ಹಾನಿನಷ್ಟಗಳಿಗೆ ಸರ್ಕಾರ ಪೂರ್ಣ ಜವಾಬ್ದಾರಿ ಹೊರಬೇಕಾಗುತ್ತದೆಂದೂ ಗುಡುಗಿದರು. ಮಸೂದೆಯಲ್ಲಿ ನಿಮ್ನ ವರ್ಗೀಯರ ರಕ್ಷಣೆಗೆಗತ್ಯವಾದ ಪರಿಚ್ಛೇದಗಳನ್ನು ಸೇರಿಸಬೇಕಾಗಿತ್ತೆಂದೂ, ಅಲ್ಪಸಂಖ್ಯಾತರ ಹಕ್ಕುಗಳಿಗೆ ಧಕ್ಕೆ ಬರದಂತೆ ರಕ್ಷಿಸುವ ಸಲುವಾಗಿ ಸಂವಿಧಾನದಲ್ಲಿ ರಾಜ್ಯಪಾಲರಿಗೆ ವಿಶೇಷಾಧಿಕಾರವನ್ನು ನಿಯೋಜಿಸಬೇಕಾಗಿತ್ತೆಂದೂ ಹೌ ಹಾರಿದರು. ಅವರ ವ್ಯಂಗ್ಯದ ತಿವಿತದಿಂದ ಕುಪಿತಗೊಂಡ ಗೃಹಮಂತ್ರಿ ಕಟ್ಜು ಅವರು "ಸಂವಿಧಾನವನ್ನು ರಚಿಸಿದವರು ಯಾರು?" ಎಂದು ಅಬ್ಬರಿಸಿದರು. "ಸಂವಿಧಾನ ಬರೆದವನು ನೀನೆ ಎಂದು ಜನ ಹೇಳುತ್ತಾರೆ. ಹಾಗೆ ಹೇಳುವುದು ಒಂದು ಸಂಪ್ರದಾಯವಾಗಿಬಿಟ್ಟಿದೆ–ನಾನೊಂದು ಬಾಡಿಗೆ ಕುದುರೆಯಾಗಿದ್ದೆ ನನ್ನಿಚ್ಛೆಗೆ ವಿರುದ್ಧವಾಗಿ ಇತರರು ಹೇಳಿದ್ದನ್ನೆಲ್ಲ ಮಾಡಿದೆ" ಎಂದು

ಅಂಬೇಡ್ಕರ್ ಪ್ರತ್ಯಸ್ತ್ರ ಹೂಡಿದರು. ಅವರು ಅದೇ ದಾಟಿಯಲ್ಲಿ ಮುಂದು ವರಿದು "ನಾವು ವಕೀಲರು. ಎಷ್ಟೋ ವಿಷಯಗಳನ್ನು ಸಮರ್ಥಿಸಿಕೊಳ್ಳುತ್ತೇವೆ. ಇರಲಿ. ನನ್ನಲ್ಲಿ ದೋಷ ಹುಡುಕುವುದೇ ನಿಮ್ಮ ಗುರಿಯಾಗಿದೆ. ಸಂವಿಧಾನಕ್ಕೆ ನಾನೇ ಮೊದಲು ಬೆಂಕಿ ಹಚ್ಚುತ್ತೇನೆ. ಅದು ನನಗೆ ಬೇಡ. ಅದರಿಂದ ಯಾರಿಗೂ ಲಾಭವಿಲ್ಲ. ಇನ್ನು ಮುಂದೆ ಅಲ್ಪಸಂಖ್ಯಾತರನ್ನು ಕಡೆಗಣಿಸುವಂತಿಲ್ಲ. ಕಡೆಗಣಿ ಸಿದರೆ ಹಿಂದೆಯೇ ಅಪಾಯ ಸಂಭವಿಸುತ್ತದೆ. ನನ್ನಲ್ಲಿ ಭಾಷೀಯ ಅಥವಾ ಭೌಗೋಲಿಕ ಸಂಕುಚಿತತೆಯಿಲ್ಲ. ಮರಾಠಿಯವನೆಂದುಕೊಳ್ಳಲೂ ನನಗಿಷ್ಟವಿಲ್ಲ. ನಾನು ಹಿಂದೀಪ್ರೇಮಿ. ಆದರೆ ಹಿಂದೀಯರೇ ಹಿಂದಿಯ ಹಗೆಗಳಾಗುವ ಚಿಹ್ನೆ ದಿನೇ ದಿನೇ ಅಧಿಕವಾಗುತ್ತಿವೆ." ಅವರ ಅತೃಪ್ತಿಗೋ ಭಗ್ನಾಶೆಗೋ ಅವರ ಮಾತುಗಳು ಸಂಕೇತವಾಗಿವೆಯೆಂದು ಹಲವು ಸದಸ್ಯರು ಟೀಕಿಸಿದರು.

ಸರ್ಕಾರದ ವರ್ತನೆ ಸರಿಯಿಲ್ಲವೆಂದು, ಅದು ಸಂವಿಧಾನವನ್ನು ನಿರ್ಲಕ್ಷಿ ಸುತ್ತಿದೆಯೆಂದು ಕಂಡಾಗಲೆಲ್ಲ ಅವರು ದ್ವಾಪರಯುಗದ ಭೀಮರೆ ಆಗುತ್ತಿದ್ದರು. ಸಾರ್ವತ್ರಿಕ ಚುನಾವಣೆಗಳಲ್ಲಿ ಸೋತ ಮೊರಾರ್ಜಿ ದೇಸಾಯಿಯವರನ್ನೂ ಮೇಲ್ಮನೆಯ ಸದಸ್ಯರಾದ ರಾಜಗೋಪಾಲಾಚಾರಿಯವರನ್ನೂ ಮುಖ್ಯ ಮಂತ್ರಿಯ ಗದ್ದುಗೆಗೇರಿಸಿದಾಗ ಅವರು ರುದ್ರಾವತಾರಿಯಾದರು. ವಿದೇ ಶಾಂಗ ನೀತಿಯನ್ನು ಕುರಿತು ಮಾತಾಡುವಾಗ ರಷ್ಯಾದ ಆಕ್ರಮಣ ನೀತಿಯನ್ನು ಕಟುವಾಗಿ ಟೀಕಿಸಿದರು. "ಕಣ್ಣಿಗೆ ಬಿದ್ದ ದೇಶಗಳನ್ನೆಲ್ಲ ಅದು ನುಂಗಿಕೊಳ್ಳುತ್ತಿದೆ. ಸ್ವತಂತ್ರಗೊಳಿಸುವ ನೆಪದಿಂದ, ಶಾಂತಿಸ್ಥಾಪನೆಯ ಹೆಸರಿನಲ್ಲಿ ಒಂದೊಂದು ದೇಶವನ್ನೂ ಪೂರೈಸುತ್ತಿದೆ. ಅದರ ಕೆಂಗಣ್ಣು ಇಂಡಿಯಾದ ಕಡೆಗೆ ಹರಿದರೆ ಆಶ್ಚರ್ಯವಾಗದು. ಕಮ್ಯೂನಿಸಮ್ಮು ದಾವಾಗ್ನಿಯಂತೆ ವ್ಯಾಪಕವಾದುದು. ಅದಕ್ಕೂ ಪ್ರಜಾಪ್ರಭುತ್ವಕ್ಕೂ ಹೊಂದಾಣಿಕೆ ಸಲ್ಲದು. ಮಾವೋ ಒಪ್ಪಿದ್ದಾರೆಂದು ಪಂಚಶೀಲದಲ್ಲಿ ಅಪಾರ ವಿಶ್ವಾಸವಿಡಬಾರದು. ಏಕೆಂದರೆ ಅದು ಬೌದ್ಧಧರ್ಮದ ವಿಶಿಷ್ಟ ತತ್ವ. ತಮ್ಮನಾಡಿನ ಮತ್ತು ಟಿಬೆಟ್ಟಿನ ಬೌದ್ಧರ ವಿಷಯದಲ್ಲಿ ಮಾವೋ ಆ ತತ್ವವನ್ನು ಅನ್ವಯಿಸುವುದುಂಟೆ ? ಅದು ರಾಜಕೀಯಕ್ಕೆ ಹೊಂದುವಂಥದಲ್ಲ. ಎರಡು ಸುಪ್ರಸಿದ್ಧ ತತ್ವಗಳ ಮೇಲೆ ಕಮ್ಯೂನಿಸಂ ನಿಂತಿದೆ : ನೀತಿ ನಿತ್ಯ ಪರಿವರ್ತನ ಶೀಲವಾದುದು. ಅಷ್ಟೇ ಅಲ್ಲ, ನೀತಿಯೆಂಬುದೇ ಭ್ರಾಂತಿ ; ನೀತಿಯಿದೆಯೆಂದು ಒಪ್ಪಿಕೊಳ್ಳು ವುದಾದರೆ ಇಂದಿನದೆ ಬೇರೆ, ನಾಳೆಯದೆ ಬೇರೆ. ಈಗ ಚೀನಾ ಲ್ಹಾಸಾವನ್ನು

ಕಬಳಿಸಿ ಇಂಡಿಯಾದ ನೆರೆಗೆ ಬಂದಿದೆ." ಅವರ ದೃಷ್ಟಿಯಲ್ಲಿ ಆಕ್ರಮಣ ಸೀಟೋವಿನ ಧ್ಯೇಯವಾಗಿರದೆ, ಚೀನಾ ಮತ್ತು ರಷ್ಯಾಗಳ ಹಾವಳಿಯನ್ನು ತಡೆಯುವುದಾಗಿತ್ತು.

1951ರಲ್ಲಿ ನಡೆಯಬೇಕಾಗಿದ್ದ ಅವರ ಷಷ್ಟ್ಯಬ್ದಿ ಸಮಾರಂಭ ಮೂರೂವರೆ ವರ್ಷಗಳನಂತರ ವಿಜೃಂಭಣೆಯಿಂದ ನೆರವೇರಿತು. ಮುಂಬಯಿ ನಗರದ ನಿಮ್ನ ವರ್ಗೀಯ ಸಂಯುಕ್ತ ಸಂಸ್ಥೆ ಆ ಸಂದರ್ಭದಲ್ಲಿ 1,18,000 ರೂಪಾಯಿ ಮೊತ್ತದ ನಿಧಿಯನ್ನವರಿಗೆ ಅರ್ಪಿಸಿತು. ಬಿಡುವಿಲ್ಲದ ಜಂಬರ ಮತ್ತು ಅನಾರೋಗ್ಯಗಳ ಜತೆಗೆ ಏರುತ್ತಿದ್ದ ವಯಸ್ಸು ಸಹ ಸೇರಿಕೊಂಡು ಅವರ ದೈಹಿಕ ಸಾಮರ್ಥ್ಯವನ್ನು ಕುಗ್ಗಿಸಿತು. ಪುಸ್ತಕಗಳಲ್ಲೆಷ್ಟು ಪ್ರೀತಿಯೋ ಸಂಗೀತದಲ್ಲಿಯೂ ಅವರಿಗಷ್ಟೇ ಅನುರಕ್ತಿ. ಸಂಗೀತದ ಸಾಂಗತ್ಯ ಮತ್ತು ಕಲೆಯ ಸೌಂದರ್ಯ ಮಾನವನ ಆತ್ಮೋನ್ನತಿಗೆ ಕಾರಣವಾಗುತ್ತವೆಂದು ಅವರು ಭಾವಿಸಿದ್ದರು. ಮುಪ್ಪು ಕಾಯಿಲೆಗಳಿಂದಾಗಿ ಕಾಲ ಕಳೆಯುವುದು ಕಷ್ಟವಾದಾಗ ವೀಣೆ ಕಲಿಯಲಾರಂಭಿಸಿದರು. ಚಿತ್ರ ಕಲೆಯ ಕಡೆಗೂ ಗಮನ ಹರಿಸಿದರು. ಅವರು ಕುಂಚಿಸಿದ ಚಿತ್ರಗಳು ಜೀವ ಕಳೆಯಿಂದ ತುಂಬಿವೆಯೆಂದು ಸೇವಕರು ಪ್ರಶಂಸಿಸಿದಾಗ ಅವರು ನಗುತ್ತಿದ್ದರು. ಪತ್ನಿಯಾಗಲಿ ಸೇವಕರಾಗಲಿ ಅವರನ್ನು ಪುಸ್ತಕಗಳ ಸೆರೆಯಿಂದ ಬಿಡಿಸಬೇಕಾದರೆ ಅವರ ಕಲಾನೈಪುಣ್ಯವನ್ನು ಕೊಂಡಾಡಬೇಕಿತ್ತು. ಇಂಡಿಯಾ ದೇಶದಲ್ಲಿ ಕಲೆಯ ಹೊಗಳಿಕೆ ತೆಗಳಿಕೆಗಳು ಜಾತೀಯತೆಯನ್ನವಲಂಬಿಸಿವೆಯೆಂದು ಆಗಾಗ್ಗೆ ಅವರು ಅಸಮಾಧಾನ ವ್ಯಕ್ತಪಡಿಸುತ್ತಿದ್ದರು.

1954ನೆಯ ಡಿಸೆಂಬರ್ ತಿಂಗಳಲ್ಲಿ ಅಂಬೇಡ್ಕರರು ತೃತೀಯ ಅಂತರರಾಷ್ಟ್ರೀಯ ಬೌದ್ಧ ಸಮ್ಮೇಲನದಲ್ಲಿ ಭಾಗವಹಿಸುವ ಸಲುವಾಗಿ ರಂಗೂನಿಗೆ ಹೋದರು. ಸಿಲೋನಿನಲ್ಲಿ ನಡೆದ ಹಿಂದಿನ ಸಮ್ಮೇಲನದಲ್ಲಿಯೂ ಅವರು ಭಾಗವಹಿಸಿದ್ದರು. ಅವರ ಜತೆಯಲ್ಲಿ ಮಡದಿ ಮತ್ತು ಆಪ್ತ ಸಹಾಯಕ ಎಸ್. ವಿ. ಸಾವಡ್ಕರ್ ಇದ್ದರು. ಆರೋಗ್ಯ ಚನ್ನಾಗಿಲ್ಲದಿದ್ದರೂ ಅವರು ಸಮ್ಮೇಲನದಲ್ಲಿ ಭಾಷಣ ಮಾಡಬೇಕೆಂದು ಕಾರ್ಯಕರ್ತರು ಒತ್ತಾಯಪಡಿಸಿದರು. ಪ್ರಪಂಚದ ನಾನಾ ಭಾಗಗಳಿಂದ ಬಂದಿದ್ದ ಬೌದ್ಧರನ್ನೂ ಭಿಕ್ಕುಗಳನ್ನೂ ನೋಡಿದಾಗ ಬುದ್ಧನ ಜೀವನ ಚರಿತ್ರೆ ಅವರ ಸ್ಮೃತಿಕೋಶದಲ್ಲಿ

ಮರುಕೊಳಿಸಿತು. ಬುದ್ಧನೇ ಆ ಭಿಕ್ಕುಗಳ ರೂಪದಲ್ಲಿ ಪ್ರತ್ಯಕ್ಷವಾಗಿದ್ದಂತೆ ಅವರ ಮೂಲಕ ಮಾತಾಡುತ್ತಿದ್ದಂತೆ, ಆ ಸಮ್ಮೇಲನದಲ್ಲಿ ಅಗೋಚರವಾಗಿ ಸೂಕ್ಷ್ಮ ರೂಪದಲ್ಲಿ ಹಾಜರಿದ್ದಂತೆ ಅವರಿಗೆ ಭಾಸವಾಯಿತು. ಬುದ್ಧ ಮತ್ತು ಬೌದ್ಧ ಧರ್ಮ ಭಾರತದಿಂದ ಗಡೀಪಾರಾದ ಕರುಣಾ ಜನಕ ದೃಶ್ಯ ಅವರ ಕಣ್ಮುಂದೆ ಸುಳಿದಂತಾಯಿತು. ವೈಚಾರಿಕತೆಯೇ ಮೂರ್ತಿವೆತ್ತಂತಿದ್ದ ಆ ಮಹಾ ವ್ಯಕ್ತಿ ಇದ್ದಕ್ಕಿದ್ದಂತೆ ಭಾವುಕರಾದರು. ಕಣ್ಣೀರು ಕೆನ್ನೆಗಳ ಮೇಲೆ ಹರಿದು, ಗಲ್ಲದಲ್ಲಿ ಸಂಗಮಿಸಿತು. ಹೇಗೋ ತಮ್ಮ ಭಾವಾತಿರೇಕವನ್ನು ಸಂಯಮಿಸಿಕೊಂಡು. ಭಾಷಣ ಪ್ರಾರಂಭಿಸಿದರು. ಬೌದ್ಧ ಧರ್ಮದಲ್ಲಿ ಆಡಂಬರಕ್ಕೆ ಸ್ಥಾನವಿಲ್ಲ ವೆಂದೂ, ಹಬ್ಬಹರಿದಿನಗಳಲ್ಲಿ ಅಲಂಕಾರಗಳಿಗಾಗಿ ಅಪಾರ ಹಣ ಖರ್ಚು ಮಾಡುತ್ತಿರುವುದು ಸಲ್ಲದೆಂದೂ, ಅದೇ ಹಣವನ್ನು ಬೇರೆ ದೇಶಗಳಲ್ಲಿ ಬೌದ್ಧಮತದ ಪುನರುಜ್ಜೀವನಕ್ಕಾಗಿ ವೆಚ್ಚ ಮಾಡಬಹುದೆಂದೂ ಅವರು ನುಡಿದರು. ಬೌದ್ಧಮತದ ವಿರೋಧಿಗಳು ತಾಕತ್ತಿದ್ದರೆ ತಮ್ಮ ಮುಂದೆ ವಾದಕ್ಕೆ ನಿಲ್ಲಲೆಂದು ಸವಾಲೆಸೆದರು. ಹಿಂದೂಧರ್ಮದ ಮೇಲೆ ಬೌದ್ಧಮತ ಅದಮ್ಯ ಪ್ರಭಾವ ಬೀರಿತೆಂದೂ, ಬೌದ್ಧರ ಅಹಿಂಸಾ ತತ್ತ್ವದ ಪರಿಣಾಮ ವಾಗಿ ಗೋರಕ್ಷಣಾ ನೀತಿ ಪ್ರಚಾರಕ್ಕೆ ಬಂತೆಂದೂ ಅವರು ಸ್ಪಷ್ಟಪಡಿಸಿದರು. ಸಾಧನ ಸಂಪತ್ತುಗಳೊದಗಿದ ಕೂಡಲೇ ತಾವು ಭಾರತದಲ್ಲಿ ಬೌದ್ಧ ಮತ ಪ್ರಚಾರ ಕೈಗೊಳ್ಳುವುದಾಗಿಯೂ, ಆ ದಿಶೆಯಲ್ಲಿ ತಾವಾಗಲೇ ಅಷ್ಟಿಷ್ಟು ಕೆಲಸ ಮಾಡಿರುವುದಾಗಿಯೂ ಅವರು ತಿಳಿಸಿದರು. ಬೌದ್ಧಮತ ಪ್ರಚಾರ ಕ್ಕೆಂದೇ ತಾವು ಎರಡು ಕಾಲೇಜುಗಳನ್ನು ಸ್ಥಾಪಿಸಿರುವುದಾಗಿಯೂ ಅವರು ಸಭೆಯಲ್ಲಿ ನಿವೇದಿಸಿದರು.

ಅವರಿಗೆ ದೇವರಲ್ಲಿ ಶ್ರದ್ಧೆಯಿಲ್ಲದಿರಲಿಲ್ಲ. ಒಂದು ರೀತಿಯಲ್ಲಿ ಅವರು ನಿರ್ಗುಣೋಪಾಸಕರು. ಯಾವುದೋ ಒಂದು ದುರ್ಜ್ಞೇಯ ಅವ್ಯಕ್ತಶಕ್ತಿ ಮಾನವನ ಭವಿಷ್ಯವನ್ನು ರೂಪಿಸುತ್ತಿದೆಯೆನ್ನುವುದರಲ್ಲಿ ಅವರಿಗೆ ಅನುಮಾನ ವಿರಲಿಲ್ಲ. ಅವರೊಮ್ಮೆ ಹಳ್ಳಿಗಾಡಿನಲ್ಲಿ ಸಂಚರಿಸುತ್ತಿದ್ದಾಗ ಕಾರು ಸೇತುವೆ ದಾಟುವಷ್ಟರಲ್ಲಿ ನದಿಗೆ ಮಗುಚಿಕೊಳ್ಳುವುದರಲ್ಲಿತ್ತು. ದೊಡ್ಡದೊಂದು ಕಲ್ಲು ಗುಂಡಿಗೆ ಹಿಂದಿನ ಚಕ್ರಗಳು ಸಿಕ್ಕಿಕೊಳ್ಳಲಾಗಿ, ಮುಂದಿನ ಚಕ್ರಗಳು ಆಕಾಶ ಮುಖಿಯಾಗಿದ್ದುವು. ಆ ಗುಂಡು ಅವರು ನದಿಯ ಪಾಲಾಗದಂತೆ ರಕ್ಷಿಸಿತು.

ಒಡನೆಯೇ ಅಂಬೇಡ್ಕರ್ ಮತ್ತು ಚಾಲಕ ದಿಗ್ಭ್ರಮೆಗೊಂಡು ಕೆಳಗಿಳಿದರು. ಮನೆಗೆ ಮರಳಿದ ಕೂಡಲೇ ಮಕ್ಕಳನ್ನು ಹತ್ತಿರಕ್ಕೆ ಕರೆದು ತಲೆಯನ್ನು ನೇವರಿಸಿ ತಕ್ಕೈಸಿಕೊಂಡು. ಯಾವುದೋ ಶಕ್ತಿಯ ಕೃಪೆಯಿಂದಾಗಿ ತಾವು ಅಪಾಯ ಮುಕ್ತರಾದೆವೆಂದು ತಿಳಿಸಿ. ಕಣ್ಣೀರು ಸುರಿಸಿದರು. ಬೆಳಗ್ಗೆ ಸಂಜೆ ಬುದ್ಧನ ವಿಗ್ರಹದ ಮುಂದೆ ಕುಳಿತು ಸ್ತೋತ್ರಗಳನ್ನು ಪಠಿಸಿ. ಪೂಜೆ ಮಾಡುತ್ತಿದ್ದುದೇ ಅವರ ಆಸ್ತಿಕತೆಗೆ ಸಾಕ್ಷಿಯಾಗಿದೆ. ಬುದ್ಧನ ಹೆಸರು ಹೇಳಿಕೊಂಡು ಅವರು, ಕೆಲವು ಸಾರಿ ಹೊಸ ಯೋಜನೆಗಳನ್ನು ಪ್ರಾರಂಭಿಸುತ್ತಿದ್ದರು . ಬುದ್ಧ ವಿಗ್ರಹದ ಪ್ರತಿಷ್ಠಾಪನೆಯೂ ಅವರ ಮನೋಧರ್ಮಕ್ಕೆ ಮತ್ತೊಂದು ನಿದರ್ಶನವಾಗಿದೆ.

ಹೀಗಿರುವಾಗ ಅವರ ಆರೋಗ್ಯ ದಿನೇ ದಿನೇ ಕೆಡುತ್ತಿತ್ತು. ವೈದ್ಯರ ಸಲಹೆಯ ಮೇರೆಗೆ ಅವರು ಹಲ್ಲು ಕೀಳಿಸಿದರು. ಏಳುವಾಗ ಕೂರುವಾಗ ಹಾಗೂ ಅಡ್ಡಾಡುವಾಗ ಯಾರದಾದರೂ ನೆರವು ಬೇಕಾಗುತ್ತಿತ್ತು. ಉಸಿರಾಟದ ತೊಂದರೆಯೂ ಇತ್ತು. ಆದ್ದರಿಂದ ಪ್ರಾಣವಾಯುವಿನ ಹಳಗೆ ಯಾವಾಗಲೂ ಅವರ ಹತ್ತಿರವಿರುತ್ತಿತ್ತು. ಆದರೆ ಸುತ್ತಮುತ್ತಣ ಜನರಿಗೆ ಗಾಬರಿಯಾದೀತೆಂಬ ಶಂಕೆಯಿಂದ ಕೃತಕ ವಾಯು ಸೇವನೆಯ ವಿಷಯವನ್ನು ಗುಟ್ಟಾಗಿಡಲಾಗಿತ್ತು. ಚಳಿಗಾಲದಲ್ಲಿ ಕಾವು ಯಂತ್ರದ ಸಹಾಯದಿಂದ ಅವರ ಶರೀರವನ್ನು ಶಾಖವಾಗಿಡಲಾಗುತ್ತಿತ್ತು. ಕೆಲವು ಸಾರಿ ವಿದ್ಯುತ್ ಸ್ನಾನವೂ ಅನಿವಾರ್ಯವಾಗುತ್ತಿತ್ತು. ಅವರೆಂದೂ ಸಿಗರೇಟು ಸೇದಿದವರಲ್ಲ, ಮಾದಕ ದ್ರವ್ಯಗಳನ್ನು ಮುಟ್ಟಿದವರಲ್ಲ. ವೈದ್ಯರ ಒತ್ತಾಯದ ಪರಿಣಾಮವಾಗಿ ರಾತ್ರಿಯೂಟದ ವೇಳೆ ಚಳಿಗಾಲದಲ್ಲಿ ಬ್ರಾಂದಿಯನ್ನೂ. ಬೇಸಗೆಯಲ್ಲಿ ಬೀರನ್ನೂ ಮಿತವಾಗಿ ತೆಗೆದುಕೊಳ್ಳುತ್ತಿದ್ದರು. ಪಾಶ್ಚಾತ್ಯ ರೀತಿಯ ಆಹಾರ ಸೇವನೆಯಿಂದ ಆರೋಗ್ಯ ಕುದುರಬಹುದೆಂದು ಕೆಲವು ವೈದ್ಯರು ಅಭಿಪ್ರಾಯಪಟ್ಟರು. ಅಂಬೇಡ್ಕರರಿಗೆ ಹಿಡಿಸಲಿಲ್ಲ. ಅವರ ತೂಕ ಕಡಮೆಯಾಯಿತು ; ಕೆನ್ನೆ ಕುಳಿಬಿದ್ದುವು ; ಕಣ್ಣು ಕೊಳ್ಳವಾದುವು ; ಹೊಟ್ಟೆ ಬೆನ್ನು ಸೇರಿತು ; ಮೂಳೆ ಬಿಟ್ಟುಕೊಂಡುವು ; ಕೈಕಾಲು ಸೀಕಲಾದುವು. ಮಾಂಸಲವಾಗಿ ಸುಂದರವಾಗಿದ್ದ ದೇಹ ಎಲುಬಿನ ಗೂಡಾಯಿತು. ಆಪ್ತವೈದ್ಯರು, ಮಡದಿ, ಆಪ್ತಸಹಾಯಕರು ಹಗಲಿರುಳೆನ್ನದೆ ಅವರ ಶೂಶ್ರೂಷೆಯಲ್ಲಿ ಮಗ್ನರಾದರು. ಕೆಲವು ದಿನ ಆರೋಗ್ಯಕುದುರಿ ಹಿಂದಿನ ಸ್ಥಿತಿ ಮರುಕಳಿಸುತ್ತದೆನ್ನುವಷ್ಟರಲ್ಲಿ ಹಿಂಜರಿತ ಪ್ರಾರಂಭವಾಗುತ್ತಿತ್ತು.

ನೀತಿಪರರೂ ಕರ್ತವ್ಯನಿಷ್ಠರೂ ಶ್ರಮಜೀವಿಗಳೂ ಆದ ಅಂಬೇಡ್ಕರರು ತಮ್ಮ ಅನುಯಾಯಿಗಳಿಂದಲೂ ಅದೇ ಗುಣಗಳನ್ನು ನಿರೀಕ್ಷಿಸುತ್ತಿದ್ದರು. ಜಂಗಮ ವಿಶ್ವಕೋಶದಂತಿದ್ದ ನಿಶಿತಮತಿಯ ನಾಯಕರೊಡನೆ ಏಗುವುದು ಸಾಮಾನ್ಯರಿಗೆ ಕಷ್ಟವಾಗುತ್ತಿತ್ತು. ಸತ್ಯ ಪ್ರಾಮಾಣಿಕತೆಗಳಿಗೆ ಧಕ್ಕೆ ಬಂದಾಗ ಹತ್ತಿರದವರನ್ನು ತರಾಟೆಗೆ ತೆಗೆದುಕೊಳ್ಳುತ್ತಿದ್ದರು. ತಮ್ಮ ನೇರಕ್ಕೆ ನಡೆಯುದಿದ್ದವರನ್ನು ಛೀಮಾರಿ ಮಾಡುತ್ತಿದ್ದರು. ಕೆಲವೊಮ್ಮೆ ಮಹಾಮೇಧಾವಿಗಳು ಸರ್ವಾಧಿಕಾರಿಗಳಂತೆ ವರ್ತಿಸುವುದೂ ಉಂಟು. ತಮ್ಮ ಯೋಜನೆಗಳನ್ನು ಬಹುಬೇಗನೆ ಸಫಲಗೊಳಿಸಬೇಕೆಂಬುದೇ ಅಂಥ ವರ್ತನೆಗೆ ಹೇತುವಾಗಿತ್ತು. ಸಿದ್ಧಾರ್ಥ ಕಾಲೇಜಿನ ಪ್ರಾಧ್ಯಾಪಕರೊಬ್ಬರು ಬೌದ್ಧ ಧರ್ಮವನ್ನು ಬಹಿರಂಗವಾಗಿ ಟೀಕಿಸಿದ್ದಕ್ಕಾಗಿ ಅವರ ಕೋಪಕ್ಕೆ ಬಲಿಯಾಗಬೇಕಾಯಿತು. ಅವರ ದೈಹಿಕ ಮತ್ತು ಮಾನಸಿಕ ಸ್ಥಿತಿ ಹದಗೆಡುತ್ತಿದ್ದಂತೆ ಅವರ ಆಪ್ತಾನುಯಾಯಿಗಳು ಒಬ್ಬೊಬ್ಬರಾಗಿ ಅವರಿಂದ ಕಳಚಿಕೊಳ್ಳಲಾರಂಭಿಸಿದರು. ಕೆರೆನೀರು ಬತ್ತಿದನಂತರ ಹಕ್ಕಿಗಳು ಬೇರೆಡೆಗೆ ಹಾರಿ ಹೋಗುವುದು ಸಹಜವಷ್ಟೆ. ಮಹಡಿ ಹತ್ತಿದನಂತರ ಏಣಿಯ ಅವಶ್ಯಕತೆ ಇರುವುದಿಲ್ಲವಷ್ಟೆ. ಮೂವತ್ತು ವರ್ಷ ಅವರ ಅನುಯಾಯಿಯಾಗಿ, ವಿಶ್ವಾಸಾರ್ಹ ಸಹೋದ್ಯೋಗಿಯಾಗಿ ಹಗಲಿರಳು ನಿಷ್ಠೆಯಿಂದ ಅವರ ಆಜ್ಞಾಧಾರಕರಾಗಿ ಸೇವೆ ಸಲ್ಲಿಸಿದ ಕಮಲಾಕಾಂತ ಚಿತ್ರೆಯವರು ಅವರಿಂದ ದೂರ ಸರಿದರು. ಕೆಲವರಂತು ವಿರೋಧ ಪಕ್ಷ ಸೇರಿದರು ; ತಮ್ಮನ್ನು ಮೇಲೆ ತಂದ ಅಂಬೇಡ್ಕರರನ್ನು ನಿಷ್ಕರುಣೆಯಿಂದಲೇ ನಿಂದಿಸತೊಡಗಿದರು. ಮಹತ್ವಾಕಾಂಕ್ಷೆಯುಳ್ಳ ಜನ ಮೇಲೇರಿದ ಕೂಡಲೇ ತಮ್ಮ ಕೀರ್ತಿಧ್ವಜವನ್ನು ಹಾರಾಡಿಸುವ ಸಲುವಾಗಿ ತಮ್ಮ ಯಶಸ್ಸಿಗೆ ಕಾರಣರಾದ ಹಿರಿಯರನ್ನು ಕೊಲೆ ಮಾಡಿರುವ ಪ್ರಸಂಗಗಳು ಚರಿತ್ರೆಯಲ್ಲಿ ಸಮೃದ್ಧವಾಗಿ ದೊರೆಯುತ್ತವೆ. ಚಿತ್ರೆ ದೂರ ಸರಿಯಲು ಅಂಬೇಡ್ಕರರ ಹತ್ತಿರದಲ್ಲಿದ್ದ ಕೆಲವರು ಆಸೆಬುರುಕರೂ ಕಾರಣ. ಅಂಬೇಡ್ಕರರ ಮನಸ್ಸಿನ ಮೇಲೆ ವಿಶ್ವಾಸದ್ರೋಹಿಗಳ ವಂಚನೆ ಕೆಟ್ಟಪರಿಣಾಮವನ್ನುಂಟು ಮಾಡಿತು.

ಕಾಹಿಲೆಯಿಂದ ಹಾಸುಗೆಯ ಮೇಲೆ ಮಲಗಿದ್ದಾಗಲೂ ತಮ್ಮ ಸಂಸ್ಥೆಗಳ ಹಣಕಾಸಿನ ಪರಿಸ್ಥಿತಿಯ ಬಗ್ಗೆ ಕಸಿವಿಸಿಗೊಳ್ಳುತ್ತಿದ್ದರು. ನಿಧಿಸಂಗ್ರಹಕ್ಕಾಗಿ ಮನವಿಯೊಂದನ್ನು ತಯಾರಿಸಿ, ಅದರಲ್ಲಿ ರುಜು ಮಾಡುವಂತೆ ನೆಹ್ರೂರವರನ್ನು ಪ್ರಾರ್ಥಿಸಿಕೊಂಡರು. ನೆಹ್ರೂರವರೊಂದು ಸಂದೇಶ ಕಳಿಸಿದರು.

ಆ ಸಂದೇಶದ ಜತೆಗೆ ಮೂರ್ನಾಲ್ಕು ಸಾಲು ಹೆಚ್ಚಿಗೆ ಸೇರಿಸುವಂತೆ ವಿಷಯ ಸೂಚಿಸಿ ಅದನ್ನು ಅಂಬೇಡ್ಕರರು ನೆಹ್ರೂ ಅವರಿಗೆ ಹಿಂದಿರುಗಿಸಿದರು. ಅಮೆರಿಕೆಯಲ್ಲಿದ್ದ ಕೆಲವು ಭಾರತೀಯರಿಗೂ ಪತ್ರ ಬರೆದು ಹಣ ಕೂಡಿಸಿ ಕೊಡುವಂತೆ ಕೇಳಿಕೊಂಡರು.

ಅನಾರೋಗ್ಯದ ಕಾರಣದಿಂದ ರಜ ಬಳಸಿಕೊಳ್ಳಲು ರಾಜ್ಯ ಸಭೆಯ ಅನುಮತಿ ಪಡೆದರಾದರೂ, ಓದು ಬರಹಗಳನ್ನು ಮಾತ್ರ ನಿಲ್ಲಿಸಲಿಲ್ಲ. 'ಕ್ರಾಂತಿ ಮತ್ತು ಪ್ರತಿಕ್ರಾಂತಿ'ಯ ಜತೆ ಜತೆಗೆ 'ಬುದ್ಧ ಮತ್ತು ಕಾರ್ಲ್ ಮಾರ್ಕ್ಸ್' ಎಂಬ ಗ್ರಂಥದ ರಚನೆಗೆ ಕೈಹಾಕಿದ್ದರು. ರಾಜೇಂದ್ರ ಪ್ರಸಾದರು ಪವಿತ್ರ ಗಂಗಾ ನದಿಯ ದಡದ ಮೇಲೆ ಬ್ರಾಹ್ಮಣ ಪುರೋಹಿತನೊಬ್ಬನ ಪಾದ ತೊಳೆದ ಪ್ರಸಂಗವನ್ನಾಧರಿಸಿ 'ಹಿಂದೂ ಧರ್ಮದ ಸಮಸ್ಯೆ' ಎಂಬ ಕೃತಿಯನ್ನು ಸಹ ಪ್ರಾರಂಭಿಸಿದ್ದರು. 1951ರಲ್ಲಿ ಪ್ರಾರಂಭಿಸಿದ್ದ 'ಬುದ್ಧ ಮತ್ತು ಬೌದ್ಧಮತ' ಎಂಬ ಮಹಾಕೃತಿ 1956ರ ಹೊತ್ತಿಗೆ ಪೂರ್ಣಗೊಂಡಿತು. ಆದರೂ ಅದನ್ನು ಮೇಲಿಂದ ಮೇಲೆ ತಿದ್ದುತ್ತಿದ್ದರು. ತಿದ್ದುವುದೆಂದರೆ, ಅವರು ಹೇಳುವುದು, ಅವರ ಆಪ್ತ ಕಾರ್ಯದರ್ಶಿ ನಾನಕ್ ಚಂದ್ ರತ್ತು ಮತ್ತು ಅವರ ಸಹೋದ್ಯೋಗಿ ಪ್ರಕಾಶ್ ಚಂದ್ರರು ಬರೆದುಕೊಳ್ಳುವುದು. ಹಾಗೆ ಬರೆದದ್ದನ್ನು ಅಂಬೇಡ್ಕರರು ಮತ್ತೆ ಸ್ವತಃ ತಿದ್ದುತ್ತಿದ್ದರು. ಈ ರೀತಿಯ ಕೃಷಿ ರಾತ್ರಿಯೆಲ್ಲ ಜರುಗುತ್ತಿತ್ತು. ಅನೇಕ ರಾತ್ರಿ ರತ್ತು ಸಹ ನಿದ್ದೆ ಬಿಟ್ಟು ಅವರ ಸನಿಹದಲ್ಲಿರಬೇಕಾಗುತ್ತಿತ್ತು.

ಇಡೀ ರಾತ್ರಿ ನಿದ್ದೆಯಿಲ್ಲದೆ ಬರೆಯುವುದು ಅಂಬೇಡ್ಕರರಿಗೆ ರೂಢಿಯಾಗಿ ಹೋಗಿತ್ತು. 1956ರ ಮಾರ್ಚಿ ತಿಂಗಳಲ್ಲೊಂದು ರಾತ್ರಿ, ಮಾರನೆಯ ಬೆಳಗ್ಗೆ ಬೇಗ ಬರುವಂತೆ ರತ್ತುವಿಗೆ ಹೇಳಿಕಳಿಸಿದರು. ಅವರು ಯಾವುದೋ ಒಂದು ಪುಸ್ತಕಕ್ಕೆ ಪೀಠಿಕೆ ಬರೆಯುತ್ತಿದ್ದರು. ರತ್ತು ಗೊತ್ತಾದ ವೇಳೆಗೆ ಬಂದರು. ರಾತ್ರಿ ಕುಳಿತಿದ್ದ ಕುರ್ಚಿಯಲ್ಲಿಯೇ ಅವರು ಬರೆಯುತ್ತಿದ್ದರು. ಐದು-ಹತ್ತು ನಿಮಿಷ ರತ್ತು ಅವರ ಕಡೆಗೆ ಕಣ್ಣಾಗಿ ನಿಂತರು. ಅಂಬೇಡ್ಕರರು ಏಕಾಗ್ರಚಿತ್ತರಾಗಿ ಬರೆಯುತ್ತಿದ್ದರು. ಅವರ ಗಮನವನ್ನು ಸೆಳೆಯುವ ಸಲುವಾಗಿ ರತ್ತು ಅವರ ಮೇಜಿನ ಪುಸ್ತಕಗಳನ್ನು ತೆಗೆದು ಒಂದು ಕಡೆಯಿಂದ ಮತ್ತೊಂದು ಕಡೆಗಿಟ್ಟರು. ಬಾಬಾಸಾಹೇಬರು ತಲೆಯೆತ್ತಿ "ಇನ್ನೂ ಇಲ್ಲಿಯೇ ಏಕೆ ನಿಂತಿದ್ದೀಯೆ, ರತ್ತು? ಮನೆಗೆ ಹೋಗುವಂತೆ ಹೇಳಿ ಎಷ್ಟು ಹೊತ್ತಾಯಿತು?"

ಎಂದು ಪ್ರಶ್ನಿಸಿದರು. "ಇದೇ ತಾನೆ ಬಂದೆ, ಸಾಹೇಬರೆ. ರಾತ್ರಿಯೇ ಮನೆಗೆ ಹೋದೆ" ಎಂದು ರತ್ತು ಉತ್ತರಿಸಿದರು. "ಬೆಳಗಾಯಿತೇನು ?" "ಹಾಗಾದರೆ ನೀವು ಮಲಗಲಿಲ್ಲ ?" "ಮಲಗಲಿಲ್ಲವೆನ್ನುವುದು ಈಗಲೇ ನನಗೆ ಗೊತ್ತಾದದ್ದು. ನಾನು ಈ ಕುರ್ಚಿಯಿಂದ ಅಲುಗಾಡಲೇ ಇಲ್ಲ." ಅನಂತರ ಅವರು ಸ್ನಾನ ಮಾಡಿ, ಭಗವಾನ್ ಬುದ್ಧನಿಗೆ ಪ್ರಾರ್ಥನೆ ಸಲ್ಲಿಸಿ, ಟೀ ಕುಡಿದು, ತಮ್ಮ ಕೆಲಸ ಮತ್ತೆ ಪ್ರಾರಂಭಿಸಿದರು.

'ಬುದ್ಧ ಮತ್ತು ಅವನ ದಮ್ಮ' ಅವರ ಮೇರುಕೃತಿ. ಅದನ್ನು ಅಚ್ಚು ಕಟ್ಟಾಗಿ ಮುದ್ರಿಸಬೇಕೆಂದು ಅವರ ಮನಸ್ಸು ಹಾತೊರೆಯುತ್ತಿತ್ತು. ಅದು ಬೃಹದ್ಗ್ರಂಥವಾದ್ದರಿಂದ ಮುದ್ರಣದ ಖರ್ಚು ದುಬಾರಿಯಾಗಲಿತ್ತು. ಹಸ್ತಪ್ರತಿ ಅಚ್ಚುಮನೆ ಸೇರಿತಾದರೂ ಅದರ ಪ್ರಕಟನೆಯನ್ನು ನೋಡುವ ಭಾಗ್ಯ ಅವರ ಪಾಲಿಗಿರಲಿಲ್ಲ. ಆ ಗ್ರಂಥ ಅಂಬೇಡ್ಕರರ ಹತ್ತಾರು ವರ್ಷಗಳ ವ್ಯಾಸಂಗ ಸಂಶೋಧನೆ ಚಿಂತನೆಗಳ ಫಲವಾಗಿ ಲಬ್ಧವಾದ ಪರಿಪಕ್ವ ಫಲ. ಯೇಸುವಿನ ಮರಣಾನಂತರ ಹೊಸ ಬೈಬಲನ್ನು ಅವನ ಶಿಷ್ಯರು ಸಂಗ್ರಹಿಸಿದಂತೆ ಬುದ್ಧನ ಮರಣಾನಂತರ ಅವನ ಶಿಷ್ಯರಾದ ಉಪಾಲಿ ಆನಂದರು ಹೇಳಿದ ಸಂಗತಿಗಳನ್ನು ರಾಜಗೃಹದಲ್ಲಿ ಸಭೆ ಸೇರಿದ ಭಿಕ್ಷುಗಳು ಸಂಗ್ರಹಿಸುತ್ತಾರೆ. ಬುದ್ಧನ ಚರಿತ್ರೆ ಮೂರು ಪಿಟಕಗಳಲ್ಲಿ ಚದರಿಹೋಗಿದೆ. ಕ್ರಿಸ್ತಶಕ ಮೊದಲನೆಯ ಶತಮಾನದಲ್ಲಿ ವಿರಚಿತವಾದ ಲಲಿತವಿಸ್ತರವೇ ಬುದ್ಧನ ಪ್ರಪ್ರಥಮ ಜೀವನ ಚರಿತ್ರೆ. ಧರ್ಮಾನಂದ ಕೋಸಂಬಿಯವರಂಥ ಇತ್ತೀಚಿನ ಸಂಶೋಧನಕಾರರು ಅದರಲ್ಲಿ ಅನೇಕ ಪ್ರಕ್ಷಿಪ್ತಗಳೂ, ಕಾವ್ಯ ಕಲ್ಪನೆಗಳೂ ಇವೆಯೆಂದು ತೋರಿಸಿ ಕೊಟ್ಟಿದ್ದಾರೆ. ಅಂಬೇಡ್ಕರರು ಸಹ ಇದೇ ಜಾಡಿನಲ್ಲಿ ಹೊರಟು ವಿವಾದಾಸ್ಪದ ಸಂಗತಿಗಳನ್ನು ಸಮನ್ವಯಗೊಳಿಸುವ, ಎದ್ದು ಕಾಣುವ ಸಮಸ್ಯೆಗಳನ್ನು ಬಗೆಹರಿಸುವ ಮೂಲಕ ಬುದ್ಧನ ಚರಿತ್ರೆಯನ್ನು ಪುನರ್ರಚಿಸಲು ಪ್ರಯತ್ನಿಸಿದ್ದಾರೆ. ವಚನ ಕಥನ ಶೈಲಿಗಳ ಸಮ್ಮಿಶ್ರಣವನ್ನಿಲ್ಲಿ ಗುರುತಿಸಬಹುದು. ಸರಳತೆ, ಸ್ಪಷ್ಟತೆ ಮತ್ತು ಸಂಪುಷ್ಟತೆಗಳು ಈ ಶೈಲಿಯ ಸಲ್ಲಕ್ಷಣಗಳು.

ಮುಂಬಯಿಯಲ್ಲಿ ನಡೆದ ಬುದ್ಧ ಜಯಂತಿಯ ಸಂದರ್ಭದಲ್ಲಿ ತಾವು ಮುಂದಿನ ಅಕ್ಟೋಬರ್ ತಿಂಗಳಲ್ಲಿ ಬೌದ್ಧ ಮತ ಸ್ವೀಕರಿಸುವುದಾಗಿ ಪ್ರಕಟಿಸಿದರು. ತಮ್ಮ ಬೌದ್ಧ ಪಕ್ಷಪಾತವನ್ನು ಟೀಕಿಸುತ್ತಿದ್ದ ಜನರ ಬಗ್ಗೆ ಸಿಟ್ಟಿಗೆದ್ದು "ನಾನೂ ನನ್ನ ಜನರೂ ಹಳ್ಳಕ್ಕೆ ಬೀಳುತ್ತೇವೆ. ಅದರಿಂದ ಇತರರಿಗೇನಾಗಬೇಕು ?

ನಾನು ಕುರುಬ, ನನ್ನ ಜನ ಕುರಿಗಳೆಂಬುದು ನಿಜ. ನನ್ನ ಜನರ ಕಷ್ಟನಿಷ್ಠುರಗಳು ಅವರಿಗೇನು ಗೊತ್ತು? ನಾನೇ ಅವರಿಗೆ ತಿಳಿವಳಿಕೆ ನೀಡಬೇಕಾಗಿದೆ" ಎಂದು ಸಾರಿದರು. ಹಿಂದೂ ಮತದಿಂದ ಬೌದ್ಧ ಮತ ಭಿನ್ನವಲ್ಲವೆಂದು ಪ್ರಚಾರ ಮಾಡುತ್ತಿದ್ದ ಜನರಿಗೆ "ಹಿಂದೂ ಮತ ದೇವರನ್ನು ನಂಬುತ್ತದೆ : ಬೌದ್ಧಮತ ಇಲ್ಲ. ಹಿಂದೂ ಮತ ಆತ್ಮವನ್ನು ನಂಬುತ್ತದೆ : ಬೌದ್ಧಮತ ಇಲ್ಲ. ಹಿಂದೂ ಮತದಲ್ಲಿ ಚಾತುರ್ವರ್ಣ್ಯಕ್ಕೆ ಮತ್ತು ಜಾತಿ ವ್ಯವಸ್ಥೆಗೆ ಅವಕಾಶವುಂಟು ; ಬೌದ್ಧಮತದಲ್ಲಿ ಇಲ್ಲ" ಎಂದು ಉತ್ತರ ಕೊಟ್ಟರು.

ಜೂನ್ ತಿಂಗಳಿಂದ ಅಕ್ಟೋಬರ್‌ವರೆಗೆ ಅವರು ದೆಹಲಿಯ ಆಲಿಪುರ ರಸ್ತೆಯಲ್ಲಿದ್ದ ಮನೆಯನ್ನು ಬಿಟ್ಟಲುಗಲಿಲ್ಲ. ಅವರ ರಕ್ತನಾಳಗಳಲ್ಲಿ ಔಷಧಿ ಪ್ರವಹಿಸುತ್ತಿದ್ದರೂ. ದೇಹ ಮಾತ್ರ ನಿತ್ರಾಣವಾಗಿತ್ತು. ಕಾಲು ನೋವಿನಿಂದಾಗಿ ಎದ್ದು ನಿಲ್ಲುವುದೆ ಕಷ್ಟವಾಗಿತ್ತು. ಮುಂಬಯಿ ದೆಹಲಿಗಳಲ್ಲಿದ್ದ ವೈದ್ಯರಿಗೆಲ್ಲ ಅವರ ರೋಗ ಸವಾಲಾಗಿತ್ತು. ಹೊಸ ಹೊಸ ವೈದ್ಯರ ಸಂಪರ್ಕ ಬೆಳೆಸಿ. ಅವರು ಸೂಚಿಸಿದ ಚಿಕಿತ್ಸೆಗಳಿಗೆಲ್ಲ ಅವರು ಮೈಯೊಡ್ಡಿದಾಗ ವೈದ್ಯ ಸತಿ ಕಳವಳಗೊಳ್ಳುತ್ತಿದ್ದರು. ಒಮ್ಮೆ ಫ್ರೆಂಚ್ ವೈದ್ಯೆಯೊಬ್ಬರು ಕ್ಷ-ಕಿರಣ ಪ್ರಯೋಗದಿಂದ ಗುಣಕಾಣಬಹುದೆಂದು ನಿರುಪಿಸಿದರು. ನಾನಾ ರೀತಿಯ ಔಷಧಿಗಳಿಂದ ರೋಗ ಕೆರಳಬಹುದೇ ಹೊರತು ವಾಸಿಯಾಗುವುದಿಲ್ಲವೆಂದು ಸತಿ ತಮ್ಮ ದುಃಖವನ್ನು ತೋಡಿಕೊಂಡಾಗ ಪತಿ "ಈ ಎಂಟುವರ್ಷ ನಿಮ್ಮ ವೈದ್ಯರ ಕೈಲಿ ಸಿಕ್ಕಿಕೊಂಡು ನರಳಿದ್ದಾಗಿದೆ. ಹೊರಗಿನವರನ್ನು ಪರೀಕ್ಷೆ ಮಾಡಿ ನೋಡೋಣವೆಂದರೆ ನೀನು ಅಡ್ಡ ಬರುತ್ತಿದ್ದೀಯೆ" ಎಂದು ಕೂಗಾಡುತ್ತಿದ್ದರು. ಅಂಥ ಸಂದರ್ಭದಲ್ಲಿ ಅವರು ಮುನಿಸಿಕೊಂಡು ಮದ್ದು ತೆಗೆದು ಕೊಳ್ಳುತ್ತಿರಲಿಲ್ಲ. ಊಟ ಮಾಡುತ್ತಿರಲಿಲ್ಲ. ಆಗ ಅವರ ಕಾರ್ಯ ದರ್ಶಿಯೋ ಆಪ್ತ ಶಿಷ್ಯರೋ ಬಂದು ಗೋಗರೆದು ಬೇಡಿಕೊಂಡು ಅವರಿಗೆ ಅನುಪಾನ ಮಾಡಿಸಬೇಕಾ ತ್ತು.

ಶಾರೀರಕ ಬಾಧೆ ಅಸಹನೀಯವಾಗಿ ಹಾಸುಗೆಯ ಮೇಲೆ ಬಿದ್ದು ಕೊಂಡು ನರಳುತ್ತಿದ್ದಾಗ ಕೈಗೂಡದ ಧ್ಯೇಯಾದರ್ಶಗಳು ಹಂಗಿಸಲೆಂಬಂತೆ ಅವರ ಒಳಗಣ್ಣಿನ ಮುಂದೆ ನಿಲ್ಲುತ್ತಿದ್ದುವು. ಆಗವರು ಬಿಕ್ಕಿ ಬಿಕ್ಕಿ ಅಳುತ್ತಿದ್ದರು. ತಮ್ಮ ಜೀವಮಾನ ಕಾಲದಲ್ಲಿ ತಮ್ಮ ಜನ ನಾಡನ್ನು ಆಳುವಂತಾಗ ಲಿಲ್ಲವಲ್ಲ ಎಂದು ಪರಿತಪಿಸುತ್ತಿದ್ದರು. ಮೂರು ದಶಕಗಳ ಅವರ ಶ್ರಮದ

ಫಲವನ್ನನುಭವಿಸುತ್ತಿದ್ದವರು ಹಿಡಿಮುಂದಿ ವಿದ್ಯಾವಂತರು. ಹಳ್ಳಿಯ ಕೋಟಿ ಕೋಟಿ ಜನರ ಪರಿಸ್ಥಿತಿ ಹಿಂದಿನಂತೆಯೇ ಮುಂದುವರಿದಿತ್ತು. ಅವರ ಕಾಲ ವಂತು ಮುಗಿಯುತ್ತ ಬಂದಿತ್ತು. ತಮ್ಮ ಸ್ಥಾನಕ್ಕೆ ಬರುವ ಜನ ಇಲ್ಲವೆಂದು ಆತಂಕ ವ್ಯಕ್ತಪಡಿಸುತ್ತಿದ್ದರು. ಇದ್ದವರು ನಾಯಕತ್ವಕ್ಕಾಗಿ ಒಬ್ಬರಿಗೊಬ್ಬರು ಬಡಿದಾಡುತ್ತಿದ್ದು ಬಡ ಜನರನ್ನು ಮರೆತಿದ್ದರು. ನಾಯಕರೆನಿಸಿಕೊಂಡವರು ಪ್ರಧಾನಿಗಳ ಕೈಗೊಂಬೆಗಳಾಗಿದ್ದದ್ದರಿಂದ ತಮ್ಮ ಸಲಹೆ ಬೋಧನೆಗಳು ಅರಣ್ಯ ರೋದನವಾಗುತ್ತವೆಂದು ದುಃಖಾಕ್ರಾಂತರಾಗಿದ್ದರು. "ಭಕ್ತಿದಾಸ್ಯ ಪೂರ್ವಾ ಗ್ರಹಗಳಿಂದ ತುಂಬಿರುವ ನಾಡಿನಲ್ಲಿ ಹುಟ್ಟಿದ್ದೇ ಪಾಪ. ಬಯ್ಯುವವರ ನಡುವೆ ಇದ್ದುಕೊಂಡೇ ಸಾಕಷ್ಟು ಕೆಲಸ ಮಾಡಿದ್ದೇನೆ. ಕೊನೆಯುಸಿರಿರುವ ತನಕ ಒಂದಲ್ಲ ಒಂದು ರೂಪದಲ್ಲಿ ಸೇವೆ ಸಲ್ಲಿಸುತ್ತೇನೆ" ಎಂದವರು ನಿಟ್ಟುಸಿರು ಬಿಡುತ್ತಿದ್ದರು. "ಇಡೀ ಬಾಳು ಹೋರಾಟದಲ್ಲಿಯೇ ಕಳೆಯಿತು. ನಾನನು ಭವಿಸಿದ ಕೋಟಲೆಯಾತನೆಗಳಿಗೆ ಲೆಕ್ಕವಿಲ್ಲ. ಬಹಳ ಕಷ್ಟದಿಂದ ತೇರನ್ನು ಇಷ್ಟು ದೂರ ತಂದು ನಿಲ್ಲಿಸಿದ್ದೇನೆ. ಏನೇ ಅಡ್ಡಿ ಆತಂಕಗಳೊದಗಿದರೂ ತೇರು ಮುಂದುವರಿಯಲಿ. ನಮ್ಮ ನಾಯಕರು ಅದನ್ನು ಮುಂದಕ್ಕೆಳೆಯಲಾಗದಿದ್ದರೆ ಹೋಗಲಿ, ಹಿಂದಕ್ಕೆ ನೂಕುವುದಂತು ಬೇಡ. ಅದು ಇದ್ದಲ್ಲಿಯೇ ನಿಂತಿರಲಿ. ನನ್ನ ಜನರಿಗಿದೇ ಸಂದೇಶ. ಇದನ್ನವರು ಮರೆಯದಿರಲಿ" ಎಂದು ರತ್ತುವಿನ ಕಡೆತಿರುಗಿ, ಅವರ ಕೈಹಿಡಿದುಕೊಂಡು, ಹಣೆಗೊತ್ತಿಕೊಂಡು, ಒತ್ತಿ ಬರುತ್ತಿದ್ದ ದುಃಖವನ್ನದುಮಿಕೊಂಡು ನುಡಿದು ಅಂತರ್ಮುಖಿಯಾಗುತ್ತಿದ್ದರು. ಅವರು ತಮ್ಮ ಪತ್ನಿಯ ಅಥವಾ ಮಕ್ಕಳ ಭವಿಷ್ಯದ ಬಗ್ಗೆ ಮರೆತೂ ಬಾಯಿ ತೆರೆದವರಲ್ಲ. ಅವರ ಅನ್ನ ಬಟ್ಟೆಗಳಿಗೆ ದಾರಿಮಾಡಿಕೊಡಲಿಲ್ಲವಲ್ಲ. 'ಅಯ್ಯೋ, ನನ್ನ ಬಾಳು ವ್ಯರ್ಥವಾಯಿತೆ? ನನ್ನ ಜನರ ಕಣ್ಣೀರನ್ನೊರಸಲಿಲ್ಲವಲ್ಲ. ಅಯ್ಯೋ ದೇವರೆ! ದೇವರಿದ್ದರೆ ತಾನೆ ಕರೆಯುವುದು. ದೇವರೆನ್ನುವ ಪ್ರಾಣಿಯಿದ್ದಿದ್ದರೆ ಸಾವಿರಾರು ವರ್ಷಗಳಿಂದ ನರಳುತ್ತಿರುವ ಈ ಜನರ ಗೋಳನ್ನು ಪರಿಹರಿಸು ತ್ತಿರಲಿಲ್ಲವೆ? ಅದೂ ಇರಲಿ ಅವನು ಇದ್ದಿದ್ದರೆ ಈಗಲಾದರೂ ಅವರ ಸೇವೆಗಾಗಿ ನನ್ನನ್ನುಳಿಸುತ್ತಿರಲಿಲ್ಲವೆ?" ಎಂದು ಅವರೊಬ್ಬರೇ ಇದ್ದಾಗ ಗೋಳಾಡುತ್ತಿದ್ದರು. ತುಸು ಹೊತ್ತಿನಂತರ ಸಮಾಧಾನ ತಂದುಕೊಂಡು "ನಾನೀಗ ಈ ನನ್ನ ಜನರನ್ನು ಜಾಗೃತಗೊಳಿಸಿದ್ದೇನೆ. ಅವರು ಮೈಕೊಡವಿ ನಿದ್ರೆಯಿಂದೇಳುವ, ಜಡತೆಯನ್ನು ಬಡಿದೋಡಿಸುವ ದಿನ ಬಹು ದೂರವಿಲ್ಲ. ನಾಳೆ ಅವರು ಈ ನಾಡಿನಲ್ಲಿ ಬಿರುಗಾಳಿಯಾಗಿ ಬೀಸುತ್ತಾರೆ, ಸಿಡಿಲಾಗಿ

ಅಪ್ಪಳಿಸುತ್ತಾರೆ. ತಮಸ್ಸನ್ನೋಡಿಸುವ ಜ್ಯೋತಿಯಾಗುತ್ತಾರೆ, ರಾಷ್ಟ್ರದ ಕರ್ಣಧಾರರಾಗುತ್ತಾರೆ. ನಾನೇಕಿರಬೇಕು? ನನ್ನ ಕರ್ತವ್ಯ ಮುಗಿದಿದೆ" ಎಂದು ನೆನೆದಾಗ ಅವರ ಮುಖದ ಮೇಲೆ ಮಿಂಚು ಸಂಚರಿಸಿದಂತೆ ಭಾಸವಾಗುತ್ತಿತ್ತು. ರಕ್ತ ಹೀನವಾಗಿ, ದೇಹ ಬೆಂಡಾಗಿ, ಇಚ್ಛಾಶಕ್ತಿಯೊಂದೇ ಪ್ರಾಣಾಧಾರವಾಗಿತ್ತು.

ಅವರು ಬೌದ್ಧಮತ ಸೇರುವ ದಿನ ಬೇಗ ಬೇಗ ಸನ್ನಿಹಿತವಾಗುತ್ತಿತ್ತು. ಆಗಸ್ಟ್ ತಿಂಗಳಲ್ಲೊಂದು ದಿನ ಅವರು ತಮ್ಮ ಆಪ್ತ ಶಿಷ್ಯರಲ್ಲೊಬ್ಬರಾದ ಶಂಕರಾನಂದಶಾಸ್ತ್ರಿಯವರ ಬಳಿ ಆ ಪ್ರಸ್ತಾಪವೆತ್ತಿದರು. ಮುಂಬಯಿ, ಸಾರನಾಥ, ನಾಗಪುರಗಳಲ್ಲೆಲ್ಲಿಯೋ ಒಂದು ಕಡೆ ಮತಾಂತರ ಸಮಾರಂಭ ಏರ್ಪಡಬೇಕೆಂದೂ, ಪ್ರಾಚೀನ ಕಾಲದಲ್ಲಿ ಬೌದ್ಧ ನಾಗರ ಕೇಂದ್ರವಾಗಿದ್ದ ನಾಗಪುರವೇ ಸೂಕ್ತಸ್ಥಳವೆಂದೂ ಅವರೇ ಸೂಚಿಸಿದರು. ಬುದ್ಧಧರ್ಮದ ಚಕ್ರಕ್ಕೆ ಮತ್ತೆ ಚಾಲನೆಕೊಟ್ಟು, ತಮ್ಮ ಗುರುವಿನ ಸಂದೇಶ ಪ್ರಪಂಚದ ಮೂಲೆ ಮೂಲೆಗಳಲ್ಲಿ ಮೊಳಗುವಂತೆ ವ್ಯವಸ್ಥೆಗೊಳಿಸುವ ಹಂಬಲ ವ್ಯಕ್ತಪಡಿಸಿದರು. "ಎಲ್ಲರೂ ನಿಮ್ಮನ್ನು ಹಿಂಬಾಲಿಸುತ್ತಾರೆಂದು ತಿಳಿದಿರುವಿರಾ?" ಎಂದು ಕೆಲವು ಮಿತ್ರರು ನಾಯಕರನ್ನು ಪ್ರಶ್ನಿಸಿದರು. ಅವರು ನಿಡಿದಾಗಿ ಉಸಿರು ಬಿಡುತ್ತ "ಆ ವಿಷಯ ನಾನು ಯೋಚಿಸದೆ ಇಲ್ಲ. ಆದ್ದರಿಂದಲೇ ನಾನು ಇಷ್ಟುದಿನ ವಿಲಂಬಮಾಡಿದ್ದು. ನನ್ನೊಡನೆ ಯಾರೇ ಬರಲಿ, ಬರದಿರಲಿ. ನಾನು ಮಾತ್ರ ನನ್ನ ಧ್ಯೇಯದಿಂದ ವಿಮುಖನಾಗಲಾರೆ. ಅದು ನನ್ನ ಕೊನೆಯ ಬಯಕೆ. ನಾನು ಮಣ್ಣು ಸೇರುವ ಮೊದಲೇ ಈ ಬಯಕೆಯನ್ನು ಈಡೇರಿಸಿಕೊಳ್ಳಬೇಕು. ಇಷ್ಟವಿದ್ದವರು ನನ್ನೊಡನೆ ಬರಲಿ. ಉಳಿದವರು ತಮಗೆ ಬೇಕಾದ ಕಡೆ ಹೋಗಲಿ" ಎಂದು ತಮಗೆ ತಾವೆ ಗೊಣಗಿಕೊಂಡರು.

ಕೆಲವು ತಿಂಗಳಿಗೆ ಮುಂಚೆ ಭಾರತೀಯ ಬೌದ್ಧಜನ ಸಮಿತಿಯನ್ನು ಅಂಬೇಡ್ಕರರೇ ಸ್ಥಾಪಿಸಿದ್ದರು. ಅದರ ಕಾರ್ಯದರ್ಶಿ ಗೋಡ್ಬೋಲೆ. ಅವರನ್ನು ದೆಹಲಿಗೆ ಕರೆಸಿಕೊಂಡು ನಾಗಪುರದಲ್ಲಿ ಮತಾಂತರ ಸಮಾರಂಭಕ್ಕೆ ಅಗತ್ಯವಾದ ಸಿದ್ಧತೆಗಳನ್ನು ವ್ಯವಸ್ಥೆಗೊಳಿಸುವಂತೆ ತಿಳಿಸಿದರು. ನಿಮ್ನ ವರ್ಗೀಯರು ಶ್ವೇತವಸ್ತ್ರಧಾರಿಗಳಾಗಿ ಅಪಾರ ಸಂಖ್ಯೆಯಲ್ಲಿ ದೀಕ್ಷಾ ಮಹೋತ್ಸವದಲ್ಲಿ ಭಾಗವಹಿಸಿ, ಉತ್ಸವವನ್ನು ಯಶಸ್ವಿಗೊಳಿಸಬೇಕೆಂದು

ಸಮಿತಿಯ ಪರವಾಗಿ ಕಾರ್ಯದರ್ಶಿಗಳು ಪತ್ರ ಪತ್ರಿಕೆಗಳ ಮೂಲಕ ಮನವಿ ಮಾಡಿಕೊಂಡರು. 14-10-1956ರಂದು ಬೆಳಿಗ್ಗೆ 9ರಿಂದ 11 ಗಂಟೆಯೊಳಗಾಗಿ ನೂತನ ಮತಸ್ವೀಕರಣ ಸಮಾರಂಭ ಜರುಗುವುದೆಂದು ಅಂಬೇಡ್ಕರರೂ ಪತ್ರಿಕಾಪ್ರಕಟನೆಯ ಮೂಲಕ ಬಿನ್ನಹ ಮಾಡಿಕೊಂಡರು. ಕುಶಿನಾರದ ಭಿಕ್ಕು ಚಂದ್ರಮಣಿಯವರಿಗೊಂದು ಪತ್ರ ಬರೆದು "ನೀವು ಭಾರತದಲ್ಲಿಯೇ ಹಿರಿಯ ಸನ್ಯಾಸಿಯಾಗಿದ್ದೀರಿ. ನಿಮ್ಮ ನೇತೃತ್ವದಲ್ಲಿ ಈ ಸಮಾರಂಭ ನಡೆಯಬೇಕು. ನಿಮ್ಮಿಂದಲೇ ದೀಕ್ಷೆ ಪಡೆಯಬೇಕೆಂಬುದು ನನ್ನ ಮತ್ತು ನಮ್ಮವರ ಹೆಬ್ಬಯಕೆಯಾಗಿದೆ. ನೀವು ವಿಮಾನದಲ್ಲಿ ಬರಬಹುದು. ನಿಮ್ಮನ್ನು ಕರೆತರಲು ಗೆಳೆಯರೊಬ್ಬರನ್ನು ಕಳಿಸುತ್ತೇನೆ" ಎಂದವರು ಪ್ರಾರ್ಥಿಸಿಕೊಂಡರು. ಮಹಾಬೋಧಿ ಸಂಘದ ವಲಿಸಿನ್ಹರಿಗೆ ಬರೆದ ಪತ್ರದಲ್ಲಿ "ಈ ಸಂದರ್ಭದಲ್ಲಿ ಆಚರಿಸಬೇಕಾದ ವಿಧಿಸಂಸ್ಕಾರಗಳ ಬಗ್ಗೆ ನೀವೇ ಮಾರ್ಗದರ್ಶನ ಮಾಡಬೇಕಾಗುತ್ತದೆ. ದೀಕ್ಷಾ ಸಮಯದಲ್ಲಿ ಸ್ವೀಕರಿಸಬೇಕಾದ ಕೆಲವು ಪ್ರತಿಜ್ಞೆಗಳನ್ನು ನಾನು ರೂಪಿಸಿದ್ದೇನೆ. ನೀವು ಮುಂಚಿತವಾಗಿ ಬರುವುದಾದರೆ ವಿಧಿಸಂಪ್ರದಾಯಗಳ ವಿಚಾರದಲ್ಲಿ ನಮ್ಮಿಬ್ಬರ ನಡುವೆ ತೋರಬಹುದಾದ ಭಿನ್ನಾಭಿಪ್ರಾಯಗಳನ್ನು ಚರ್ಚಿಸಿ, ಸಮನ್ವಯ ಮಾಡಿಕೊಳ್ಳಬಹುದು." ಎಂದು ತಿಳಿಸಿದರು. ಮುಂಬರಲಿದ್ದ ಆನಂದೋತ್ಸವದ ಭಾವೋದ್ರಿಕ್ತವಾದ ಮಹಾಬೋಧಿ ಪತ್ರಿಕೆ ವಿಜಯದಶಮಿಯಂದು ನಡೆಯುವ ಆ ಮಹಾಘಟನೆ ಬೌದ್ಧ ಧರ್ಮದ ಪುನರುತ್ಥಾನಕ್ಕೆ ನಾಂದಿಯಾಗುತ್ತದೆಂದು ಬಣ್ಣಿಸಿತು.

ಉತ್ಸವ ಒಂದು ವಾರವಿದ್ದಾಗಲೇ ಸಾವಿರಾರು ಮಂದಿ ನಿಮ್ನ ಜನ, ಅದರಲ್ಲಿಯೂ ಪ್ರಮುಖವಾಗಿ ಮಹರರು ಮಹಾರಾಷ್ಟ್ರದ ನಾನಾ ಭಾಗಗಳಿಂದ ರೈಲು ಬಸ್ಸು ಎತ್ತಿನಗಾಡಿಗಳಲ್ಲಿ ಬಂದು ನಾಗಪುರದಲ್ಲಿ ಜಮಾಯಿಸುತ್ತಿದ್ದರು. ಎರಡು ಸಾವಿರ ವರ್ಷಗಳನಂತರ ತಮಗೆ ಸಮಾಜದಲ್ಲಿ ಸಮಾನತೆ ಪ್ರಾಪ್ತವಾಗುತ್ತದೆಂಬ, ಹಿಂದುಗಳಿಗೆ ಸರಿಸಮನಾಗಿ ಮೆರೆಯಬಹುದೆಂಬ ಆತ್ಮಪ್ರತ್ಯಯದಿಂದ ಹೆಂಗಸರು ಗಂಡಸರು ಮಕ್ಕಳು ಬುತ್ತಿ ಕಟ್ಟಿಕೊಂಡು ಬಂದಿದ್ದರು. ತಮ್ಮ ರಕ್ಷಕರಂತಿದ್ದ ನಾಯಕರನ್ನು ನೋಡುವ ಹಂಬಲ ಬೇರೆ. ಎಲ್ಲಿ ನೋಡಿದರೂ ಬಿಳುಪು ಹೆಪ್ಪಾದಂತೆ ಶ್ವೇತವಸ್ತ್ರಧಾರಿಗಳ ಸಾಗರವನ್ನು ಕಾಣಬಹುದಿತ್ತು. ಬಡವರು ಸಹ ಕಡಗ ಕಾಲ್ಮುರಿಗಳನ್ನು ಮಾರಿಯೋ, ಸಾಹುಕಾರರ ಸರಗಳನ್ನು ಅಡವಿಟ್ಟೊ ಬಿಳಿಯ ಬಟ್ಟೆಗಳನ್ನು ಹೊಲಿಸಿ

ಕೊಂಡು ಬಂದಿದ್ದರು. ನಗರದ ನಾನಾ ಬೀದಿಗಳಲ್ಲಿ ಜನ ಸಾಲು ಸಾಲಾಗಿ "ಭಗವಾನ್ ಬುದ್ಧನಿಗೆ ಜಯವಾಗಲಿ. ಬಾಬಾ ಸಾಹೇಬರಿಗೆ ಜಯವಾಗಲಿ" ಎಂದು ದಿಗ್ದಿಗಂತಗಳು ಮೊಳಗುವಂತೆ ಜಯಕಾರ ಕೂಗುತ್ತ ವೀರ ಹೆಜ್ಜೆ ಹಾಕುತ್ತ ಮುಂದುವರಿಯುತ್ತಿದ್ದರು. ಉಳ್ಳವರು ಹೋಟಲುಗಳಲ್ಲುಳಿದರು; ಕೆಲವರಿಗೆ ಶಾಲಾ ಕಾಲೇಜುಗಳಲ್ಲಿ ಸ್ಥಳಾವಕಾಶ ಮಾಡಿಕೊಡಲಾಯಿತು. ಹಲವರು ಮನೆಗಳ ಜಗಲಿಗಳ ಮೇಲೋ ಮರಗಳ ಕೆಳಗೋ ರಾತ್ರಿಗಳನ್ನು ಕಳೆಯುತ್ತಿದ್ದರು. ಕೆಲವರು ಕಲ್ಲೊಡ್ಡಿ ಒಲೆಮಾಡಿಕೊಂಡು ಅಡುಗೆ ಮಾಡಿ ಕೊಳ್ಳುತ್ತಿದ್ದರು. ಮಹಾಮಂಟಪದ ಮಾಳದಲ್ಲಿ ಅಂಗಡಿ ಮುಂಗಟ್ಟುಗಳು ಮತ್ತು ಹೋಟಲುಗಳೆದ್ದು. ಜಾತ್ರೆಗಳನ್ನು ನೆನಪಿಗೆ ತರುತ್ತಿದ್ದುವು. ಮನೆ ಕಚೇರಿ ಸಭಾಮಂಟಪಗಳನ್ನು ತಳಿರು ತೋರಣಗಳಿಂದ ಸಿಂಗರಿಸಲಾಗಿತ್ತು. ನೀಲಿ ಕೆಂಪು ಹಸಿರು ಪಟ್ಟಿಗಳುಳ್ಳ. ಸ್ತೂಪಾಂಕಿತವಾದ ಬಾವುಟಗಳು ಬೀದಿ ಬೀದಿಗಳಲ್ಲಿ ಮನೆಮನೆಗಳ ಮೇಲೆ ಹಾರಾಡುತ್ತಿದ್ದುವು. ಪ್ರಾಯಶಃ ಬುದ್ಧ ತನ್ನ ಜೀವಮಾನದಲ್ಲಿ ಅಂಥ ದೊಡ್ಡ ನೆರವಿಯನ್ನಾಗಲೀ. ಉತ್ಸಾಹದ ನೆರೆ ಯನ್ನಾಗಲೀ ಕಂಡಿರಲಿಲ್ಲ. ಎಲ್ಲರ ಬಾಯಲ್ಲಿಯೂ 'ಬುದ್ಧಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ. ಧರ್ಮಂ ಶರಣಂ ಗಚ್ಛಾಮಿ' ಎಂಬ ಮಂತ್ರ ಘೋಷಣೆಯಲ್ಲದೆ. ಬೇರೆ ಮಾತು ಹೊರಳುತ್ತಿರಲಿಲ್ಲ. ಇಡೀ ನಾಗಪುರ ಬುದ್ಧಮಯವಾಗಿತ್ತು.

ಅಂಬೇಡ್ಕರರು ಹನ್ನೊಂದನೆಯ ತಾರೀಖು ಮಧ್ಯಾಹ್ನ ರತ್ತು ಮತ್ತು ಮಡದಿಯರೊಡನೆ ದೆಹಲಿಯಿಂದ ವಿಮಾನದಲ್ಲಿ ಬಂದಿಳಿದರು. ಅವರ ಸ್ವಾಗತಕ್ಕಾಗಿ ಬಡವ ಬಲ್ಲಿದರೆನ್ನದೆ ಬಹುಜನ ನಿಲ್ದಾಣದಲ್ಲಿ ಕಿಕ್ಕಿರಿದಿದ್ದರು. ತಮ್ಮ ನಾಯಕರು ವಿಮಾನದಿಂದ ಹೊರಬರುತ್ತಿದ್ದಂತೆಯೇ 'ಭಗವಾನ್ ಬುದ್ಧನಿಗೆ ಜಯವಾಗಲಿ. ಬಾಬಾ ಸಾಹೇಬರಿಗೆ ಜಯವಾಗಲಿ. ಬೌದ್ಧ ಧರ್ಮಕ್ಕೆ ಜಯವಾಗಲಿ' ಎಂಬ ಕೂಗು ಆಕಾಶವನ್ನು ಭೇದಿಸುತ್ತಿತ್ತು. ಬಾಬಾ ಸಾಹೇಬರು ಹೂವಿನ ಹಾರಗಳೊಳಗೆ ಮುಳುಗಿಹೋದರು. ಅವರ ಪಾದವನ್ನು ಮುಟ್ಟುವ. ಪಾದಧೂಳಿಯನ್ನು ತಲೆಯಮೇಲಿಟ್ಟುಕೊಳ್ಳುವ ಸಲುವಾಗಿ ಜನ ಅವರ ಕಡೆಗೆ ನುಗ್ಗುತ್ತಿದ್ದರು. ಗುಂಪನ್ನು ಹತೋಟಿಗೆ ತರುವಲ್ಲಿ ಪೋಲೀಸರಿಗೂ ಸ್ವಯಂ ಸೇವಕರಿಗೂ ಸಾಕೋ ಸಾಕಾಯಿತು. ನಿಲ್ದಾಣದಿಂದ ಅಂಬೇಡ್ಕರರು ತಂಗಣೆಗೆಂದು ಗೊತ್ತಾಗಿದ್ದ ಹೋಟಲಿನ

ತನಕ ರಸ್ತೆಯ ಎರಡು ಮಗ್ಗುಲಲ್ಲಿಯೂ ಜನ ನೆರೆದಿದ್ದು 'ಬುದ್ಧ ಭಗವಾನರ ಪಾದಕ್ಕೆ 'ಉಘೇ ಉಘೇ' 'ಬಾಬಾ ಸಾಹೇಬರು ಚಿರಾಯುವಾಗಲಿ' ಎಂದು ಉಗ್ಗಡಿಸುತ್ತಿದ್ದರು.

ಅಕ್ಟೋಬರ್ 13ನೆಯ ದಿನಾಂಕ ಸಂಜೆ ಅಂಬೇಡ್ಕರರು ಪತ್ರಿಕಾ ಗೋಷ್ಠಿ ನಡೆಸಿ, ಬೌದ್ಧ ಧರ್ಮದ ಹೆಗ್ಗುಣಗಳನ್ನು ವಿವರಿಸಿದರು. "ಹಿಂದೂ ಧರ್ಮದಲ್ಲಿಯೂ ವಿಶ್ವತತ್ವಗಳಿರುವಾಗ ಬೌದ್ಧಮತಕ್ಕೇಕೆ ಸೇರಬೇಕು?" ಎಂದು ಪತ್ರಿಕಾಕರ್ತರೊಬ್ಬರು ಪ್ರಶ್ನಿಸಿದರು. ಅಂಬೇಡ್ಕರರು ಸಿಡಿಮಿಡಿ ಗೊಂಡು "ನಿಮ್ಮ ಪೂರ್ವಿಕರಿಗೆ ಆ ಪ್ರಶ್ನೆ ಹಾಕಿ. ಆ ಪ್ರಶ್ನೆಗೆ ಉತ್ತರ ಕೊಡಬೇಕಾದವರು ನೀವು. ನಾನು ಬೇರೆ ಧರ್ಮವನ್ನು ಸ್ವೀಕರಿಸಬಹುದಿತ್ತು. ಅಸ್ಪೃಶ್ಯತೆಯ ಬಗ್ಗೆ ನನಗೂ ಮಹಾತ್ಮಗಾಂಧಿಯವರಿಗೂ ಭಿನ್ನಾಭಿಪ್ರಾಯ ವಿತ್ತು. ಅಸ್ಪೃಶ್ಯತಾನಿವಾರಣೆಯ ವಿಚಾರದಲ್ಲಿ ನಾನೇನೇ ಉಗ್ರಕಾರ್ಯಕ್ರಮ ಕೈಗೊಂಡರೂ ನಾಡಿನ ಹಿತಕ್ಕೆ ಧಕ್ಕೆಯುಂಟಾಗದಂತೆ ವರ್ತಿಸುತ್ತೇನೆಂದು ಆಗ ಅವರಿಗೆ ವಾಗ್ದಾನ ಮಾಡಿದ್ದೆ. ಬೌದ್ಧಧರ್ಮೀಯನಾಗುವ ಮೂಲಕ ನನ್ನ ಮಾತನ್ನುಳಿಸಿಕೊಂಡಿದ್ದೇನೆ. ಬೌದ್ಧಧರ್ಮ ಭಾರತೀಯ ಸಂಸ್ಕೃತಿಯ ಅವಿ ಭಾಜ್ಯಾಂಗವಾಗಿದೆ. ಈ ನಾಡಿನ ಸಾಂಸ್ಕೃತಿಕ ಪರಂಪರೆಗಾಗಲೀ ಇತಿಹಾಸ ಕ್ಕಾಗಲೀ ಅಪೋಹವೊದಗದಂತೆ ನಾನು ಎಚ್ಚರಿಕೆ ವಹಿಸಿದ್ದೇನೆ." ಎಂದು ನುಡಿದರು. "ಬೌದ್ಧ ಧರ್ಮದ ಎರಡು ಶಾಖೆಗಳಲ್ಲಿ ನಿಮಗಿಷ್ಟವಾದದು ಯಾವುದು?" "ನನಗೆ ಮುಖ್ಯವಾದದ್ದು ಬೌದ್ಧಧರ್ಮವೇ ಹೊರತು, ಅದರ ಶಾಖೆಗಳಲ್ಲ. ಬ್ರಾಹ್ಮಣಮತದ ಪ್ರಭಾವದಿಂದಾಗಿ ಮಹಾಯಾನ ಪ್ರತ್ಯೇಕ ವಾಯಿತು. ಆದರೆ ಮೂಲಭೂತ ತತ್ತ್ವಗಳು ಎರಡರಲ್ಲಿಯೂ ಒಂದೇ. ಭಗವಾನ್ ಬುದ್ಧನ ಉದ್ದೇಶ ವಾಣಿಯೇ ನನಗೆ ದಾರಿದೀಪ. ನೀವು ಬೇಕಾದರೆ ನಾನು ಪ್ರಚಾರಮಾಡುವ ಮಾರ್ಗವನ್ನು ನವಬೌದ್ಧಮತ ಅಥವಾ ನವ ಯಾನ ಎಂದು ಕರೆಯಬಹುದು." "ಭಾರತದಲ್ಲಿ ಬೌದ್ಧಮತಕ್ಕೆ ಭವಿಷ್ಯವಿದೆ ಯೆಂದು ಹೇಳುವಿರಾ?" "ನಿಮಗೇಕೆ ಸಂದೇಹ, ನಾನೇ ಸಾಕ್ಷಿಯಾಗಿರುವಾಗ? ಈ ಧರ್ಮ ಸ್ವೀಕರಿಸುವವರಲ್ಲಿ ಬ್ರಾಹ್ಮಣರೇ ಕೊನೆಯವರಾಗುತ್ತಾರೆ. ಆಗಲಿ! ರೋಮನ್ ಚಕ್ರಾಧಿಪತ್ಯ ಪತನವಾದನಂತರ ಮೊದಲು ಕ್ರಿಶ್ಚಿಯನ್ ಮತ ವನ್ನವಲಂಬಿಸಿದವರು ಯಾರು ಗೊತ್ತೆ? ಕೊನೆಯ ವರ್ಗದ ಜನ. ನಾನೂ ಲೇಖನೋಪದೇಶಗಳ ಮೂಲಕ ನನ್ನ ಜನರನ್ನು ಜಾಗೃತಗೊಳಿಸುತ್ತೇನೆ.

ಅವರಿಗೀಗ ಬೇಕಾಗಿರುವುದು ಆತ್ಮಗೌರವ, ರೊಟ್ಟಿಯಲ್ಲ. ಅವರಲ್ಲಿ ಆತ್ಮ ಗೌರವ ಕುದುರಿತೆಂದರೆ ರೊಟ್ಟಿಯನ್ನೆಂತೋ ಸಂಪಾದಿಸಿಕೊಳ್ಳುತ್ತಾರೆ. ಈ ನಾಡಿನಲ್ಲಿ ಬೌದ್ಧಧರ್ಮ ಚಿರಾಯುವಾಗುತ್ತದೆ." ಕೊನೆಯ ಮಾತು ಅವರ ನಾಲಗೆಯಿಂದ ಹೊರಳುವಾಗ ಕಣ್ಣಲ್ಲಿ ಮಿಂಚು ತುಳುಕಿತು, ಒಮ್ಮೆ ನಿಟ್ಟು ಸಿರೆಳೆದರು. "ನೀವು ಭಿಕ್ಕುವಾಗಿ ಉಪದೇಶ ಮತಾಂತರಗಳಲ್ಲಿ ಮಗ್ನರಾಗ ಲಿರುವುದರಿಂದ ರಾಜಕೀಯ ಬಿಟ್ಟಂತೆ ಲೆಕ್ಕವೆ?" "ಇಲ್ಲ, ಇಲ್ಲ. ರಾಜಕೀಯ ದಿಂದ ನಿರ್ಗಮಿಸುವುದಿಲ್ಲ. ಬೌದ್ಧಧರ್ಮ ನನ್ನ ಉಸಿರಾದರೆ, ಓದು ಬರಹ ಗಳೇ ನನ್ನ ಚೈತನ್ಯ ಶಕ್ತಿಗಳು. ರಾಜಕೀಯವೇ ಅನ್ನ ನೀರುಗಳು. ರಾಜಕೀಯ ಧರ್ಮಗಳು ಪರಸ್ಪರ ಪೂರಕವಾದುವು. ನಾನು ಕಂಡುಕೊಂಡ ರಾಜಕೀಯ ಸೂತ್ರತ್ರಯಗಳಿಗೆ ಪ್ರೇರಣೆ ಬಂದದ್ದು ಫ್ರಾನ್ಸಿನ ಕ್ರಾಂತಿಯಿಂದಲ್ಲ. ಬೌದ್ಧ ಧರ್ಮದಿಂದ. ಆದ್ದರಿಂದ ಅವೆರಡೂ ವಿರೋಧಿಗಳಲ್ಲ. ಮುಂದಿನ ಚುನಾವಣೆ ಗಳೊಳಗಾಗಿ ರಿಪಬ್ಲಿಕನ್ (ಪ್ರಜಾತಂತ್ರ) ಪಕ್ಷ ರಚಿಸುತ್ತೇನೆ. ಸ್ವಾತಂತ್ರ್ಯ, ಸಮಾನತೆ ಮತ್ತು ಸೋದರತ್ವಗಳಲ್ಲಿ ನಂಬಿಕೆಯಿರುವವರೆಲ್ಲ ಆ ಪಕ್ಷ ಸೇರ ಲರ್ಹವಾಗಿರುತ್ತಾರೆ. ಲೋಕಸಭೆಯ ಚುನಾವಣೆಗಳಲ್ಲಿ ನಾನೂ ಸ್ಪರ್ಧಿಸು ತ್ತೇನೆ. ನಡುನಡುವೆ ಪತ್ರಿಕಾ ಪ್ರತಿನಿಧಿಗಳ ಕೀಟಲೆಯಿಂದಾಗಿ ಅವರು ಸಿಡಿ ಮಿಡಿಗೊಳ್ಳುತ್ತಿದ್ದುದುಂಟು.

ಆ ರಾತ್ರಿ ಅವರ ಪ್ರಮುಖ ಶಿಷ್ಯರು ಅಂಬೇಡ್ಕರರ ಹೋಟೆಲಿನಲ್ಲಿ ಸಭೆ ಸೇರಿದರು. ತಮ್ಮ ನಾಯಕರನ್ನು ಮತಾಂತರದಿಂದ ಹಿಮ್ಮೊಗಗೊಳಿ ಸುವುದೇ ಅವರ ಉದ್ದೇಶವಾಗಿತ್ತು. ಅವರೆಲ್ಲರು ನಾಯಕರನ್ನು ಭೇಟಿಮಾಡಿ. ಸಾರ್ವತ್ರಿಕ ಚುನಾವಣೆಗಳು ಮುಗಿಯುವ ತನಕ ಆ ಉತ್ಸವವನ್ನು ಮುಂದೆ ಹಾಕಬಹುದೆಂದು ಸಲಹೆ ನೀಡಿದರು. ಮುಂದೂಡಿಕೆ ಬೇಡವೆಂದು ವಾದಿಸುವ ಶಿಷ್ಯರೂ ಆ ಗುಂಪಿನಲ್ಲಿದ್ದರು. ಅಂಬೇಡ್ಕರರು ಕೋಪೋಗ್ರರಾಗಿ "ಮುಂದಿಟ್ಟ ಹೆಜ್ಜೆಯನ್ನು ಹಿಂಜರಿಸುವುದು ಹೇಡಿತನವಾಗುತ್ತದೆ. ಬೆಳಗಾಗ ಈ ಉತ್ಸವ ನಡೆಯಬೇಕಾಗಿದೆ. ನಡೆಯದಿದ್ದರೆ ಲಕ್ಷ ಲಕ್ಷ ಜನರಿಗೆ ನಿರಾಶೆಯಾಗುತ್ತದೆ. ಇದು ಗೌರವದ ಪ್ರಶ್ನೆಯೂ ಅಹುದು. ನನ್ನ ಈ ಸಂಕಲ್ಪ ನಿನ್ನೆ ಮೊನ್ನೆಯದಲ್ಲ. ನಾನು ಯಾರನ್ನೂ ಬಲಾತ್ಕರಿಸುವುದಿಲ್ಲ. ಇಷ್ಟವುಳ್ಳವರು ನಿಲ್ಲಬಹುದು, ಇಲ್ಲದವರು ಈಗಲೇ ಗಂಟುಮೂಟೆ ಕಟ್ಟಿಕೊಂಡು ಹೊರಡಬಹುದು" ಎಂದು ದನಿ ಏರಿಸಿದರು. ಕುರುಬನ ಕಾಕುವಿಗಂಜಿದ ಕುರಿಮರಿಗಳಂತೆ ಬಂದ ದಾರಿಗೆ ಸುಂಕವಿಲ್ಲವೆಂದು ನರಳುತ್ತ ಶಿಷ್ಯರು ಹೋಟಲಿಂದ ಹೊರಬಿದ್ದರು.

ಮಾರನೆಯ ದಿನ ಅಂಬೇಡ್ಕರರು ಮುಂಜಾನೆ ಐದು ಗಂಟೆಗೆದ್ದು ಪ್ರಾತರ್ವಿಧಿಗಳನ್ನು ಮುಗಿಸಿದರು. ಚಪ್ಪರದ ಸಿದ್ಧತೆಗಳನ್ನು ನೋಡಿಬರು ವಂತೆ ರತ್ತುವಿಗೆ ಹೇಳಿಕಳಿಸಿದರು. ಶ್ರದ್ಧಾನಂದ ಪೇಟೆಯ ಹದಿನಾಲ್ಕು ಎಕರೆ ವಿಸ್ತೀರ್ಣದ ಮೈಳದಲ್ಲಿ ಮಹಾಮಂಟಪ ಸರ್ವಾಲಂಕಾರ ಭೂಷಿತವಾಗಿ ರುಗ್ಗ ರುಗಿಸುತ್ತಿತ್ತು. ಮಂಟಪದ ಉತ್ತರ ಭಾಗದಲ್ಲಿ ಶ್ವೇತವಸ್ತ್ರಾಚ್ಛಾದಿತ ವಾದ ಬಾವುಟಗಳಿಂದ ಸುತ್ತುವರಿದ ವೇದಿಕೆ ನಯನ ಮನೋಹರವಾಗಿತ್ತು. ವೇದಿಕೆಗೆ ಭಿತ್ತಿಸ್ವರೂಪವಾಗಿ ಅದನ್ನು ಪರಿವೇಷ್ಟಿಸಿದ್ದ ಸಾಂಚೀಸ್ತೂಪ ಸದೃಶ ಮಂಟಪ ಮಹಾಮಂಟಪದ ಸೌಂದರ್ಯಕ್ಕೆ ಕಿರೀಟ ಪ್ರಾಯದಂತಿತ್ತು. ವೇದಿಕಾಮಂಟಪದ ಹಿಂಭಾದಲ್ಲಿ ವಿಕಸಿತ ಸಹಸ್ರದಲ, ಪದ್ಮಪೀಠಸ್ಥ ಭಗ ವಾನ್ ಬುದ್ಧದೇವನ ಮಹಾಮೂರ್ತಿಯೂ, ಮಂಟಪದ ಶಿಖರಾಗ್ರದಲ್ಲಿ ವಿದ್ಯುದ್ದೀಪರಂಜಿತವಾದ ಧರ್ಮಚಕ್ರವೂ ಭುವನಾಭಿರಾಮವಾಗಿದ್ದುವು. ಕಂಬಕಂಬಗಳಲ್ಲಿ ರಾರಾಜಿಸುತ್ತಿದ್ದ ಬುದ್ಧನ ಉಪದೇಶ ವಾಣಿಗಳೂ ಮಂತ್ರ ತ್ರಯಗಳೂ ಬೌದ್ಧ ವಾತಾವರಣವನ್ನು ಸೃಷ್ಟಿಸಿದ್ದುವು. ಮರುಹುಟ್ಟುವಡೆ ದಂತೆ ಚೈತನ್ಯೋತ್ಸಾಹಗಳಿಂದ ಪುಟಿಯುತ್ತಿದ್ದ ಜನ ಬೆಳಗಿನಿಂದ ಜಯಕಾರ ಹಾಕುತ್ತ ಮಂಟಪದಲ್ಲಿ ನೆರೆಯುತ್ತಿದ್ದರು. ಕಣ್ಣು ಹರಿದೆಡೆಯೆಲ್ಲ ಶುಭ್ರವಸನ ಧಾರಿಗಳ ಭವ್ಯ ದೃಶ್ಯಗಳು ಗೋಚರಿಸುತ್ತಿದ್ದುವು : ಕಿವಿ ತಿರುಗಿದೆಡೆಯೆಲ್ಲ ಬುದ್ಧ ಬಾಬಾಸಾಹೇಬರ ಸಂಬಂಧವಾದ ಮಾತುಕತೆಗಳೆ ಕೇಳಿಸುತ್ತಿದ್ದುವು. ರತ್ತು ಹಿಂದಿರುಗಿ ವ್ಯವಸ್ಥೆಯ ವರದಿಯೊಪ್ಪಿಸಿದ ಕೂಡಲೇ ಬಾಬಾ ಸಾಹೇಬರು ದೀಕ್ಷಾಭೂಮಿಗೆ ಹೊರಡಲು ಸಿದ್ಧರಾದರು.

ಬಿಳಿಯಕೋಟು ತೊಟ್ಟು, ಶ್ವೇತ ರೇಷ್ಮೆಯ ಧೋತಿಯನ್ನುಟ್ಟು ಬಾಬಾಸಾಹೇಬರು ರತ್ತು ಮಡದಿಯೊಡನೆ 8–30 ಗಂಟೆಗೆ ಸರಿಯಾಗಿ ಕಾರಿನಲ್ಲಿ ಹೋಟಲು ಬಿಟ್ಟರು. ಅವರು ಹೊರಗೆ ಬರುತ್ತಿದ್ದಂತೆ ರಸ್ತೆಯಲ್ಲಿ ಕಾದುಕೊಂಡಿದ್ದ ಜನ 'ಬುದ್ಧ ಭಗವಾನರಿಗೆ ಜಯವಾಗಲಿ, ಬಾಬಾಸಾಹೇಬರಿಗೆ ಜಯವಾಗಲಿ' ಎಂದು ಉನ್ಮಾದಗ್ರಸ್ತರಂತೆ ಘೋಷಣೆಗಳನ್ನು ಕೂಗಿದರು. ಅವರು ಮಹಾಮಂಟಪವನ್ನು ತಲುಪಿದಾಗ ಜನರ ನೂಕುನುಗ್ಗಲು ಹೆಚ್ಚಾಗಿ ವ್ಯವಸ್ಥೆಗಳೆಲ್ಲ ಅಸ್ತವ್ಯಸ್ತವಾದುವು. ಕೆಲವು ಜನ ಎದ್ದಾಳುಗಳ ರಕ್ಷೆಯಲ್ಲಿ ಅವರು ವೇದಿಕೆಯನ್ನೇರಿದರು. ಏರುತ್ತಿದ್ದಂತೆ ಊರಿಗೆ ಊರೇ ಕಿವುಡಾಗುವಂತೆ ಜಯಘೋಷ ಕರತಾಡನಗಳು ಸರ್ವತ್ರ ವ್ಯಾಪಿಸಿದುವು.

ಬಾಬಾಸಾಹೇಬರು ಒಂದು ಕೈಯನ್ನು ರತ್ತುವಿನ ಹೆಗಲಮೇಲಿರಿಸಿ, ಮತ್ತೊಂದು ಕೈಯಲ್ಲಿ ಊರೆಗೋಲು ಹಿಡಿದು, ನಿಂತು, ನೋಟದಿಂದ ಸಭೆಯನ್ನಾಲಿಂಗಿಸಿಕೊಂಡು, ಮುಗುಳುನಗೆಯ ಮಿಂಚಿನಿಂದ ಸಭಿಕರನ್ನು ಸಮ್ಮೋಹಗೊಳಿಸಿದರು. ಫೋಟೋ ಹಿಡಿಯುವವರೂ ಸುದ್ದಿಗಾರರೂ ಕರ್ತವ್ಯಮಗ್ನರಾಗಿದ್ದರು. ವೇದಿಕೆಯ ಮೇಲೆ ಶಾರದಾ, ವಲಿಸಿನ್ಹ, ಸಂಘ ರತ್ನ ಥೇರಾ. ಸವ್ರತಿಸ್ಸ ಥೇರಾ ಮತ್ತು ಪನ್ನಾನಂದ ಥೇರಾ ಮಂಡಿಸಿ ದ್ದರು.

ಅಂಬೇಡ್ಕರರನ್ನು ಕುರಿತ ಮರಾಠೀ ಜಯಗೀತೆಯೊಡನೆ ಸಮಾರಂಭ ಪ್ರಾರಂಭವಾಯಿತು. ನಾಯಕರ ತಂದೆ ರಾಮ್‌ಜೀಯವರ ವಾರ್ಷಿಕ ತಿಥಿಯ ನೆನಪಿಗಾಗಿ ಸಭೆ ಎದ್ದು ನಿಂತು ಒಂದು ನಿಮಿಷ ಮೌನವನ್ನಾಚರಿಸಿತು. ದೀಕ್ಷಾವಿಧಿಯ ಕಾರ್ಯಕ್ರಮ ಪ್ರಕಟವಾಗುತ್ತಿದ್ದಂತೆ ಬಿಂಬಗ್ರಾಹಕರು ವೇದಿಕೆ ಯನ್ನು ಸುತ್ತುಗಟ್ಟಿದರು. ಸಭೆಯ ಸರ್ವೇಂದ್ರಿಯಗಳೊಂದಾದ ಶ್ರವಣೇಂದ್ರಿಯ ವೇದಿಕೆಯಲ್ಲಿ ನಾಟಿತ್ತು. ಅಂಬೇಡ್ಕರರೂ ಅವರ ಧರ್ಮ ಪತ್ನಿಯವರೂ ಬುದ್ಧನ ವಿಗ್ರಹದ ಮುಂದೆ ಪಕ್ಕಕ್ಕಾಗುವಂತೆ ಬಾಗಿ ನಿಂತರು. ಕುಂಕುಮರಾಗರಂಜಿತ ವಸ್ತ್ರಧಾರಿಗಳಾದ, ಎಂಬತ್ತಮೂರು ವರ್ಷ ವಯಸ್ಸಿನ ಕುಶಿನಾರ ನಗರದ ಚಂದ್ರಮಣಿ ಯತಿಗಳು ಇತರ ನಾಲ್ವರು ಭಿಕ್ಕುಗಳೊಡನೆ ಆ ದಂಪತಿಗಳಿಗೆದುರಾಗಿ ಕುಳಿತರು. ಯತಿಗಳು ಮೊದಲು ದಂಪತಿಗಳಿಗೆ 'ಬುದ್ಧಂ ಶರಣಂ ಗಚ್ಛಾಮಿ, ಧರ್ಮಂ ಶರಣಂ ಗಚ್ಛಾಮಿ, ಸಂಘ ಶರಣಂ ಗಚ್ಛಾಮಿ' ಎಂಬ ಮೂರು ಶರಣುಗಳನ್ನು ಉಪದೇಶಿಸಿದರು ; ಅನಂತರ ಪಂಚಶೀಲಗಳನ್ನು ಬೋಧಿಸಿದರು. ಅವರು ಪಾಳಿಯಲ್ಲಿ ಬೋಧಿಸಿದ ಮಂತ್ರ ಗಳನ್ನಿವರು ಮರಾಠಿಯಲ್ಲಿ ಪಠಿಸಿದರು. ಕೊನೆಯಲ್ಲಿ ದಂಪತಿಗಳು ಮೂರುಸಾರಿ ಬುದ್ಧನಿಗೆ ನಮಸ್ಕರಿಸಿ, ಶ್ವೇತಕಮಲ ಪುಷ್ಪಗಳನ್ನು ನಿವೇದಿಸಿದರು. ಅಂಬೇ ಡ್ಕರರು ಬೌದ್ಧರಾದರೆಂದು ಯತಿಗಳು ಘೋಷಿಸಿದಕೂಡಲೇ ಸಭೆ ಜಯ ಘೋಷ ಮಾಡಿತು. ಅರ್ಧ ಗಂಟೆಯಲ್ಲಿ ಸಮಾರಂಭ ಮುಕ್ತಾಯಗೊಂಡಿತು.

ವಲಿಸಿನ್ಹರು ದಂಪತಿಗಳಿಗೆ ಬುದ್ಧನ ವಿಗ್ರಹವನ್ನು ಕಾಣಿಕೆಯಾಗಿ ನೀಡಿದರು. ಆಪ್ತಶಿಷ್ಯರು ತಮ್ಮ ನಾಯಕರಿಗೆ ಪುಷ್ಪಮಾಲೆಯರ್ಪಿಸಿದರು. "ಕ್ರೌರ್ಯ ಅಸಮಾನತೆಗಳಿಗೆ ಹೆಸರಾಗಿದ್ದ ನನ್ನ ಪ್ರಾಚೀನ ಮತದಿಂದಿಂದು ಮುಕ್ತನಾಗಿದ್ದೇನೆ. ನನಗೆ ಪುನರ್ಜನ್ಮ ಪ್ರಾಪ್ತವಾಗಿದೆ. ಅವತಾರ ತತ್ವದಲ್ಲಿ

ನನಗೆ ವಿಶ್ವಾಸವಿಲ್ಲ. ಬುದ್ಧ ವಿಷ್ಣುವಿನ ಅವತಾರವೆನ್ನುವುದು ತಪ್ಪು. ಆ ಮಾತಿನ ಹಿನ್ನೆಲೆಯಲ್ಲಿ ಹಿಸುಣತನವಿದೆ, ಕುಚೇಷ್ಟೆಯಿದೆ. ಇನ್ನು ಮುಂದೆ ನಾನು ಶ್ರಾದ್ಧವನ್ನಾಚರಿಸುವುದಿಲ್ಲ. ಬೌದ್ಧ ಧರ್ಮವೊಂದೇ ಸತ್ಯವಾದದ್ದು. ಬುದ್ಧನ ಅಷ್ಟಾಂಗ ಮಾರ್ಗಗಳನ್ನು ಚಾಚೂ ತಪ್ಪದೆ ಆಚರಿಸುತ್ತೇನೆ. ಜ್ಞಾನಕರುಣೆ ಮತ್ತು ಸಮ್ಯಕ್ ಚಾರಿತ್ರ್ಯಗಳ ಬೆಳಕಿನಲ್ಲಿ ನನ್ನ ಬದುಕನ್ನು ಬೆಳಗುತ್ತೇನೆ" ಎಂದು ಅಂಬೇಡ್ಕರರು ಸದ್ಗದಿತ ಭಾವದಿಂದ ನುಡಿಯುವಾಗ ಮೌನಸ್ಥಿತ ಸಭೆಯಲ್ಲಿ ಪುಳಕ ಹರಿದಂತಾಯಿತು. ತಾವೇ ರಚಿಸಿದ್ದ ದ್ವಾವಿಂಶತಿ ಪ್ರತಿಜ್ಞೆಗಳನ್ನು ತಾರಕಂಠದಿಂದ ಉಚ್ಚರಿಸುವಾಗ ಒಮ್ಮೊಮ್ಮೆ ಅವರ ಗಂಟಲು ಕಟ್ಟುತ್ತಿತ್ತು. "ನಾನು ಹಿಂದೂಧರ್ಮವನ್ನು ತ್ಯಜಿಸುತ್ತೇನೆ, ಹಿಂದೂ ದೇವತೆಗಳನ್ನು ನಿರಾಕರಿಸುತ್ತೇನೆ" ಎನ್ನುವಾಗ ಉಸಿರು ಕಟ್ಟಿದಂತಾಗಿ, ಕಣ್ಣಲ್ಲಿ ನೀರು ಬಟ್ಟಾಡುತ್ತಿದ್ದುವು. "ಇನ್ನು ಮುಂದೆ ಹಿಂದೂಧರ್ಮದ ಸೋಂಕು ನನಗೆ ತಟ್ಟಲಾರದು. ಅದರ ಕಟ್ಟು ಕಟ್ಟಳೆಗಳಿಗೂ ನನಗೂ ಸಂಬಂಧವಿಲ್ಲ. ನಾನು ಪೂರ್ಣ ಸ್ವತಂತ್ರ. ಈ ಕ್ಷಣದಿಂದ ನಾನು ಬುದ್ಧ ಧರ್ಮವನ್ನೂ ಸಮಾನತಾ ಸಂದೇಶವನ್ನೂ ಹಿಂದುಳಿದವರಿಗೆ ಬೋಧಿಸುತ್ತೇನೆ. ಈಗ ಬೌದ್ಧಮತ ಸೇರಬೇಕೆಂದಿಚ್ಛೆಯುಳ್ಳವರು ಮುಂದೆ ಬರಲಿ" ಎಂದವರು ಘೋಷಿಸಿದರು. "ಬಾಬಾ ಸಾಹೇಬರಿಗೆ ಜಯವಾಗಲಿ" ಎಂದು ಜಯನಿನಾದ ಮಾಡುತ್ತ ಇಡೀ ಸಭೆಯೆ ಮೇಲೆದ್ದಿತು. ಅಂಬೇಡ್ಕರರು ಶರಣುಮಂತ್ರ, ಪಂಚಶೀಲ ಮತ್ತು ಪ್ರತಿಜ್ಞಾ ವಿಧಿಗಳ ಮೂಲಕ ಇಡೀ ಸಭೆಗೆ ದೀಕ್ಷೆ ಕೊಟ್ಟರು. ಸುಮಾರು ಮೂರು ಲಕ್ಷ ಜನ ಏಕಕಾಲದಲ್ಲಿ ಬೌದ್ಧಧರ್ಮ ಸ್ವೀಕರಿಸಿದರು. ಅಂಬೇಡ್ಕರರ ಜತೆಯಲ್ಲಿ ಬೌದ್ಧ ದೀಕ್ಷೆ ಪಡೆದ ಮುಖ್ಯರಲ್ಲಿ ನಾಗಪುರ ಹೈಕೋರ್ಟಿನ ನಿವೃತ್ತ ಶ್ರೇಷ್ಠ ನ್ಯಾಯಮೂರ್ತಿಗಳಾದ ನಿಯೋಗಿಯವರೊಬ್ಬರು. ಸಮಾರಂಭ 10–30 ಘಂಟೆಗೆ ಮುಕ್ತಾಯಗೊಂಡಿತ್ತು.

ಮಾರನೆಯ ದಿನ ಅದೇ ಮಂಟಪದಲ್ಲಿ ಬಾಬಾ ಸಾಹೇಬರು ಸಾವಿರಾರು ಜನರಿಗೆ ದೀಕ್ಷೆ ಕೊಟ್ಟರು. ಹಿಂದುವಾಗಿ ಹುಟ್ಟಿದರೂ, ಹಿಂದುವಾಗಿ ಸಾಯುವುದಿಲ್ಲವೆಂದು ಇಪ್ಪತ್ತು ವರ್ಷಗಳ ಹಿಂದೆ ತಾವು ಮಾಡಿದ್ದ ಪ್ರತಿಜ್ಞೆ ನೆರವೇರಿತೆಂದೂ, ಹಿಂದೂಧರ್ಮದ ನರಕದಿಂದ ಹೊರಬಂದದ್ದರಿಂದ ತಮಗೆ ತೃಪ್ತಿಯಾಯಿತೆಂದೂ, ನೂತನ ಮತಾಲಿಂಗನ ಕಾರ್ಯ ಭಾವೋದ್ರಿಕ್ತ ಸಮಯದ ನಿರ್ಧಾರವಾಗಿರದೆ ದೀರ್ಘಾಲೋಚನೆಯ ಪಕ್ವ

ಫಲವೆಂದೂ ಅವರು ತುಂಬಿದ ಸಭೆಗೆ ತಿಳಿಸಿದರು. "ಮಾರ್ಕ್ಸ್ ಮಹಾಶಯನ ತತ್ತ್ವದರ್ಶನ ಮನುಷ್ಯನ ಸರ್ವಾವಶ್ಯಕತೆಗಳನ್ನು ಪೂರೈಸುವುದಿಲ್ಲ. ಅವನ ಬದುಕಿಗೆ ಹಿಟ್ಟೊಂದೇ ಸಾಲದು. ಹೊಟ್ಟೆಗಿಂತ ಮಿಗಿಲಾಗಿ ಅವನಿಗೆ ಮನಸ್ಸು ಇದೆ. ಮನಸ್ಸಿಗೆ ಆಹಾರ ಬೇಕು. ಆಲೋಚನೆ ವಿವೇಚನೆ ಧ್ಯಾನಗಳೇ ಆ ಆಹಾರ. ಧರ್ಮ ಆ ಆಹಾರವನ್ನೊದಗಿಸುತ್ತದೆ. ಅದು ಅವನಲ್ಲಿ ನಂಬಿಕೆ ಮೂಡಿಸುತ್ತದೆ. ಕ್ರಿಯೆಯನ್ನು ಪ್ರಚೋದಿಸುತ್ತದೆ. ಹಿಂದೂ ಧರ್ಮದಿಂದ ಕಿಂಚಿತ್ತೂ ಸ್ಫೂರ್ತಿ ದೊರೆಯಲಿಲ್ಲವಾಗಿ, ನಾನು ಬುದ್ಧ ಧರ್ಮವನ್ನಪ್ಪಿಕೊಳ್ಳಬೇಕಾಯಿತು. ಅದು ಯಾವ ಕಾಲದಲ್ಲಾದರೂ, ಯಾವ ದೇಶದಲ್ಲಾದರೂ ವ್ಯಾಪಕವಾಗಿ ಸರ್ವಜನೋಪಯುಕ್ತವಾಗಿ ವಿಕಾಸಗೊಳ್ಳಬಲ್ಲ ಸರ್ವೋದಯ ಧರ್ಮ. ಅಧ್ಯಾತ್ಮ ಸಾಧನೆಗೆ ನೆರವಾಗದ ಧರ್ಮ ವರ್ಜ್ಯ. ಹಿಂದೂ ಧರ್ಮ ನಿಮ್ನವರ್ಗೀಯರನ್ನು ನರಕಯಾತನೆಗೆ ಗುರಿಮಾಡದೆ ಶಸ್ತ್ರ ನಿಪುಣರನ್ನಾಗಿ ಮಾಡಿದ್ದರೆ, ಭಾರತ ಗುಲಾಮಗಿರಿಯಲ್ಲಿ ನರಳಬೇಕಾಗಿರಲಿಲ್ಲ. ಬುದ್ಧನ ಉಪದೇಶವನ್ನು ಜೀವನದಲ್ಲಿ ಅನುಷ್ಠಾನಗೊಳಿಸಿದ್ದಾದರೆ ಯಶಸ್ಸು ಕಟ್ಟಿಟ್ಟ ಬುತ್ತಿ" ಎಂದು ಕೇಳುಗರ ನರನಾಡಿಗಳಲ್ಲಿ ಮಿಂಚು ಸಂಚರಿಸುವಂತೆ ಅವರು ಮಾತಾಡಿದರು.

ಅವರು ನಾಗಪುರದಲ್ಲಿದ್ದಾಗಲೇ ಹೋಟಲಿನಲ್ಲಿ ಪಕ್ಷದ ಸಭೆ ಕರೆದರು. ರಾಜಕೀಯಕ್ಕಿಂತ ಮಿಗಿಲಾಗಿ ಧರ್ಮದ ಕಡೆ ಆಸಕ್ತಿ ವಹಿಸಬೇಕೆಂದು ಅವರು ತಮ್ಮ ಸಹೋದ್ಯೋಗಿಗಳಿಗೆ ವಿವೇಕ ಹೇಳಿದರು. "ನಿಮ್ನಜನ ಸಂಯುಕ್ತ ಸಂಸ್ಥೆ ದಲಿತ ಜನರಲ್ಲಿ ಆತ್ಮ ಗೌರವವನ್ನು ಮೂಡಿಸಿದ್ದು ನಿಜ ; ಜತೆಗೆ ಅವರ ಮತ್ತು ಇತರ ಕೋಮುಗಳ ನಡುವೆ ದೊಡ್ಡ ಗೋಡೆಯನ್ನು ಸಹ ಎಬ್ಬಿಸಿತ್ತು. ಅದರ ಪರಿಣಾಮ ಏನಾಯಿತು ಗೊತ್ತೆ? ಬೇರೆ ಜನ ನಿಮ್ನವರ್ಗೀಯ ಅಭ್ಯರ್ಥಿಗಳಿಗೆ ಓಟು ಕೊಡಲಿಲ್ಲ ; ಇವರು ಇತರ ಪಕ್ಷಗಳ ಅಭ್ಯರ್ಥಿಗಳಿಗೆ ಮತ ನೀಡಲಿಲ್ಲ. ನಮ್ಮ ಸಂಕಟದಲ್ಲಿ ಸಹಾನುಭೂತಿ ತೋರುವ ಜನರನ್ನು, ಇತರ ಕೋಮುಗಳ ನಾಯಕರನ್ನು ಸೇರಿಸಿಕೊಂಡು ಹೊಸ ಪಕ್ಷವನ್ನು ರಚಿಸಬೇಕಾಗಿದೆ. ನೀವೀಗ ಸಂಕುಚಿತ ಮನೋಭಾವನೆಯನ್ನು ತೊರೆದು, ನಾಡಿನ ಕ್ಷೇಮಾಭ್ಯುದಯಗಳಿಗಾಗಿ ಶ್ರಮಿಸಬೇಕಾಗಿದೆ" ಎಂದವರು ನಿಮ್ನ ಜನಸೋದರರಿಗೆ ಕರೆಕೊಟ್ಟರು. ಕೇವಲ ಲೌಕಿಕ ದೃಷ್ಟಿಯಿಂದ ಮಾತ್ರವಲ್ಲ ಆಧ್ಯಾತ್ಮಿಕ ದೃಷ್ಟಿಯಿಂದಲೂ ಅವರು ಮತಾಂತರ ಗೊಂಡಿದ್ದರು.

ಅವರ ಮನಃ ಪರಿವರ್ತನೆಗದು ದಾರಿ ಮಾಡಿಕೊಟ್ಟಿತು. ಆದ್ದರಿಂದಲೇ ಜಾತ್ಯತೀತವಾದ ರಾಜಕೀಯ ಪಕ್ಷವನ್ನು ಕಟ್ಟಲು ಅವರು ನಿರ್ಧರಿಸಿದ್ದರು.

ಪುರಸಭೆಯಿಂದ ಬಿನ್ನವತ್ತಳೆಯನ್ನು ಸ್ವೀಕರಿಸಿದ್ದೇ ನಾಗಪುರದಲ್ಲಿ ಅಂಬೇಡ್ಕರರ ಕೊಟ್ಟ ಕೊನೆಯ ಕಾರ್ಯಕ್ರಮವಾಗಿತ್ತು. ಸಮಾಜ ಸುಧಾರಕರೆಂದು ತತ್ತ್ವಜ್ಞಾನಿಯೆಂದು, ಮಹಾ ಸಂವಿಧಾನಜ್ಞರೆಂದು ನಗರಸಭೆ ಅವರನ್ನು ಪುರಸ್ಕರಿಸಿತು. ಅವರು ತಮ್ಮ ಉತ್ತರದಲ್ಲಿ "ಕಾಂಗ್ರೆಸ್ಸು ರಾಜಕೀಯದಲ್ಲಿ ದೊಡ್ಡ ಗೊಂದಲವನ್ನುಂಟುಮಾಡಿದೆ. ಆಡಳಿತ ಪಕ್ಷ ದೀರ್ಘಕಾಲ ಅಧಿಕಾರದಲ್ಲುಳಿದದ್ದಾದರೆ ದೇಶ ಅವನತಿ ಹೊಂದುತ್ತದೆ. ವಿದ್ಯಾವಂತ ಮಹಿಳೆಯರು ಸೀಟುಗಳಿಗಾಗಿ ಬೀದಿ ಬೀದಿಗಳಲ್ಲಿ ಪರಡಾಡುತ್ತಿರುವುದೂ, ಪಥಭ್ರಷ್ಟರಾಗುತ್ತಿರುವುದೂ ದುಃಖಕಾರಕ ಸಂಗತಿಯಾಗಿದೆ." ಎಂದು ನಾಡಿನ ರಾಜಕೀಯ ಪರಿಸ್ಥಿತಿಯ ಬಗ್ಗೆ ಅನುತಾಪ ವ್ಯಕ್ತಪಡಿಸಿದರು. 16ನೆಯ ತಾರೀಖು ಚಾಂದ ಪಟ್ಟಣದಲ್ಲಿ ಮತ್ತೊಂದು ಮತಾಂತರ ಸಮಾರಂಭವನ್ನು ಪೂರೈಸಿ, ದೆಹಲಿಗೆ ಹಿಂದಿರುಗಿದರು. ದೇಹದಲ್ಲಿ ನಿಶ್ಶಕ್ತಿಯಿದ್ದರೂ, ದಣಿದಂತೆ ಕಾಣುತ್ತಿದ್ದರೂ, ಕಣ್ಣು ಅನಿರ್ವಚನೀಯವಾದ ಕಾಂತಿಯಿಂದ ಮಿನುಗುತ್ತಿದ್ದುವು. ಆಗಾಗ್ಗೆ ಬುದ್ಧ ಸ್ತೋತ್ರಗಳನ್ನು ಕಬೀರನ ಹಾಡುಗಳನ್ನೂ ಗುನುಗಿಕೊಳ್ಳುತ್ತಿದ್ದರು. ಅವರ ಮನಸ್ಸು ನಿರಾಳವಾಗಿತೆನ್ನುವುದಕ್ಕೆ ಆ ಗುನುಗೇ ನಿದರ್ಶನವಾಗಿತ್ತು.

ಅವರು ಊರಿಗೆ ಹಿಂದಿರುಗಿದ ಸುದ್ದಿ ತಿಳಿದ ಕೂಡಲೇ ಅನೇಕ ಗೆಳೆಯರೂ ಹಿತಚಿಂತಕರೂ ಅವರಿಗೆ ಗೌರವ ಸೂಚಿಸುವ ಸಲುವಾಗಿ ತಂಡ ತಂಡವಾಗಿ ಬರುತ್ತಿದ್ದರು. ಕೆಲವರು ಹೂಹಣ್ಣುಗಳನ್ನು ನಿವೇದಿಸಿ, ಅವರಿಗೆ ಬಾಗಿ ನಮಸ್ಕರಿಸುತ್ತಿದ್ದರು. ಅಂಬೇಡ್ಕರರು ಭಾವೋದ್ವಿಗ್ನರಾಗಿ ನಾಗಪುರದ ಸಮಾರಂಭವನ್ನು ಸವಿವರವಾಗಿ ಕಣ್ಣಿಗೆ ಕಟ್ಟಿದಂತೆ ಬಣ್ಣಿಸುತ್ತಿದ್ದರು. ಸಮಾರಂಭದ ಚಿತ್ರಗಳನ್ನವರಿಗೆ ತೋರಿಸಿ ಆನಂದಿಸುತ್ತಿದ್ದರು. ದೆಹಲಿ, ಉತ್ತರಪ್ರದೇಶ, ಪಂಜಾಬು, ಮಹಾರಾಷ್ಟ್ರ, ಮೊದಲಾದ ರಾಜ್ಯಗಳಿಗೆ ಪ್ರವಾಸ ಹೊರಟು, ಅಲ್ಲೆಲ್ಲ ಮತಾಂತರ ಕಾರ್ಯವನ್ನು ಮುಂದುವರಿಸುವ ಮೂಲಕ, ಬುದ್ಧದೇವನ ಉಪದೇಶ ಜ್ಯೋತಿಯನ್ನು ನಾಡಿನ ಮೂಲೆ ಮೂಲೆಗಳಿಗೊಯ್ಯುವುದಾಗಿ ನುಡಿಯುವಾಗ ಅವರ ಮುಖದಲ್ಲಿ ಕಾಂತಿ ಮುಕ್ಕುಳಿಸುತ್ತಿತ್ತು, ಮೈಯಲ್ಲಿ ನವಿರೇಳುತ್ತಿತ್ತು. ಹಲವು ದಿನಗಳ ತನಕ

ಅಂಬೇಡ್ಕರರು ಸಮಾರಂಭದ ದೃಶ್ಯಗಳನ್ನು ಚಿತ್ರಿಸಿಕೊಳ್ಳುತ್ತ ಬುದ್ಧ ಭಗವಾನನನ್ನು ಸ್ಮರಿಸಿಕೊಳ್ಳುತ್ತ. ಕೃತಕೃತ್ಯತೆ ಪಡೆದವರಂತೆ, ಪ್ರಸನ್ನವಾಗಿದ್ದರು.

ಅವರ ಆರೋಗ್ಯ ಸುಧಾರಿಸಿರಲಿಲ್ಲವಾದರೂ, ಖಟ್ಮಂಡುವಿನಲ್ಲಿ ನಡೆಯುತ್ತಿದ್ದ ಅಂತರರಾಷ್ಟ್ರೀಯ ಬೌದ್ಧ ಸಮ್ಮೇಳನದಲ್ಲಿ ಪಾಲ್ಗೊಳ್ಳಬೇಕೆಂದು ಅವರ ಗೆಳೆಯರು ಒತ್ತಾಯಿಸುತ್ತಿದ್ದರು. ಕಲ್ಕತ್ತೆಯ ಎಂ. ಜ್ಯೋತಿಯವರು ಅವರ ತಂಗಣೆಗೆ ಬೇಕಾದ ಅನುಕೂಲಗಳನ್ನು ವ್ಯವಸ್ಥೆಗೊಳಿಸುವ ಜವಾಬ್ದಾರಿಯನ್ನು ಹೊತ್ತುಕೊಂಡಿದ್ದರು. ಮುಂಬಯಿಯ ವೈದ್ಯ ಮಾವಳಂಕರರು ಅಂಬೇಡ್ಕರರ ಜತೆಯಲ್ಲಿರುವುದೆಂದು ಗೊತ್ತಾಯಿತು. ಖಟ್ಮಂಡುವಿಗೆ ಹೊರಡುವ ಮುನ್ನ ಹಣಕಾಸಿಗೆ ಸಂಬಂಧಿಸಿದ ಕೋರ್ಟು ವ್ಯವಹಾರದ ಕಡೆಗೆ ಗಮನ ಹರಿಸಬೇಕಾಯಿತು. ರಾಜಗೃಹದ ಬಡಾವಣೆಗಾಗಿ ಕಂತ್ರಾಟುದಾರನಿಗೆ ಬಾಕಿ ಸಂದಾಯವಾಗಿರಲಿಲ್ಲವಾಗಿ ಅವನು ಹೈಕೋರ್ಟಿನಲ್ಲಿ ದಾವೆ ಹೂಡಿದ್ದ. ಅದಕ್ಕೆ ಸಂಬಂಧಿಸಿದಂತೆ ಅಂಬೇಡ್ಕರರು ನಲವತ್ತು ಸಾವಿರ ರೂಪಾಯಿ ಮೊತ್ತವನ್ನು ಹೈಕೋರ್ಟಿಗೆ ಕಟ್ಟಬೇಕಾಗಿತ್ತು. ದೆಹಲಿಯ ಕೆಲವು ಗೆಳೆಯರಿಂದ ಆ ಹಣ ಕೂಡಿಸಿ. ಮುಂಬಯಿಗೆ ಕಳಿಸಿದನಂತರ ಅವರು ಖಟ್ಮಂಡುವಿಗೆ ಹೊರಟರು. ಪ್ರವಾಸ ಸಮಯದಲ್ಲಿ ವ್ಯಾಸಂಗಗಳಿಗಷ್ಟು ಕೆಲಸವಿರಲೆಂದು ಅರ್ಧಂಬರ್ಧವಾಗಿದ್ದ ಕೆಲವು ಹಸ್ತಪ್ರತಿಗಳನ್ನು ಕೈಚೀಲದಲ್ಲಿ ಜೋಪಾನವಾಗಿರಿಸಿಕೊಂಡರು.

15–11–1956 ರಂದು ನೇಪಾಳದ ದೊರೆ ಮಹೇಂದ್ರರು ಸಮ್ಮೇಲನವನ್ನು ಉದ್ಘಾಟಿಸಿದರು. ಆ ಸಮಯದಲ್ಲಿ ಶಂಕರಾಚಾರ್ಯರ ಜೀವನವನ್ನಾಧರಿಸಿದ ಚಿತ್ರವೊಂದು ನಗರದ ಸಿನಿಮಾ ಮಂದಿರವೊಂದರಲ್ಲಿ ನಡೆಯುತ್ತಿತ್ತು. ಬೌದ್ಧಧರ್ಮಕ್ಕೆ ವಿರೋಧವಾದ ಕೆಲವು ದೃಶ್ಯಗಳು ಅದರಲ್ಲಿ ಸೇರ್ಪಡೆಗೊಂಡಿದ್ದುವು. ಸಮ್ಮೇಲನಕ್ಕೆ ಆಗಮಿಸಿದ್ದ ಅತಿಥಿಗಳ ಮನಸ್ಸಿಗೆ ನೋವಾಗಬಾರದೆಂದು ಆ ಚಿತ್ರ ಪ್ರದರ್ಶನವನ್ನು ಕೆಲವು ಕಾಲ ನಿಷೇಧಿಸಲಾಗಿತ್ತು. ಆದರೆ ಅಂಬೇಡ್ಕರರಿದ್ದುದರಿಂದಲೋ ಏನೋ ಪಶುಪತಿನಾಥ ದೇವಾಲಯದಲ್ಲಿ ಬೌದ್ಧರಿಗೆ ಪ್ರವೇಶವಿಲ್ಲವೆಂದು ಪೂಜಾರಿಗಳು ಪ್ರತಿಬಂಧಕಾಜ್ಞೆ ಹೊರಡಿಸಿದರು. ಉದ್ಘಾಟನೆಯ ನಂತರ ಕಾರ್ಯಕರ್ತರ ಅಪೇಕ್ಷೆಯಂತೆ ಅಂಬೇಡ್ಕರರು ಪುಟ್ಟ ಭಾಷಣ ಮಾಡಿದರು. ಸಾಮಾಜಿಕ ಮಹತ್ವದ ಕಾರಣದಿಂದ ಬೌದ್ಧಧರ್ಮ ಅತ್ಯಂತ ಶ್ರೇಷ್ಠವಾದದ್ದೆಂದು ಘೋಷಿಸಿದರು. ಜಗ

ತ್ತಿನ ನಾನಾ ಭಾಗಗಳಿಂದ ಬಂದಿದ್ದ ಬೌದ್ಧಮತೀಯರು ಅವರನ್ನು ಪರಿಚಯ ಮಾಡಿಕೊಳ್ಳಲು, ಅವರೊಡನೆ ಮಾತುಕತೆ ನಡೆಸಲು ಹಾತೊರೆಯುತ್ತಿದ್ದರು. ಕೋಣೆಯಲ್ಲಿದ್ದಾಗ ಯಾವಾಗಲೂ ಹತ್ತಾರು ಜನ ಸುತ್ತುವರಿದಿರುತ್ತಿದ್ದರು : ಸಮ್ಮೇಲನದ ವಿರಾಮಕಾಲದಲ್ಲಿ ಅವರ ಸುತ್ತ ದೊಡ್ಡ ಗುಂಪು ನೆರೆದಿರುತ್ತಿತ್ತು. ಅವರೆಲ್ಲರು ಅಂಬೇಡ್ಕರರಲ್ಲಿ ತಮ್ಮ ಧಾರ್ಮಿಕ ನಾಯಕನನ್ನು ಹೆಮ್ಮೆಯಿಂದ ಗುರುತಿಸಿದರು : ಅವರ ನೇತೃತ್ವದಲ್ಲಿ ಬೌದ್ಧಧರ್ಮ ವಿಶ್ವ ವಿಶಾಲವಾಗುತ್ತದೆಂದೂ, ನೂತನ ಕ್ರಾಂತಿ ಸ್ಫೋಟಗೊಳ್ಳುತ್ತದೆಂದೂ ಅವರು ಹಂಬಲಿಸಿದರು.

ಪ್ರತಿನಿಧಿಗಳ ಕೋರಿಕೆಯನ್ನು ಪೂರೈಸುವ ಸಲುವಾಗಿ 'ಬುದ್ಧ ಮತ್ತು ಕಾರ್ಲ್‌ಮಾರ್ಕ್ಸ'ರನ್ನು ಕುರಿತು ಭಾಷಣ ಮಾಡುವಂತೆ ಸಮ್ಮೇಲನಾಧ್ಯಕ್ಷರಾದ ಮಳಾಲಶೇಖರ್ ಅವರು ಅಂಬೇಡ್ಕರರನ್ನು ಕೇಳಿಕೊಂಡರು. ಮಾರ್ಕ್ಸನೇ ಪ್ರವಾದಿಯೆಂಬ ,ಪೂಜಾರ್ಹನೆಂಬ ಭಾವನೆ ಬೌದ್ಧರಾಷ್ಟ್ರಗಳ ತರುಣರಲ್ಲಿ ಮೂಡುತ್ತಿರುವ ಬಗ್ಗೆ ಅವರು ಕಳವಳವನ್ನು ವ್ಯಕ್ತಪಡಿಸಿದರು. "ಬುದ್ಧ ಮಾರ್ಕ್ಸರ ಗುರಿ ಒಂದೆ. ಸುಲಿಗೆ ಹಿಂಸೆ ಗುಲಾಮತನಗಳು ಶ್ರೀಮಂತಿಕೆಯ ಫಲವಾಗಿ ಮೈದೋರುವ ಕೆಡಕುಗಳೆಂದೂ, ಖಾಸಗಿ ಸಂಪತ್ತು ದುಃಖಮೂಲವೆಂದೂ ಮಾರ್ಕ್ಸ ಹೇಳುತ್ತಾನೆ. ಬುದ್ಧನೂ ಆಸ್ತಿ ಸಂಗ್ರಹ ವಿರೋಧಿ. ಧ್ಯೇಯ ಸಾಧನೆಯ ವಿಚಾರದಲ್ಲಿ ಅವರಿಬ್ಬರ ಅಭಿಪ್ರಾಯ ಪರಸ್ಪರ ಭಿನ್ನವಾಗುತ್ತವೆ. ಒಬ್ಬನದು ಹಿಂಸಾಮಾರ್ಗವಾದರೆ ಮತ್ತೊಬ್ಬನದು ಅಹಿಂಸಾಮಾರ್ಗ. ಒಬ್ಬನ ದಾರಿ ಬಹುಬೇಗನೆ ಗುರಿಮುಟ್ಟಿಸುವುದಾದರೆ, ಮತ್ತೊಬ್ಬನದು ನಿಧಾನವಾಗುತ್ತದೆ. ಹಿಂಸಾಮಾರ್ಗದಿಂದ ಪಡೆಯುವ ಫಲ ಶಾಶ್ವತವಾದದ್ದಲ್ಲ. ರಷ್ಯಾದ ಸರ್ವಾಧಿಕಾರಿ ಪ್ರಭುತ್ವ ಆಯತಪ್ಪಿದ್ದಾದರೆ ರಕ್ತಪಾತ ಖಂಡಿತ ; ಕಮ್ಯೂನಿಸಮ್ ಸಹ ವಿನಾಶವಾಗುತ್ತದೆ. ಅಹಿಂಸೆ ಪ್ರೇಮಗಳ ಮೂಲಕ ಸಾಧಿಸುವ ಫಲ ಚಿರಶಾಂತಿಗೆ ಬುನಾದಿಯಾಗುತ್ತದೆ. ಒಂದರಿಂದ ಮನಸ್ಸಂಸ್ಕಾರ ಒದಗುವುದಾದರೆ ಮತ್ತೊಂದರಿಂದ ಮನೋದಾಸ್ಯ ಪ್ರಾಪ್ತವಾಗುತ್ತದೆ. ದೇವರು ಬೈಬಲ್ಲುಗಳಿಲ್ಲದೆ ಜಗತ್ತಿನಲ್ಲಿ ನ್ಯಾಯಯುತವಾಗಿ ಆಡಳಿತ ನಡಸಲಾಗದೆಂದು ಜಾರ್ಜ್ ವಾಷಿಂಗ್‌ಟನ್ ನುಡಿದ. ಅಂತೆಯೇ ಬುದ್ಧ ಮತ್ತು ಬೌದ್ಧಧರ್ಮಗಳಿಲ್ಲದೆ ಮಾನವ ಸತ್ಯಶಾಂತಿಗಳಿಂದ ಬಾಳಲಾಗದು." ಸಮ್ಮೇಲನಾಧ್ಯಕ್ಷರು ಅಂಬೇಡ್ಕರರ ತೌಲನಿಕ ವಿಶ್ಲೇಷಣೆಯನ್ನು ಮನಸಾರೆ ಹೊಗಳಿದರು.

ಪ್ರತಿ ಪ್ರಯಾಣದಲ್ಲಿ ಅಂಬೇಡ್ಕರರು ವಾರಣಾಸಿಯಲ್ಲಿ ನಿಂತು, ಬನಾರಸ್ ವಿಶ್ವವಿದ್ಯಾಲಯ ಮತ್ತು ಕಾಶಿವಿದ್ಯಾಪೀಠಗಳಲ್ಲಿ ಭಾಷಣದ ಲಹರಿ ಹರಿಸಿದರು. ಅವರ ಭಾಷಣ ಶಂಕರಾಚಾರ್ಯರಿಗೆ ಸವಾಲಾಗಿತ್ತು. ಶಂಕರಾಚಾರ್ಯರೂ ಹಿಂದೂ ಧರ್ಮವನ್ನೇನೊ ಪುನರುಜ್ಜೀವಿಸಿದರೋ, ಅಂತೆಯೇ ತಾವು ಬೌದ್ಧ ಧರ್ಮವನ್ನು ನಾಡಿನಲ್ಲೆಲ್ಲ ಮೆರೆಸುವುದಾಗಿ ಘೋಷಿಸಿದರು. "ಬ್ರಹ್ಮ ಸರ್ವವ್ಯಾಪಿಯೆಂದೂ, ಬ್ರಹ್ಮಸತ್ಯ ಜಗನ್ಮಿಥ್ಯೆಯೆಂದೂ ಶಂಕರಾಚಾರ್ಯರು ಬೋಧಿಸಿದರಷ್ಟೆ. ಅವರ ಬೋಧನೆಯ ಪ್ರಕಾರ ಬ್ರಾಹ್ಮಣ ಮತ್ತು ಅಸ್ಪೃಶ್ಯರಲ್ಲಿ ಭೇದವಿಲ್ಲವಷ್ಟೆ. ಶಂಕರರು ಆ ಸಿದ್ಧಾಂತವನ್ನು ತಾತ್ವಿಕ ಮಟ್ಟದಲ್ಲುಳಿಸಿದರೆ ಹೊರತು ಸಾಮಾಜಿಕ ಸ್ತರಕ್ಕನ್ವಯಿಸಲಿಲ್ಲ. ಅವರು ಸಾಮಾಜಿಕ ಸಮಾನತೆಯನ್ನೆತ್ತಿ ಹಿಡಿದಿದ್ದರೆ ಅವರು ಸರ್ವಕಾಲಕ್ಕೂ ಜಗನ್ಮಾನ್ಯರಾಗುತ್ತಿದ್ದರು. ಜಗತ್ತು ಮಾಯೆಯೆಂಬ ಅವರ ವಾದವೂ ಗಟ್ಟಿ ನೆಲದ ಮೇಲೆ ನಿಂತಿಲ್ಲ. ಅಸಮಾನತೆಯನ್ನು ಪ್ರತಿಪಾದಿಸುವ ಗ್ರಂಥಗಳು ಪೂಜಾರ್ಹವೂ ಅಲ್ಲ. ವಾಚನೀಯವೂ ಅಲ್ಲ" ಎಂದವರು ನುಡಿದು ವಿವೇಕದ ಪರೀಕ್ಷೆಯಲ್ಲಿ ತೇರ್ಗಡೆಯಾಗದುದನ್ನು ನಂಬಕೂಡದೆಂದು ವಿದ್ಯಾರ್ಥಿಗಳಿಗೆ ಕರೆಕೊಟ್ಟರು. ಅನಂತರ ಅವರು ಬೌದ್ಧ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ, ದೆಹಲಿಗೆ ಹಿಂದಿರುಗಿದರು.

ವಿಮಾನ ನಿಲ್ದಾಣದಲ್ಲಿ ರತ್ತುವನ್ನು ಕಂಡಕೂಡಲೇ ಅವರು ತಮ್ಮ ನಾಯಿಯ ಆರೋಗ್ಯವನ್ನು ವಿಚಾರಿಸಿದರು. ಅವರು ನೇಪಾಳಕ್ಕೆ ಹೊರಡುವ ಮುನ್ನ ಅದನ್ನು ಆಸ್ಪತ್ರೆಗೆ ಸೇರಿಸಿದ್ದರು. ದಿನಕ್ಕೆರಡು ಬಾರಿ ಆಸ್ಪತ್ರೆಗೆ ಹೋಗಿ, ಅದರ ತಲೆ ಮೈ ಸವರಿ, ವೈದ್ಯರೊಡನೆ ಅದರ ಔಷಧೋಪಚಾರದ ವಿಷಯ ಪ್ರಸ್ತಾಪಿಸಿ ಬರುತ್ತಿದ್ದರು. ಜೀವ ಮರಣಗಳ ನಡುವೆ ಆ ಪ್ರಾಣಿ ಒದ್ದಾಡುತ್ತಿದ್ದಾಗ, ಆರಾಮ ಕುರ್ಚಿಯ ಮೇಲೆ ಕುಳಿತು ಚಡಪಡಿಸುತ್ತಿದ್ದರು. ಅದು ಅಸುನೀಗಿದ ಸುದ್ದಿ ತಿಳಿದಾಗ, ರಾತ್ರಿಯೆಲ್ಲ ನಿದ್ದೆ ತೊರೆದು ಅದಕ್ಕೆ ಅಶ್ರುತರ್ಪಣವರ್ಪಿಸಿದರು. ತಮ್ಮ ಆತ್ಮವೇ ಅದನ್ನು ಹಿಂಬಾಲಿಸಿದಂತೆ ಅವರಿಗೊಮ್ಮೊಮ್ಮೆ ಭಾಸವಾಗುತ್ತಿತ್ತು.

ಅಂಬೇಡ್ಕರರು ನೇಪಾಳದಿಂದ ಹಿಂದಿರುಗಿದನಂತರ, ಆರೋಗ್ಯ ದಿನ ದಿನಕ್ಕೆ ಹದಗೆಡುತ್ತಿತ್ತು. ಊಟ ಸೇರುತ್ತಿರಲಿಲ್ಲ. ಟೀ ಮಾತ್ರ ಆಗಾಗೆ ಸೇವಿಸುತ್ತಿದ್ದರು. ದೇಹ ಬಸವಳಿದಿತ್ತು. ರಾತ್ರಿ ಕಾಲದಲ್ಲಿ ರತ್ತುವನ್ನು ತಮ್ಮ

ಬಳಿಯೇ ಇರಿಸಿಕೊಳ್ಳುತ್ತಿದ್ದರು. ಒಂದು ದಿನ ಸಂಜೆ ಮಥುರಾ ರಸ್ತೆಯಲ್ಲಿ ಏರ್ಪಡಿಸಿದ್ದ ಪ್ರದರ್ಶನಕ್ಕೆ ಭೇಟಿಯಿತ್ತರು. ಬೌದ್ಧಕಲೆಯ ವಿಭಾಗವನ್ನು ಅತ್ಯಾಸಕ್ತಿಯಿಂದ ನೋಡಿ. ನವ ಚೈತನ್ಯ ಪಡೆದಂತೆ ಹರ್ಷದಿಂದ ಹೊರಗೆ ಬಂದರು. ಅವರ ಜೊತೆಯಲ್ಲಿಯೇ ಹೊರಗೆ ಬಂದ ಅವರ ಆರಾಧಕನೊಬ್ಬ "ದೇಶದಿಂದ ದೇಶಕ್ಕೆ ಬುದ್ಧನ ಪ್ರತಿಮೆಗಳು ವ್ಯತ್ಯಾಸವಾಗುತ್ತವಲ್ಲ, ಏಕೆ?" ಎಂದು ಪ್ರಶ್ನಿಸಿದನು. "ಬುದ್ಧನ ಮಹಾಪರಿನಿರ್ವಾಣದನಂತರ ಆರುನೂರು ವರ್ಷಗಳ ತನಕ ಬುದ್ಧನ ಚಿತ್ರವನ್ನು ಕುಂಚಿಸಿದವರಿಲ್ಲ. ವಿಗ್ರಹವನ್ನು ಕೆತ್ತಿದವರಿಲ್ಲ. ಅನಂತರ ಪ್ರತಿಭಾ ಶ್ರೀಮಂತನಾದ ಕಲಾವಿದನೊಬ್ಬ ಬುದ್ಧನ ವ್ಯಕ್ತಿತ್ವವನ್ನು ಕಲ್ಪಿಸಿಕೊಂಡು ವಿಗ್ರಹವನ್ನು ಕೆತ್ತಿದ. ಅದು ಮುಂದಿನ ವಿಗ್ರಹ ಗಳಿಗೆ ಮಾದರಿಯಾದರೂ. ಪ್ರತಿಯೊಂದು ದೇಶದ ಕಲಾವಿದರೂ ತಂತಮ್ಮ ಅಭಿರುಚಿಗನುಗುಣವಾಗಿ. ಆಯಾಯ ದೇಶದ ಸೌಂದರ್ಯ ಕಲ್ಪನೆಗೆ ತಕ್ಕಂತೆ ಬುದ್ಧನ ವಿಗ್ರಹಗಳನ್ನು ಕಡೆದರು. ಚಿತ್ರಗಳನ್ನು ಬಿಡಿಸಿದರು" ಎಂದು ಅಂಬೇಡ ರರು ಮಿತ ರ ಕುತೂಹಲವನ್ನು ತಣಿಸಿದರು. ಮನೆಗೆ ಹಿಂದಿರುಗು ವಾಗ ಪುಸ್ತಕದಅಂಗಡಿಗೆ ನುಗ್ಗಿ. ಕೆಲವು ಪುಸ್ತಕಗಳನ್ನು ಕೊಂಡರು. ಹೊರಗೆ ಹೋದಾಗಲೆಲ್ಲ ಈ ಕೊಳ್ಳಾಟ ಅವರ ಪರಿಪಾಠವಾಗಿತ್ತು.

2500ನೆಯ ಬುದ್ಧನ ಮಹಾಪರಿನಿರ್ವಾಣ ವಾರ್ಷಿಕ ಸಮಾರಂಭದಲ್ಲಿ ಭಾಗವಹಿಸುವ ಸಲುವಾಗಿ ದಲಾಯ್ ಲಾಮರು ಭಾರತಕ್ಕೆ ಬಂದಿದ್ದರು. ಡಿಸೆಂಬರ್ 2ರಂದು ಅವರ ಗೌರವಾರ್ಥವಾಗಿ ಅಶೋಕ ವಿಹಾರದಲ್ಲಿ ಸತ್ಕಾರ ಸಮಾರಂಭವೊಂದನ್ನು ವ್ಯವಸೆ ಮಾಡಲಾಗಿತ್ತು. ಆ ಸಮಾರಂಭದಲ್ಲಿ ಅಂಬೇಡ್ಕರರು ಭಾಗವಹಿಸಿ. ಲಾಮರೊಡನೆ ಮಾತಾಡಿ ಬಂದರು ಸಂಜೆ ಮನೆಯ ಮುಂದಣ ಹಸಲೆಯಲ್ಲಿ ಆರಾಮ ಕುರ್ಚಿಯನ್ನೊರಗಿ ಮಿತ್ರ ಭಕ್ತ ರೊಡನೆ ಹರಟೆ ಹೊಡೆದರು. ಅಲ್ಲಿಯೇ ಊಟ ಮುಗಿಸಿದರು. 10–30ರ ಹೊತ್ತಿಗೆ ಹಾಸುಗೆಯ ಮೇಲೆ ಮೈ ಚಾಚಿದರು. ಬೆಳಗಿನ ತನಕ ಚೆನ್ನಾಗಿ ನಿದ್ರಿಸಿದರು. ಮಾರನೆಯ ದಿನ ಸಂಜೆ ಕೆಲವು ಕುರ್ಚಿಗಳನ್ನು ಹಸಲೆಯ ಮೇಲೆ ಸಾಲಾಗಿ ಜೋಡಿಸುವಂತೆ ಆಳುಗಳಿಗೆ ಆಜ್ಞೆ ಮಾಡಿದರು. ಶ್ರೀಮತಿ ಅಂಬೇಡ ರರನ್ನೂ, ಜತೆಗೆ ಅವರ ತಂದೆ ಕೆ. ವಿ. ಕಬೀರರನ್ನೂ, ಡಾ॥ ಮಾವಳಂ ಕರರನ್ನೂ ಕರೆಸಿದರು. ಅವರೆಲ್ಲರೂ ಅಂಬೇಡ್ಕರರ ಮನೆಯಲ್ಲಿಯೇ ವಾಸಿಸು ತ್ತಿದ್ದರು. ಸಾಮೂಹಿಕ ಭಾವಚಿತ್ರ ತೆಗೆಯುವಂತೆ ತಮ್ಮ ಭಾವಮೈದುನ

ಬಾಲು ಕಬೀರರಿಗೆ ತಿಳಿಸಿದರು. ಕತ್ತಲೆಯಾಗುತ್ತಿದ್ದಂತೆ ಒಂದು ಕೈಯಲ್ಲಿ ದೊಣ್ಣೆಯೂರಿಕೊಂಡು, ಮತ್ತೊಂದು ಕೈಯನ್ನು ರತ್ತುವಿನ ಹೆಗಲ ಮೇಲಿರಿಸಿ ಕೊಂಡು, ರೋಗದಿಂದ ನರಳುತ್ತಿದ್ದ ಮಾಲಿಯ ಮನೆಗೆ ಹೋದರು. ಮುಪ್ಪಿನ ಮಾಲಿ ಕೆಮ್ಮುತ್ತಿದ್ದಂತೆ ಭಯಂಕರವಾಗಿ ನರಳುತ್ತಿದ್ದ. ಪಕ್ಕದಲ್ಲಿ ಅವನ ಮಡದಿ ಗೋಳಾಡುತ್ತ ನಿಂತಿದ್ದಳು. ಮೇಲೇಳಲು ಪ್ರಯತ್ನಿಸುತ್ತ ಮಾಲಿ ಕೈ ಜೋಡಿಸಿಕೊಂಡು "ಏಕೆ ನನ್ನೊಡೆಯಾ, ಇಲ್ಲಿತನಕ ಬಂದಿರಿ? ನನ್ನಿಂದ ತಪ್ಪಾಯ್ತು, ಮಾಫಿಮಾಡಿ. ಈಕೆಗೆ ನೀವೇ ಗತಿ" ಎಂದು ಒರಲಿದನು. "ಮೇಲೇಳ ಬೇಡ. ಏನಾಗಿದೆ ಹೇಳು?" ಎಂದು ಯಜಮಾನರು ಅವನ ಮೈಯನ್ನು ನೇವರಿಸಿದರು. ಭಗವಂತನ ಕರುಣೆಯೇ ಹರಿದು ಬಂದಂತಾಗಿ ಅವನು ನಿಟ್ಟುಸಿರು ಬಿಟ್ಟನು, ಕಣ್ಣೀರ್ಗರೆದನು. "ನೀವೇ ನನ್ನ ಪಾಲಿನ ದೇವರು. ನಾನು ಬದುಕುವುದಿಲ್ಲ, ಸ್ವಾಮಿ. ನನ್ನ ಹೆಂಡತಿಗೆ..." ಎಂದು ಗದ್ಗದಿಸಿದನು. ಒಡೆಯರು ತಣ್ಣಗಿದ್ದ ಅವನ ಕೈ ಹಿಡಿದುಕೊಂಡು "ಅಳಬೇಡ ಮಾರಾಯ. ಒಂದಲ್ಲ ಒಂದು ದಿನ ಪ್ರತಿಯೊಬ್ಬರು ಸಾಯಲೇ ಬೇಕು. ಈ ಹೊತ್ತು ನೀನು, ನಾಳೆ ನಾನು. ಧೈರ್ಯವಾಗಿರು. ಮದ್ದು ಕಳಿಸಿ ಕೊಡ್ತೇನೆ. ತೆಗೆದುಕೋ. ಕಾಯಿಲೆ ವಾಸಿಯಾಗ್ತದೆ." ಎಂದು ಸಮಾಧಾನ ಪಡಿಸಿದರು. ರತ್ತುವಿನ ಕಡೆಗೆ ತಿರುಗಿ "ನೋಡಿದೆಯಾ ರತ್ತು. ಈ ಬಡವನಿಗೂ ಸಾಯುವ ಭಯ. ಸಾವು ಬಂದಾಗ ಹೆದರಬೇಕಾಗಿಲ್ಲ. ಏಕೆಂದರೆ ಅದು ನಿಸರ್ಗವ್ಯಾಪಾರ. ಅದರಿಂದ ಯಾರೂ ತಪ್ಪಿಸಿಕೊಳ್ಳಲಾಗದು. ಜವರಾಯ ಯಾವಾಗ ಕರೆದರೂ ಅವನ ಜತೆ ಹೋಗಲು ಸಿದ್ಧನಾಗಿದ್ದೇನೆ." ಎಂದು ಅಂತರಂಗ ಸ್ಪರ್ಶಿಯಾಗುವಂತೆ ನುಡಿದರು. "ಹಾಗೆಲ್ಲ ಏಕೆ ಹೇಳುತ್ತೀರಿ, ತಂದೆ? ಈ ಮಾತು ಕೇಳಿದರೆ ನನಗೂ ಭಯವಾಗ್ತದೆ" ಎಂದು ಭಯ ಚಕಿತರಾದ ರತ್ತು ತೊದಲಿದರು.

ತಳುವಿಲ್ಲದೆ ಜೈತ್ರ ಯಾತ್ರೆಗೆ ಹೊರಡಬೇಕೆಂದು ಬಾಬಾಸಾಹೇಬರು ನಿಶ್ಚಯಿಸಿದರು. ಮೊದಲನೆಯ ಹಂತದಲ್ಲಿ ಮುಂಬಯಿಯನ್ನಾರಿಸಿಕೊಂಡರು. 16ನೆಯ ತಾರೀಖು ಮತಾಂತರ ಸಮಾರಂಭ ನಡೆಯತಕ್ಕದ್ದೆಂದು ನಿಗದಿ ಯಾಯಿತು. 14ನೆಯ ತಾರೀಖೇ ದೆಹಲಿ ಬಿಡುವುದೆಂದು ರೈಲು ಪ್ರಯಾಣಕ್ಕೆ ವ್ಯವಸ್ಥೆ ಮಾಡಲಾಯಿತು. ದಾಸ್ ಕ್ಯಾಪಿಟಲ್ ಗ್ರಂಥದ ಪುಟಗಳನ್ನು ತಿರುವಿಹಾಕಿ, 'ಬುದ್ಧ ಮತ್ತು ಕಾರ್ಲ್‌ಮಾರ್ಕ್ಸ್' ಪುಸ್ತಕದ ಕೊನೆಯ

ಪ್ರಕರಣವನ್ನು ಬರೆದು ಮುಗಿಸಿದರು. 4ನೆಯ ತಾರೀಖು ಸ್ವಲ್ಪಕಾಲ ರಾಜ್ಯಸಭೆಯಲ್ಲಿ ಹಾಜರಿದ್ದರು. ಅಲ್ಲಿಯ ದಿವಾನಖಾನೆಯಲ್ಲಿ ತುಸುಹೊತ್ತು ಗೆಳೆಯರೊಡನೆ ಸಲ್ಲಾಪದಲ್ಲಿ ಮಗ್ನರಾಗಿದ್ದರು. ಸಂಜೆ ಮಹಾರಾಷ್ಟ್ರ ವಿರೋಧ ಪಕ್ಷದ ನಾಯಕರಾದ ಪಿ. ಕೆ. ಆತ್ರೆ ಮತ್ತು ಎಸ್. ಎಂ. ಜೋಶಿಯವರಿಗೆ ಎರಡು ಪತ್ರ ಹೇಳಿ ಬರೆಯಿಸಿದರು. ತಾವು ಪ್ರಾರಂಭಿಸಲಿದ್ದ ರಿಪಬ್ಲಿಕನ್ ಪಕ್ಷಕ್ಕೆ ಸೇರುವಂತೆ ಅವರು ತಮ್ಮ ಪತ್ರದಲ್ಲಿ ಒತ್ತಾಯ ಪಡಿಸಿದ್ದರು. ಮತ್ತೊಬ್ಬ ಮಿತ್ರರಿಗೆ ಬರೆದ ಪತ್ರದಲ್ಲಿ ತಾವು ಅವರ ಮನೆಯಲ್ಲಿಳಿದು ಕೊಳ್ಳುವುದಾಗಿ ತಿಳಿಸಿದ್ದರು.

1952ನೆಯ ಇಸವಿಯ ಮಹಾಚುನಾವಣೆಗಳನಂತರ ಅಖಿಲ ಭಾರತೀಯ ನಿಮ್ನವರ್ಗೀಯ ಸಂಯುಕ್ತ ಪರಿಷತ್ತಿನ ಧೋರಣೆಯನ್ನು ಮಾರ್ಪಡಿಸುವ ಮೂಲಕ ಅದನ್ನು ಸಂಪೂರ್ಣವಾಗಿ ಪರಿಷ್ಕರಿಸಬೇಕೆಂದೂ ಇಲ್ಲವೇ ಹೊಸ ಪಕ್ಷವನ್ನು ಕಟ್ಟಬೇಕೆಂದೂ ಅವರು ತೀವ್ರವಾಗಿ ಆಲೋಚಿಸು ತ್ತಿದ್ದರು. ಪ್ರತಿಯೊಬ್ಬ ಭಾರತೀಯನಿಗೂ ಸಮಾನವಾದ ಹಕ್ಕುಗಳು ದೊರೆಯುವಂತಾಗಬೇಕು, ಪ್ರತಿಯೊಬ್ಬನ ಅಭ್ಯುದಯಕ್ಕೂ ಸರ್ಕಾರಿಯಂತ್ರ ಮಾಧ್ಯಮವಾಗಬೇಕು, ಪ್ರತಿಯೊಬ್ಬನಿಗೂ ರಾಜಕೀಯಾರ್ಥಿಕ ಮತೀಯ ಸ್ವಾತಂತ್ರ್ಯವಿರಬೇಕು. ಪ್ರತಿಯೊಬ್ಬನಿಗೂ ಸಮಾನಾವಕಾಶಗಳಿರಬೇಕು, ಸರ್ವರೂ ಸುಲಿಗೆ ಹಿಂಸೆಗಳಿಂದ ಪಾರಾಗಬೇಕು ಈ ತತ್ತ್ವಗಳ ತಳಹದಿಯ ಮೇಲೆ ಅವರು ಭಾರತೀಯ ರಿಪಬ್ಲಿಕನ್ ಪಕ್ಷವನ್ನು ರಚಿಸಬೇಕೆಂದಿದ್ದರು. ಸಂಸದೀಯ ಪ್ರಜಾಪ್ರಭುತ್ವವೇ ಉತ್ತಮವಾದ ವ್ಯವಸ್ಥೆಯೆಂದೂ, ಸರ್ವಾಧಿ ಕಾರತ್ವಕ್ಕೆ ತಮ್ಮ ಪಕ್ಷ ವಿರೋಧಿಯೆಂದೂ, ಸ್ನೇಹ ಪ್ರೇಮಗಳ ಮೂಲಕ ರಾಷ್ಟ್ರೈಕ್ಯವನ್ನು ಸಾಧಿಸುವುದೆಂದೂ, ವಿಚಾರವಾದ, ಮಾನವತಾವಾದ, ಸಮಾಜವಾದ, ಪ್ರಯೋಜನವಾದ, ಉದಾರವಾದಗಳ ತಳಹದಿಯಮೇಲೆ ಪ್ರಜಾಪ್ರಭುತ್ವವನ್ನು ರೂಪಿಸಲಾಗುವುದೆಂದೂ ಅವರು ಘೋಷಿಸಿದರು. ಆ ಬಗ್ಗೆ ತಮ್ಮ ಮಿತ್ರರೊಡನೆ ಪತ್ರವ್ಯವಹಾರ ನಡೆಸುತ್ತಿದ್ದರು. ಅವರ ಈ ಅನಿರೀಕ್ಷಿತ ಪರಿವರ್ತನೆಯಲ್ಲಿ ಲೋಕಾನುಭವದ ಪರಾಕಾಷ್ಠೆಯನ್ನೂ ಜೀವಾನಾನುಭವದ ಪರಿಪಕ್ವತೆಯನ್ನೂ ಮೇಲಾಗಿ ಸುಸಂಸ್ಕೃತ ಚೇತನದ ಪ್ರತಿಬಿಂಬವನ್ನೂ ಕಾಣಬಹುದಾಗಿದೆ.

ಮುಂಬಯಿಯಲ್ಲಿ ಪೂರ್ವಭಾವೀ ಸಿದ್ಧತೆಗಳನ್ನು ನಡೆಸುವ ಸಲುವಾಗಿ ಕಬೀರ್ ಮತ್ತು ಬಾಲುಬೀರರು ಅಂದೇ ಸಂಜೆಯ ರೈಲಿನಲ್ಲಿ ದೆಹಲಿ ಬಿಟ್ಟರು. ರೈಲುಪ್ರಯಾಣ ಪ್ರಯಾಸಕರವಾಗಬಹುದಾದ್ದರಿಂದ, 14ನೆಯ ತಾರೀಖು ವಿಮಾನದಲ್ಲಿ ಹೋಗುವುದೆಂದು ಅಂಬೇಡ್ಕರರು ನಿರ್ಧರಿಸಿದರು. ರತ್ತು ರಾತ್ರಿ 1–30ರ ತನಕ ಪತ್ರ ಮುನ್ನುಡಿ ಮೊದಲಾದುವನ್ನು ಟೈಪಿಸುತ್ತಿದ್ದು, ಹೊತ್ತಾದ್ದರಿಂದ ಡಾಕ್ಟರರ ಮನೆಯಲ್ಲಿಯೇ ಮಲಗಿದರು. 5ನೆಯ ತಾರೀಖು ಬೆಳಗ್ಗೆ ಯಜಮಾನರು ಗಾಢನಿದ್ರೆಯಲ್ಲಿದ್ದುದನ್ನು ಕಂಡು ರತ್ತು ಕೆಲಸದಲ್ಲಿ ಮಗ್ನರಾದರು. ಯಜಮಾನರು ಎಚ್ಚರಗೊಂಡಾಗ ಎಂಟುಮುಕ್ಕಾಲು ಗಂಟೆ. ಅವರ ಅಪ್ಪಣೆ ಪಡೆದು ರತ್ತು ತಮ್ಮ ಕಚೇರಿಗೆ ಹೋದರು.

ಶ್ರೀಮತಿ ಅಂಬೇಡ್ಕರರು ಮಾವಳಂಕರರೊಡನೆ ಮಧ್ಯಾಹ್ನ 1 ಗಂಟೆಗೆ ಪೇಟೆಗೆ ಹೋದರು. ಯಜಮಾನರು ಮೂರ್ನಾಲ್ಕು ಬಾರಿ ಗಂಟೆ ಬಾರಿಸಿ, ಮಡದಿಯ ವಿಷಯ ವಿಚಾರಿಸಿದರು. ಅವರಿನ್ನೂ ಬಂದಿರಲಿಲ್ಲ. ಸೇವಕನ ಸಹಾಯದಿಂದ ಶೌಚಗೃಹಕ್ಕೆ ಹೋಗಿ ಬಂದರು. ಆಯಾಸವಾದಂತಾಗಿ ಟೀ ಕೇಳಿದರು. ಆಳು ತಂದುಕೊಟ್ಟ. ಮತ್ತೆ ಗಂಟೆ ಬಾರಿಸಿದರು. ಹೆಂಡತಿ ಬಂದಿರಲಿಲ್ಲ. ಅವರ ಕಣ್ಣು ಕೆಂಡವಾಯಿತು. 5½ ಗಂಟೆಗೆ ರತ್ತು ಬಂದರು. ಕೋಪದಿಂದ ಕುದಿಯುತ್ತಿದ್ದ ಯಜಮಾನರನ್ನು ನೋಡಿ ಅವರು ಬೆವರಿದರು. ಐದು-ಹತ್ತು ನಿಮಿಷಗಳ ನಂತರ ಟೈಪಿಗೆಂದು ಕೆಲವು ಹಾಳೆಗಳನ್ನು ಕೊಟ್ಟರು. ಆ ಹೊತ್ತಿಗೆ ಹಿಂದಿರುಗಿದ ಮಡದಿ ಯಜಮಾನರ ಕೋಣೆಯ ಕಡೆಗೆ ಇಣುಕು ನೋಟ ಬೀರಿದರು. ಪತಿಯ ಮುಖಭಾವವನ್ನು ನೋಡಿ ಬೆದರಿದರು; ಅವರ ಬಿಡುನುಡಿಗಳಿಗೆ ತತ್ತರಿಸಿಹೋದರು. ರತ್ತು ಟೈಪುಮಾಡಿದ ಹಾಳೆಗಳನ್ನು ತಂದು ಅವರ ಮುಂದಿರಿಸಿದರು. ಅವುಗಳ ಮೇಲೆ ಕಣ್ಣಾಡಿಸುತ್ತಿದ್ದಂತೆ ಯಜಮಾನರ ಮುಖದ ಮೇಲೆ ಶಾಂತಿಯ ಹೆಜ್ಜೆಗುರುತು ಗೋಚರಿಸಲಾರಂಭಿಸಿದುವು.

ಜೈನನಾಯಕರ ನಿಯೋಗವೊಂದು ಅವರ ಸಂದರ್ಶನಕ್ಕಾಗಿ ರಾತ್ರಿ ಎಂಟು ಗಂಟೆಗೆ ಬಂದಿತು. ಸಂದರ್ಶನ ಮೊದಲೇ ನಿಷ್ಕರ್ಷೆಯಾಗಿದ್ದುದರಿಂದ ಅವರನ್ನು ಮರಳಿಸಲಾಗಲಿಲ್ಲ. ರತ್ತುವಿನ ನೆರವಿನಿಂದ ಅಂಬೇಡ್ಕರರು ದಿವಾನಖಾನೆಗೆ ಬಂದು, ಕಣ್ಣುಮುಚ್ಚಿಕೊಂಡೇ ಸೋಫಾದ ಮೇಲೆ ಮೈ ಬಿಸಾಡಿದರು. ಜೈನನಾಯಕರು ಮೇಲೆದ್ದು, ಅವರಿಗೆ ನಮಸ್ಕರಿಸಿ ಕುಳಿತರು.

ಅಂಬೇಡ್ಕರರು ಎವೆತೆರೆದು. ಪ್ರತಿನಮಸ್ಕಾರ ಸಲ್ಲಿಸಿ, ಮತ್ತೆ ತಲೆ ಬಗ್ಗಿಸಿ ಕೊಂಡು ಕುಳಿತರು. ತುಸು ಹೊತ್ತು ಹಾಗೆಯೇ ಕುಳಿತಿದ್ದು, ನಿಯೋಗಾ ಗಮನದ ಕಾರಣ ವಿಚಾರಿಸಿದರು. "ನಿಮ್ಮ ಆರೋಗ್ಯ ಹೇಗಿದೆ?" ಎಂದು ನಿಯೋಗಿಗಳು ಪ್ರಶ್ನಿಸಿದರು. "ಸಾಯಲಿಲ್ಲ, ಬದುಕಲಿಲ್ಲ, ನಡೀತಾ ಇದೆ." 'ನಿಮಗಾಗಿ ಅಲ್ಲ, ನಾಡಿಗಾಗಿ ನೀವು ಬದುಕಿರಬೇಕು.' 'ಅದು ನನ್ನಿಚ್ಛೆಯಲ್ಲ.' ಮುಂದೆ ಬೌದ್ಧ ಜೈನಧರ್ಮಗಳನ್ನು ಕುರಿತಂತೆ ಮಾತುಕತೆಗಳಾದುವು. ದೇಹ ಒಣಗಿಹೋಗಿದ್ದರೂ ಅವರ ಮಾತಿನ ಗತ್ತುಗೈರತ್ತುಗಳನ್ನು ಕಂಡು ನಿಯೋಗಿ ಗಳು ಅಪ್ರತಿಭರಾದರು. ಅವರು ಬಾಬಾಸಾಹೇಬರಿಗೆ 'ಜೈನ್ ಔರ್ ಬುದ್ಧ' ಎಂಬ ಗ್ರಂಥವನ್ನರ್ಪಿಸಿದರು. ಮಾರನೆಯ ಬೆಳಗ್ಗೆ ನಡೆಯಲಿದ್ದ ಕಾರ್ಯ ಕ್ರಮದಲ್ಲಿ ಭಾಗವಹಿಸಿ, ತಮ್ಮ ಮುನಿಗಳೊಡನೆ ಕೆಲವು ಧಾರ್ಮಿಕ ಸಮಸ್ಯೆಗಳ ಬಗ್ಗೆ ಚರ್ಚೆ ನಡಸಬೇಕೆಂದು ಅವರು ಕೇಳಿಕೊಂಡರು. ಆರೋಗ್ಯ ಸುಧಾರಿ ಸಿದರೆ ತಾವು ಬರುವುದಾಗಿ ಬಾಬಾಸಾಹೇಬರು ತಿಳಿಸಿದರು. ಮಾತುಕತೆ ನಡೆಯುತ್ತಿದ್ದಾಗ ಮಾವಳಂಕರರು ಮುಂಬಯಿಗೆ ಹೋಗಲೆಂದು ವಿಮಾನ ನಿಲ್ದಾಣಕ್ಕೆ ಧಾವಿಸಿದರು. ನಿಯೋಗಿಗಳು ಕದಲಿದನಂತರ ಮನೆ ಗಾಢಾಂಧ ಕಾರದ ಭಯಂಕರ ನಿಶ್ಶಬ್ದಾಬ್ಧಿಯಲ್ಲಿ ಮುಳುಗಿತು.

ಬೇರೆ ಕೆಲಸವಿಲ್ಲದಾಗ ರತ್ತು ಅವರ ಪಾದಗಳನ್ನೊತ್ತುತ್ತಿದ್ದುದುಂಟು. ತಲೆಗೆ ಎಣ್ಣೆ ತಿಕ್ಕಿಕೊಡುವಂತೆ ಯಜಮಾನರು ರತ್ತುವಿಗೆ ಹೇಳಿದರು. ಎಣ್ಣೆ ತಿಕ್ಕಿದನಂತರ ಅವರಿಗೆ ತುಸು ನೆಮ್ಮದಿಯಾಯಿತು. ಪಕ್ಕದ ಕೋಣೆಯಲ್ಲಿ ಕಾರ್ಯಮಗ್ನರಾಗಿದ್ದ ರತ್ತುವಿನ ಕಿವಿ ಇದ್ದಕ್ಕಿದ್ದಂತೆ ನಿಮಿರಿತು. ಗಂಧರ್ವ ಲೋಕದಿಂದ ಸುಳಿಗಾಳಿಯ ಬೆನ್ನೇರಿ ಬರುತ್ತಿದ್ದ ಸುಂದರ ಗಾನ ಅವರ ಮನಸ್ಸನ್ನು ರಮಿಸಿದಂತಾಯಿತು. ಆ ಗಾನದ ಪಥಾನ್ವೇಷಣೆಗಾಗಿ ಶ್ರವ ಣೇಂದ್ರಿಯ ಸುತ್ತಮುತ್ತ ಅಲೆದಾಡಿತು. ಕೊನೆಗೆ ಹೊರಗೆ ಬಂದು ಬಾಗಿಲ ಮರೆಯಲ್ಲಿ ಯಜಮಾನರ ಕೋಣೆಯನ್ನಿಣುಕಿ ನೋಡಿದಾಗ ಅವರ ಶರೀರ ಜುಮ್ಮೆಂದಿತು. ಸೋಫಾದ ಮೇಲೆ ಮೈಚಾಚಿ ಕಣ್ಣು ಮುಚ್ಚಿಕೊಂಡು. ಸೋಫಾದ ಪಟ್ಟಿಯ ಮೇಲೆ ಬಲಗೈ ಬೆರಳುಗಳಾಡಿಸುತ್ತ ಗಾನಮಗ್ನರಾಗಿದ್ದ ಒಡೆಯರನ್ನು ನೋಡಿದಾಗ ಅವರು ಆನಂದತುಂದಿಲರಾದರು. ಒಳಗೊಳಗೆ ಗುನುಗಿಕೊಳ್ಳುತ್ತಿದ್ದ ಕಬೀರರ ಹಾಡು ಮುಗಿದಾಗ ಯಜಮಾನರ ದನಿ ಏರಿತು. 'ಬುದ್ಧಂ ಶರಣಂ ಗಚ್ಛಾಮಿ' ಎಂಬ ಗಂಭೀರ ಸುಮಧುರ ನಿನಾದ

ಅಲೆಅಲೆಯಾಗಿ ಕಿವಿದೆರೆಯನ್ನು ಮೀಟಿದಾಗ. ರತ್ತು ಬಾಹ್ಯಪ್ರಪಂಚವನ್ನು ಮರೆತರು. ಮೆಲ್ಲಮೆಲ್ಲಗೆ ಕೋಣೆಯೊಳಗೆ ಹೆಜ್ಜೆ ಹಾಕಿದರು. ಬಾಬಾಸಾಹೇಬರು ಕತ್ತೆತ್ತಿ ನೋಡಿ. ಆ ಗಾನದ ಹಾಡುತಟ್ಟೆಯನ್ನು ನುಡಿಸುವಂತೆ ರತ್ತುವಿಗೆ ಹೇಳಿದರು. ಆ ಹಾಡಿನ ಜತೆಗೆ ಅವರೂ ದನಿಗೂಡಿಸಿದರು. ಆ ಗಾನಲಹರಿ ಹರಿಯುವಾಗ ಅವರ ಮುಖ ಪ್ರಶಾಂತವಾಗಿತ್ತು.

ಅಷ್ಟರಲ್ಲಿ ಸೂಪಕಾರ ಸುದಾಮ ಬಂದು ಅಡುಗೆ ಅಣಿಯಾಗಿರುವುದಾಗಿ ತಿಳಿಸಿದನು. ಬಾಬಾ ಸಾಹೇಬರು ಕೇಳಿಸಿಕೊಳ್ಳಲಿಲ್ಲ. ಅವರಿನ್ನೂ ಹಾಡಿನ ಗುಂಗಿನಲ್ಲಿದ್ದರು. ಬಾಣಸಿಗ ಮತ್ತೊಮ್ಮೆ ನೆನಪು ಕೊಟ್ಟ. ತಮಗೊಂದು ಗುಟುಕು ಅನ್ನ ಸಾಕೆಂದು ಅವರು ನುಡಿದರು. ಆದರೆ ಕುಳಿತ ಜಾಗದಿಂದ ಕದಲಲಿಲ್ಲ. ರತ್ತು ಅವರ ಬಳಿ ನಿಂತುಕೊಂಡು. ಸೊಗಸಿದಷ್ಟು ಊಟ ಮಾಡುವಂತೆ ವಿನಂತಿಸಿಕೊಂಡರು. ಬಾಬಾ ಸಾಹೇಬರು ಅವರ ಭುಜದ ಮೇಲೆ ಆನಿಸಿಕೊಂಡು ಗ್ರಂಥಾಲಯದ ಕಡೆಗೆ ನಡೆದರು. ಬೀರುಗಳ ಕಡೆಗೆ ಅಕ್ಕರೆಯಿಂದ ಕಣ್ಣುಹಾಯಿಸಿ, ನಾಲ್ಕಾರು ಪುಸ್ತಕಗಳನ್ನಾರಿಸಿ, ತಲೆದಿಂಬಿನ ಪಕ್ಕದಲ್ಲಿಡುವಂತೆ ಆಳಿನ ಕೈಗೆ ಕೊಟ್ಟರು. ತಮಗೆ ಬೇಕಾದ ಪುಸ್ತಕಗಳು ಕೈಗೆ ಸಿಗದಿರಲು ರೇಗಾಡಿದರು. "ಪುಸ್ತಕಗಳನ್ನು ಮುಟ್ಟಿದವರಾರು ? ಅವುಗಳನ್ನು ಜಾಗದಿಂದ ಕದಲಿಸಿದವರಾರು ? ಕೆಂಪು ರಟ್ಟಿನ ಟಿಪ್ಪಣಿ ಪುಸ್ತಕ ಎಲ್ಲಿ"? ಎಂದು ಮನೆಯ ಚಾವಣಿ ಎದ್ದುಹೋಗುವಂತೆ ಅಬ್ಬರಿಸಿದರು. ಮೇಜಿನ ಮೇಲಿದ್ದ ಟಿಪ್ಪಣಿಯನ್ನು ರತ್ತು ತಂದುಕೊಡಲಾಗಿ "ಎಲ್ಲಿತ್ತಯ್ಯ ?" ಎಂದು ಮುಖ ಸಿಂಡರಿಸಿಕೊಂಡು ಕೇಳಿದರು. "ಮೇಜಿನ ಮೇಲೆಯೇ ಇತ್ತು." "ಹೌದೆ?" ಎಂದು ತಪ್ಪಿತಸ್ಥರಂತೆ ಖಿನ್ನರಾದರು. ಮರುಕ್ಷಣದಲ್ಲಿಯೇ ಮುಗುಳುನಗೆ ಚೆಲ್ಲಿದರು. ರತ್ತುವಿನ ಸಹಾಯದಿಂದ ಊಟದ ಕೋಣೆಯಲ್ಲಿ ಕುರ್ಚಿಯ ಮೇಲೆ ಕುಳಿತರು. ಅವರು ತಿಂದದು ಎರಡೇ ತುತ್ತು. ತಲೆ ಭಾರವಾದಂತೆ ಕಂಡಿತು. ಅದನ್ನು ಮೃದುವಾಗಿ ಒತ್ತುವಂತೆ ರತ್ತುವಿಗೆ ಹೇಳಿದರು. ಕೆಲವು ಕ್ಷಣಗಳನಂತರ ದೊಣ್ಣೆಯೂರಿಕೊಂಡು ಮೇಲೆದ್ದು ಕಬೀರನ ರಚನೆಯೊಂದನ್ನು ಗುನುಗಿಸುತ್ತ, ಮಲಗುವಕೋಣೆಗೆ ಸರಿದರು.

ಕೈಯಲ್ಲೊಂದು ಪುಸ್ತಕವನ್ನೆತ್ತಿಕೊಂಡು, ಹಾಸುಗೆಯ ಮೇಲುರುಳಿ, ಪಾದಗಳನ್ನು ಮೃದುವಾಗೊತ್ತುವಂತೆ ರತ್ತುವಿಗೆ ಹೇಳಿದರು. ರಾತ್ರಿ ಸಮಯ ಹನ್ನೊಂದು ಗಂಟೆ ಮೀರಿತ್ತು. ಹಿಂದಿನ ರಾತ್ರಿ ರತ್ತು ನಿದ್ದೆ

ಮಾಡಿರಲಿಲ್ಲ : ಮನೆಗೂ ಹೋಗಿರಲಿಲ್ಲ. ಮನೆಯ ಕಡೆ ನೆನಪಾಯಿತು. ನಿದ್ರಾಭಾರದಿಂದ ಯಜಮಾನರ ಕಣ್ಣು ಮುಚ್ಚುತ್ತಿದ್ದಂತೆ ತೋರಿತು. ಅವರ ಅನುಮತಿಯಿಲ್ಲದೆ ಮನೆಗೆ ಹೋಗುವುದೆಂತು ? ಒತ್ತುತ್ತಿದ್ದ ಕೈಗಳನ್ನು ಹಿಂದಕ್ಕೆಳೆದುಕೊಂಡರು ; ಮೇಲಕ್ಕೆದ್ದು ಹೆಜ್ಜೆಯಿಟ್ಟರು ; ಮೇಜಿನ ಮೇಲಣ ಪುಸ್ತಕಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಪ್ಪಳವಾಗುವಂತೆ ಸರಿಸಿದರು. ಬಾಬಾ ಸಾಹೇಬರು ಮೆಲ್ಲನೆ ಎವೆಬಿಚ್ಚಿದರು. "ನಾನು ಮನೆಗೆ ಹೋಗಿ ಬರಲೆ, ಅಪ್ಪಾಜಿ?" ಎಂದು ರತ್ತು ಅಳುಕುತ್ತ ಕೇಳಿದರು. "ಆಗಲಿ" "ಬೇಗ ಬಂದುಬಿಡ್ತೇನೆ." "ನಿನ್ನೆಯೂ ಮನೆಗೆ ಹೋಗಲಿಲ್ಲ. ಈಗ ಬರುವುದು ಬೇಡ." ರತ್ತು ಹೊಸಿಲಾಚೆ ಕಾಲಿಡುವಷ್ಟರಲ್ಲಿ "ರತ್ತು, ಬಾ ಇಲ್ಲಿ.'ಬುದ್ಧ ಮತ್ತು ಅವನ ಧರ್ಮ'ಕ್ಕೆ ಸಂಬಂಧಿಸಿದ ಮುನ್ನುಡಿಯ ಪ್ರತಿಯೆಲ್ಲಿ? ಜೋಶಿ, ಅತ್ರೆ ಮತ್ತು ಬರ್ಮ ಸರ್ಕಾರಕ್ಕೆ ಬರೆಸಿದ ಪತ್ರಗಳೆಲ್ಲಿ?" "ಬೀರೊಳಗಿವೆ." "ಅವನ್ನು ತಾ ಇಲ್ಲಿ. ಓದಿಟ್ಟಿರುತ್ತೇನೆ. ಅವನ್ನು ನಾಳೆಯೇ ಅಂಚೆಗೆ ರವಾನಿಸಬೇಕು." ರತ್ತು ಅವುಗಳನ್ನು ತಂದು ಮಂಚದ ಬಳಿಯ ಗುಜ್ಜು ಮೇಜಿನ ಮೇಲಿರಿಸಿ. ಹೊರಗೆ ನಡೆದರು. ಎಂದಿನಂತೆ ಸುದಾಮ ಮೇಜಿನ ಮೇಲೆ ಕಾಫಿ ತುಂಬಿದ ಉಷ್ಣತ್ರ ಭಾಜನವನ್ನೂ ಬಿಸ್ಕತ್ತಿನ ಪೊಟ್ಟಣವನ್ನೂ ಇರಿಸಿ, ಸಾಹೇಬರ ಮಂಚದ ಪಕ್ಕದಲ್ಲಿ ಮಲಗಿಕೊಂಡನು. ಶ್ರೀಮತಿ ಅಂಬೇಡ್ಕರರೊಮ್ಮೆ ಕೋಣೆಯೊಳಗೆ ಇಣುಗಿ, ಯಜಮಾನರ ಮೈಮೇಲೆ ಬಟ್ಟೆ ಹೊದಿಸಿ, ಎಲ್ಲ ಸರಿಯಾಗಿದೆಯೆಂದು ಬಗೆದು, ತಮ್ಮ ಕೋಣೆಗೆ ಹೋಗಿ ಉರುಳಿಕೊಂಡರು.

6ನೆಯ ತಾರೀಖು ಬೆಳಗ್ಗೆ 6–30 ಗಂಟೆಗೆ ಶಾರದಾ ಯಜಮಾನರ ಕೋಣೆಯಲ್ಲಿಣುಕಿ, ಅವರು ನಿದ್ರಿಸುತ್ತಿದ್ದಾರೆಂದು ತಿಳಿದು, ತೋಟದೊಳಗೆ ತಿರುಗಾಡುವ ಸಲುವಾಗಿ ಹೋದರು. ತಿರುಗಾಟ ಮುಗಿಸಿ, ಕಾಫಿ ಕೊಡುವ ಸಲುವಾಗಿ ಪತಿಯನ್ನೆಬ್ಬಿಸಿಲು ಮಂಚದ ಬಳಿ ನಿಂತು, ಅವರ ಮುಖದ ಕಡೆಗೆ ನಿಡಿದಾಗಿ ನೋಡಿದರು ; ಅವರ ಹಣೆ ಮುಟ್ಟಿದರು : ತಣ್ಣಗಿತ್ತು. ಉಸಿರು ನಿಂತಿತ್ತು. ಶಾರದಾ ಅವರ ಎದೆ ಬಡಿತ ಜೋರಾಯಿತು. ತುಟಿಯದುರಿತು, ಕಣ್ಣು ಹನಿಗೂಡಿತು ; ಕಿಟಾರನೆ ಕಿರಿಚಿಕೊಂಡರು. ಅಡುಗೆ ಮನೆಯಲ್ಲಿದ್ದ ಸುದಾಮ ಓಡಿ ಬಂದ. "ನನ್ನ ಪತಿ ಇನ್ನಿಲ್ಲ; ಮತ್ತೆ ಬರುವಂತಿಲ್ಲ. ಕಾರು ಕಳಿಸಿ ರತ್ತುವನ್ನು ಕರಸು" ಎಂದು ಬಿಕ್ಕುತ್ತ ಹೇಳಿದರು.

ರತ್ತು ಬಂದರು. ಅವರನ್ನು ನೋಡಿ ಶಾರದಾ ಅವರ ದುಃಖ ಇಮ್ಮಡಿಸಿತು. "ರತ್ತು. ರತ್ತು. ಬಾಬಾ ಸಾಹೇಬರು ಹೋಗಿಬಿಟ್ಟರು : ಕಾಣದ ನಾಡಿಗೆ ಹೋದರು. ನೀನಿನ್ನು ಯಾರನ್ನು ಅಪ್ಪಾಜಿ ಎಂದು ಕರೆಯುತ್ತೀಯೆ" ಎಂದು ಗದ್ಗದಿಸುತ್ತ ಅವರು ಸೋಫಾದ ಮೇಲೆ ಕುಸಿದರು. ರತ್ತು ನಡುಗುತ್ತ, ಹಣೆ ಬಡಿದುಕೊಳ್ಳುತ್ತ "ನನ್ನಪ್ಪಾಜಿ, ನನ್ನ ಬಾಬಾ ಸಾಹೇಬರು ಇ......? ನಾನು ತಪ್ಪಲಿಯಾದೆನೆ?" ಎಂದು ನೆಲದಮೇಲೆ ಬಿದ್ದು ಬಿಟ್ಟರು. ಶಾರದ ಅವರ ವೈದ್ಯ ಪ್ರಜ್ಞೆ ಮರುಕಳಿಸಿತು ; ಗಂಡನನ್ನುಳಿಸಿ ಕೊಳ್ಳಬಹುದೇನೋ ಎಂಬ ಆಸೆ ಚಿಗುರಿತು. ಹೃತ್ಕ್ರಿಯೆಯನ್ನು ಉಜ್ಜೀವಿಸುವ ಸಲುವಾಗಿ ಪತಿಯ ಕಾಲುತೋಳುಗಳನ್ನು ಅಲ್ಲಾಡಿಸಿದರು ; ಅಂಗಾಂಗಗಳನ್ನೆಲ್ಲ ಉಜ್ಜಿದರು ; ಅವರ ಬಾಯಲ್ಲಿ ಒಂದು ಚಂಚ ಬ್ರಾಂದಿ ತೊಟ್ಟಿಸಿದರು. ಏನು ಮಾಡಿದರೂ ಉಸಿರು ಬರಲಿಲ್ಲ ; ಬಾಬಾ ಸಾಹೇಬರು ನಿದ್ರೆಯಲ್ಲಿಯೇ ದೀರ್ಘನಿದ್ರೆಗೆ ವಶವಾಗಿದ್ದರು. "ಎಲ್ಲ ಮುಗೀತು" ಎಂದು ಶ್ರೀಮತಿ ಅಂಬೇಡ್ಕರರು ಕಣ್ಣಲ್ಲಿ ನೀರು ತುಂಬಿಕೊಂಡರು. "ಬಾಬಾ ಸಾಹೇಬರೇ, ನಾನು ಬಂದಿದ್ದೇನೆ. ಕೆಲಸ ಹೇಳಿ. ಹೇಳುವುದಿಲ್ಲವೆ? ರಾತ್ರಿ ನಿಮ್ಮ ಬಳಿ ಇರಲಿಲ್ಲವೆಂದು ಕೋಪವೆ ? ನಾನು ಪಾಪಿ. ಪ್ರಾಣ ಹೋಗುವಾಗ ನನ್ನ ಸ್ವಾಮಿಯ ಬಳಿ ಇರಲಾಗಲಿಲ್ಲವಲ್ಲ. ಅಯ್ಯೋ ವಿಧಿಯೆ" ಎಂದು ರತ್ತು ಹಣೆ ಎದೆಗಳಿಗೆ ಹೊಡೆದುಕೊಂಡು ಒಂದೆ ಸಮನೆ ಗೋಳಾಡುತ್ತಿದ್ದರು.

ಸ್ವಲ್ಪ ಹೊತ್ತಿನನಂತರ ರತ್ತು ಸಾವರಿಸಿಕೊಂಡು, ಬಾಬಾಸಾಹೇಬರ ಹತ್ತಿರದ ಗೆಳೆಯರಿಗೆ ಫೋನುಮಾಡಿ ಮರಣವಾರ್ತೆ ಮುಟ್ಟಿಸಿದರು. ಕೇಂದ್ರ ಸರ್ಕಾರದ ಮಂತ್ರಿಗಳಿಗೆ ಸುದ್ದಿ ತಲುಪಿತು. ಕೆಲವೇ ಕೆಲವು ನಿಮಿಷಗಳಲ್ಲಿ ಗೆಳೆಯರು ಬಂಧುಗಳು ಮಂತ್ರಿಗಳು ನಾನಾ ಪಕ್ಷಗಳ ರಾಜಕೀಯ ನಾಯಕರು ಸಾಲಾಗಿ ನಿಂತು, ಕಳೇವರವನ್ನು ಪ್ರದಕ್ಷಿಣೆಮಾಡಿ, ತಮ್ಮ ಗೌರವವನ್ನು ಸಲ್ಲಿಸಿ ಮರಳುತ್ತಿದ್ದರು ; ಕೆಲವರು ಪುಷ್ಪಗುಚ್ಛಗಳನ್ನರ್ಪಿಸುತ್ತಿದ್ದರು. ತಮ್ಮ ಸಚಿವ ಸಂಪುಟದ ರತ್ನದಂತಿದ್ದ ಸಹೋದ್ಯೋಗಿ ಮಿತ್ರರ ಶವವನ್ನು ನೋಡಿದಾಗ ಪ್ರಧಾನಿ ನೆಹ್ರೂ ಅವರು ಭಾವಪರವಶರಾದರು. ಅಂಬೇಡ್ಕರರ ಅನುಯಾಯಿಗಳ ಇಚ್ಛೆಯಂತೆ ಶವಸಂಸ್ಕಾರ ನಡೆಸತಕ್ಕದ್ದೆಂದು ಸಂಬಂಧಪಟ್ಟವರಿಗೆ ಆಜ್ಞಾಪಿಸಿದರು. ಮುಂಬಯಿಗೆ ಕಳೇವರವನ್ನೊಯ್ಯುವ ಸಲುವಾಗಿ ಸಾರಿಗೆ ಸಂಪರ್ಕ ಖಾತೆಯ ಸಚಿವರಾದ ಜಗಜೀವನರಾಂ ವಿಮಾನವನ್ನೊದಗಿಸಿದರು.

ಮಿಲಿಟರಿ ಲಾರಿಯಲ್ಲಿ ರಚಿಸಿದ ವೇದಿಕೆಯ ಮೇಲೆ ಹೂಮಾಲೆಗಳಿಂದ ಲಂಕೃತವಾದ ಶವವನ್ನಿರಿಸಿದರು. ನೆಹ್ರೂ ಅವರು ವಿಶೇಷ ದೂತನ ಮೂಲಕ ಪುಷ್ಪಹಾರ ಕಳಿಸಿದ್ದರು. ಲಾರಿ ನಿಧಾನವಾಗಿ ಚಲಿಸಲಾರಂಭಿಸಿದ ಕೂಡಲೇ ಸಹಸ್ರ ಸಹಸ್ರ ಕಂಠಗಳಿಂದ ಉಕ್ಕಿದ 'ಬಾಬಾ ಸಾಹೇಬರು ಅಮರ ರಾಗಲಿ' ಎಂಬ ನಿರ್ಘೋಷ ಇಡೀ ನಗರವನ್ನೇ ನಡುಗಿಸಿತು. ದಾರಿಯುದ್ದಕ್ಕೂ ಜನ ನೆರೆದಿದ್ದು ತಮ್ಮ ನಾಯಕನ ಕೊನೆಯ ದರ್ಶನ ಪಡೆದರು. ಮಧ್ಯಾಹ್ನ ನಾಲ್ಕು ಗಂಟೆಯಲ್ಲಿ ಪ್ರಾರಂಭವಾದ ಮೆರವಣಿಗೆ ವಿಮಾನ ನಿಲ್ದಾಣ ತಲುಪುವ ವೇಳೆಗೆ 9 ಗಂಟೆಯಾಯಿತು. ಮುಂದಿನ ಅರ್ಧ ಗಂಟೆಯಲ್ಲಿ ಅಂಬೇಡ್ಕರರನ್ನು ಹೊತ್ತ ವಿಮಾನ ಗಗನಕ್ಕೇರಿತು. ಶಾರದಾ, ಸುದಾಮ, ರತ್ತು, ಭಿಕ್ಕು, ಆನಂದ ಕೌಸಲ್ಯಾಯನ, ಶಂಕರಾನಂದ ಶಾಸ್ತ್ರಿ ಮೊದಲಾದವರು ಅದೇ ವಿಮಾನವಲ್ಲಿ ಮೃತಶರೀರದ ಜತೆಗಿದ್ದರು.

ವಿಮಾನ ಮುಂಬಯಿ ತಲುಪಿದಾಗ ರಾತ್ರಿ 3 ಗಂಟೆ. ನಿಲ್ದಾಣದ ದಾರಿಯಲ್ಲಿ ಮತ್ತು ದಾದರಿನ ರಾಜಗೃಹದಲ್ಲಿ ಅಸಂಖ್ಯಾತ ಜನ ತಮ್ಮ ನಾಯಕನ ಕೊನೆಯ ದರ್ಶನಕ್ಕಾಗಿ ಸಂಜೆಯಿಂದಲೇ ಕಾದಿದ್ದರು. ಮುಂಬಯಿ ನಗರದ ಸ್ಕೂಲು, ಕಾಲೇಜು, ಕಚೇರಿಗಳಿಗೆ ರಜ ಘೋಷಿಸಲಾಯಿತು. ಸೊಲ್ಲಾಪುರ, ನಾಗಪುರ, ಅಹ್ಮದಾಬಾದ್ ಮುಂತಾದ ನಗರಗಳಲ್ಲಿ ಏರ್ಪಡಿಸ ಲಾಗಿದ್ದ ಶೋಕ ಮೆರವಣಿಗೆಯಲ್ಲಿ ಸಹಸ್ರಾರು ಜನ ಭಾಗವಹಿಸಿದ್ದರು. ಮಧ್ಯಾಹ್ನ 1–30 ಗಂಟೆಗೆ ಸ್ಮಶಾನಯಾತ್ರೆ ಪ್ರಾರಂಭವಾಯಿತು. ಹೂಹಾರ ಗಳಿಂದಲಂಕೃತವಾಗಿದ್ದ ಮಿಲಿಟರಿ ಲಾರಿಯಮೇಲೆ ನಿರ್ಮಿಸಲಾಗಿದ್ದ ಪುಷ್ಪ ಭರಿತವಾದ ಉನ್ನತ ವೇದಿಕೆಯಮೇಲೆ ಕಳೇವರವನ್ನು ಮಲಗಿಸಲಾಗಿತ್ತು. ತಲೆದೆಸೆಯಲ್ಲಿ ಬುದ್ಧನ ವಿಗ್ರಹವಿತ್ತು. ಮೆರವಣಿಗೆ ಹರಿದ ರಸ್ತೆಗಳಲ್ಲಿ ವಾಹನ ಸಂಚಾರ ಸ್ಥಗಿತಗೊಂಡಿತ್ತು. ದಾದರ್‌ನ ಹಿಂದೂ ಸ್ಮಶಾನವನ್ನು ತಲುಪಲು ಐದು ಗಂಟೆ ಬೇಕಾಗಿತ್ತು. ದೂರದ ಊರುಗಳಿಂದ ಬಂದಿದ್ದ ಜನ ಬೆಳಗಿನಿಂದ ಊಟವಿಲ್ಲದೆ ಬಿರುಬಿಸಿಲಲ್ಲಿ ಕಾದುಕೊಂಡಿದ್ದರು. ಅಂಗಡಿ ಮನೆ ಮುಂಗಟ್ಟುಗಳ ಮಾಲೀಕರು ಕಳೇವರದಮೇಲೆ ಹೂಮಳೆಗರೆಯು ತ್ತಿದ್ದರು. ಬೌದ್ಧ ಪುರೋಹಿತರು ಉತ್ತರಕ್ರಿಯಾದಿಗಳನ್ನು ನಡಸುವಾಗ ಐದು ಲಕ್ಷ ಜನ ಭಾಗಿಗಳಾಗಿದ್ದರು. ತಮ್ಮ ನಾಯಕರ ಬಯಕೆಯನ್ನು ಪೂರ್ತಿಗೊಳಿಸುವ ಸಲುವಾಗಿ ಒಂದು ಲಕ್ಷ ಜನ ದಹನಸ್ಥಾನದಲ್ಲಿಯೇ

ಬೌದ್ಧಧರ್ಮವನ್ನು ಸ್ವೀಕರಿಸಿದರು. ಸಂಜೆ 7–30 ಗಂಟೆ ಹೊತ್ತಿಗೆ ಯಶವಂತರಾವ್ ಚಿತೆಗೆ ಅಗ್ನಿ ತೋರಿಸಿದಾಗ ನೆರೆದ ಸಮೂಹದಿಂದ ಗೋಳ್ದನಿ ನಿಟ್ಟುಸಿರು ಚೀತ್ಕರಿಸಿದುವು. 'ಬುದ್ಧಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ. ಧರ್ಮಂ ಶರಣಂ ಗಚ್ಛಾಮಿ' ಎಂಬ ಮಂತ್ರೋಚ್ಚಾರಣೆಯ ಗಂಭೀರ ನಿನಾದ ಗಗನಾಂಗಣವನ್ನೆಲ್ಲ ವ್ಯಾಪಿಸಿತು ! "ಮಹಾನಾಯಕ ಅಂಬೇಡ್ಕರರು ತ್ರಿಕರಣಶುದ್ಧಿಯಾಗಿ, ವಿಶಿಷ್ಟ ರೀತಿಯಲ್ಲಿ ದೇಶಸೇವೆಯನ್ನು ನಿರ್ವಹಿಸಿ ನಿರ್ವಾಣ ಹೊಂದಿದರು" ಎಂಬುದಾಗಿ ಭಿಕ್ಕು ಆನಂದ. ಕೌಸಲ್ಯಾಯನರು ಚಿತೆಯ ಬಳಿ ನಿಂತು ಉದ್ಘೋಷಿಸಿದರು. ಮಲಯ, ಸಿಲೋನುಗಳ ಭಿಕ್ಕುಗಳು ಅಭಿನವ ಆನಂದರಿಗೆ ತಮ್ಮ ಪ್ರಣಾಮ ಸಲ್ಲಿಸಿದರು. "ದಲಿತ ಜನರ ಹಕ್ಕುಗಳಿಗಾಗಿ ಅಂಬೇಡ್ಕರರು ಹೋರಾಟ ನಡಸಿದರು. ಕಷ್ಟ ಸಂಕಷ್ಟಗಳಲ್ಲಿ ತೊಳಲಿದರು. ಅವರು ಅನ್ಯಾಯ ಅಸಮಾನತೆಗಳ ವಿರುದ್ಧ ಸಿಡಿದೆದ್ದರು ; ಅದಕ್ಕಾಗಿ ಅನೇಕ ಕಿರುಕುಳಗಳನ್ನನುಭವಿಸಿದರು. ಅವರು ಹಿಂದೂ ಧರ್ಮಕ್ಕೆ ವಿರುದ್ಧವಾಗಿ ಬಂಡಾಯ ಹೂಡಲಿಲ್ಲ. ಅದರ ಸುಧಾರಣೆಗಾಗಿ ಶ್ರಮಿಸಿದರು." ಎಂಬ ಆಚಾರ್ಯ ಪಿ.ಕೆ. ಅತ್ರೆಯವರ ಗಂಭೀರವಾಣಿಯನ್ನು ಕೇಳಿದಾಗ ಜನ ಸಮೂಹ ಶೋಕಸಾಗರದಲ್ಲಿ ಮುಳುಗಿತು.

ದಿ॥ ಅಂಬೇಡ್ಕರರ ಗೌರವಾರ್ಥವಾಗಿ ನಾಡಿನ ಮೂಲೆಮೂಲೆಗಳಲ್ಲಿ ಶೋಕಸಭೆ ಜರುಗಿದುವು : ಮುಕ್ತಕಂಠದಿಂದ ಅವರ ಸೇವೆಯನ್ನು ಕೊಂಡಾಡಿದುವು. "ಹಿಂದೂ ಸಮಾಜದ ದಮನ ಪ್ರವೃತ್ತಿಯ ವಿರೋಧದ ಸಂಕೇತವೆಂದು ಅಂಬೇಡ್ಕರರನ್ನು ಲೋಕ ಸದಾ ಸ್ಮರಿಸಿಕೊಳ್ಳುತ್ತದೆ. ಅವರು ಅನ್ಯಾಯ ಪರಂಪರೆಯನ್ನು ಉಗ್ರವಾಗಿ ವಿರೋಧಿಸುತ್ತಿದ್ದುದರಿಂದ ಜನ ಜಾಗೃತರಾಗಿರುತ್ತಿದ್ದರು. ಅವರು ವಿವಾದಾಸ್ಪದ ವ್ಯಕ್ತಿಯಾಗಿದ್ದರೂ ಸರ್ಕಾರದ ಆಗುಹೋಗುಗಳಲ್ಲಿ ಅವರು ನಿರ್ವಹಿಸಿದ ಪಾತ್ರ ಅಮೋಘವಾದುದು. ಅವರು ಹೂಡಿದ ಬಂಡಾಯ ಅನ್ಯಾಯವಾದದ್ದಲ್ಲ ; ಅದು ಎಲ್ಲರೂ ಭಾಗವಹಿಸಬೇಕಾದ್ದು. ಅವರೊಬ್ಬ ವಿಶಿಷ್ಟ ಅಪರೂಪದ ವ್ಯಕ್ತಿ" ಎಂಬುದಾಗಿ ಪ್ರಧಾನಿ ನೆಹರೂ ಅವರು ಲೋಕಸಭೆಯಲ್ಲಿ ಬಾಬಾ ಸಾಹೇಬರ ಗುಣಗಾನ ಮಾಡಿ, ಆ ದಿನದ ಸಭೆಯನ್ನು ಮುಂದೂಡಿದರು.ಭರತಖಂಡದ ಸಾಮಾಜಿಕ ಪರಿಸ್ಥಿತಿ ಪರಿವರ್ತನೆಯ ಘಟ್ಟದಲ್ಲಿದ್ದಾಗ. ಸಾಮಾಜಿಕ ಕ್ರಾಂತಿಯನ್ನು ತೀವ್ರಗೊಳಿಸಿ, ಮಿಲಿಯಗಟ್ಟಳೆ ದಲಿತರಿಗೆ ಹೊಸಬಾಳಿನ ಸವಿಯ

ನ್ನುಣಿಸಿದ, ಅವರ ಭವ್ಯಭವಿಷ್ಯಕ್ಕೆ ಭದ್ರಬುನಾದಿ ಹಾಕಿದ ಚಾರಿತ್ರಿಕ ವ್ಯಕ್ತಿಯೆಂದು ಬರ್ಮಾದ ಪ್ರಧಾನಿ ಊನೂ ಶ್ರದ್ಧಾಂಜಲಿಯನ್ನರ್ಪಿಸಿದರು. ಮೂವತ್ತು ವರ್ಷಗಳ ಕಾಲ ನಾಡಿನ ರಾಜಕೀಯ ಕ್ಷೇತ್ರದಲ್ಲಿ ವೈವಿಧ್ಯಮಯವೂ ಸತ್ವಪೂರ್ಣವೂ ಸಾಹಸೋಪೇತವೂ ಆದ ಪಾತ್ರವನ್ನಾಡಿದವರೆಂದು, ಪ್ರಜಾತಂತ್ರರಕ್ಷಕರೆಂದು. ಭಾರತಮಾತೆಯ ಸತ್ಪುತ್ರರೆಂದು, ಮಹಾವಕ್ತೃವೆಂದು. ಬಹುಮುಖಪ್ರತಿಭೆಯ ಚಾಣಾಕ್ಷರೆಂದು ಎಲ್ಲ ಪಕ್ಷಗಳೂ ಪತ್ರಿಕೆಗಳೂ ಒಕ್ಕೊರಲಿನಿಂದ ಸಾರಿದುವು.ಅಂಬೇಡ್ಕರರು ನಿರಾಶರಾಗಿದ್ದರೆ, ಕಠಿಣರಾಗಿದ್ದರೆ, ಜಗಳಗಂಟಿಯಾಗಿದ್ದರೆ ಅವರು ಕಾರಣರಲ್ಲ, ಅವರ ಒಂಟಿತನ: ಅಂತೆಯೇ ಆ ಒಂಟಿತನಕ್ಕೆ ಕಾರಣವಾದ ಸಮಾಜ ಎಂಬುದಾಗಿ ಮತ್ತೊಂದು ಪತ್ರಿಕೆ ಸ್ಪಷ್ಟಪಡಿಸಿತು. "ಒಂದೊಂದು ಜ್ಞಾನಶಾಖೆಯಲ್ಲಿ ವಿದ್ವತ್ತು ಗಳಿಸಿರುವ ಮೇಧಾವಿಗಳು ಹಲವರಿದ್ದಾರೆ. ಆದರೆ ಕಾನೂನು, ಅರ್ಥಶಾಸ್ತ್ರ, ಸಮಾಜ ವಿಜ್ಞಾನ, ರಾಜಕೀಯ ಶಾಸ್ತ್ರ ಮತ್ತು ಕಾರ್ಮಿಕತತ್ತ್ವ ಮೊದಲಾದ ಭಿನ್ನ ಸ್ವರೂಪದ ನಾನಾ ಶಾಖೆಗಳಲ್ಲಿ ಪಾಂಡಿತ್ಯಾನುಭವಗಳನ್ನು ಸಂಪಾದಿಸಿಕೊಂಡಿರುವ ಮನೀಷಿಗಳು ವಿರಳ. ಅಂಥವರಲ್ಲಿ ಅಂಬೇಡ್ಕರರೊಬ್ಬರು. ಅನುಕೂಲ ಪರಿಸ್ಥಿತಿಯಲ್ಲಿ ದೇಶಕ್ಕೆ ಮಾತ್ರವಲ್ಲ. ಸಾಹಿತ್ಯಕ್ಷೇತ್ರಕ್ಕೂ ಅವರಿಂದ ಮತ್ತೂ ಮಹತ್ತರವಾದ ಸೇವೆಯನ್ನು ನಿರೀಕ್ಷಿಸಬಹುದಾಗಿತ್ತು" ಎಂಬುದಾಗಿ ಕಲ್ಕತ್ತೆಯ ಸ್ಟೇಟ್ಸ್‌ಮನ್ ಪತ್ರಿಕೆ ಅವರನ್ನು ಕೊಂಡಾಡಿತು.

ಅಂಬೇಡ್ಕರ್ ಅಂತ್ಯಜರಾಗಿ ಹುಟ್ಟಿದರೂ ಅಸ್ಪೃಶ್ಯರಾಗುಳಿಯದೆ ಮಹಾಮಾನವರಾದರು, ಭಾರತೀಯರಾಗಿ ಜನಿಸಿದರೂ ವಿಶ್ವಮಾನವರಾದರು. ಅವರು ಭಾರತದ ನಿಮ್ನ ವರ್ಗೀಯರಲ್ಲಿ ಪ್ರಪಂಚದ ಪತಿತ ಜನಾಂಗಗಳ ಗೋಳನ್ನು ಗುರುತಿಸಿದರು, ಅವರ ಮೂಕ ವೇದನೆಗೆ ನಾಲಗೆಯಾದರು, ಅಶೋತ್ತರಗಳಿಗೆ ವರದರಾಜರಾದರು, ಜಡತನಕ್ಕೆ ಚೈತನ್ಯಶಕ್ತಿಯಾದರು : ಅವರಿಗೆ ಊರೆಯಾದರು. ಧ್ರುವತಾರೆಯಾದರು. ಅವರು ಮನುಕುಲದ ಗೌರವದ. ಮಾನವೀಯತೆಯ, ಸ್ವಾಭಿಮಾನದ. ಹೋರಾಟದ ಸಂಕೇತವಾದರು. ಅನ್ಯಾಯ ಅಸಮಾನತೆ ದಬ್ಬಾಳಿಕೆ ಮತ್ತು ಸುಲಿಗೆಗಳ ವಿರುದ್ಧ ಹೂಡಿದ ಹೋರಾಟದ ಸಾಹಸದ ಕಥೆಯೇ ಅವರ ಜೀವನ. ಕೆಲವು ಆಕಸ್ಮಿಕ ಘಟನೆ ಸಂಬಂಧಗಳು ಅವರ ಸುಪ್ತಶಕ್ತಿಗಳ ವಿಕಾಸಕ್ಕೆ ಕಾರಣವಾದುವೆಂಬುದು ನಿಜ ಚಿಕ್ಕಂದಿನಲ್ಲಿ ಬಾಯಿಪಾಠಮಾಡಿದ್ದ ಕಬೀರರ ಹಾಡುಗಳು ಜೀವನಾಂತ್ಯದ

ವರೆಗೆ ಅವರ ಬಾಳಿನ ಬುತ್ತಿಯಾಗಿದ್ದುವು. ಮಹಾತ್ಮ ಫೂಲೆಯವರ ದಲಿತೋದ್ಧಾರ ಕಾರ್ಯ ಅವರಿಗೆ ಮಾರ್ಗದರ್ಶನವಾಯಿತು. ನಾನಕ್, ವಿವೇಕಾನಂದ, ರಾಜಾರಾಮಮೋಹನ್‌ರಾಯ್, ಸಾವರ್‌ಕರ್, ಅವರ ವಿಚಾರಧಾರೆ ಅವರ ಯೋಜನೆಗಳಿಗೆ ಒತ್ತಾಸೆಯಾಯಿತು. ಬೂಕರ್ ಟಿ. ವಾಷಿಂಗ್‌ಟನ್ನನ ನೀಗ್ರೋವಿಮೋಚನಾಂದೋಳನ ನೀಡಿದ ಸ್ಫೂರ್ತಿ ಅವರಿಗೆ ಅಕ್ಷಯನಿಧಿಯಾಯಿತು. ಎಡ್ಮಂಡ್ ಬರ್ಕ್, ಥಾಮಸ್ ಜಫರ್‌ಸನ್ ಮೊದಲಾದ ಪಾಶ್ಚಾತ್ಯ ರಾಜನೀತಿ ವಿಶಾರದರು ಅವರಿಗೆ ರಾಜಕೀಯ ಗುರುಗಳಾದರು. ಅಮೆರಿಕೆಯ ಸ್ವಾತಂತ್ರ್ಯ ಸಂಗ್ರಾಮದ ಕಥೆ ಅವರ ದಾಸ್ಯ ಮನೋಭಾವವನ್ನು ತೊಲಗಿಸಿ, ಹುರುಪು ಹುಮ್ಮಸ್ಸುಗಳನ್ನು ತುಂಬಿತು. ಎಲ್ಲಕ್ಕಿಂತ ಮಿಗಿಲಾಗಿ ಬುದ್ಧನ ಸಂಬಂಧ ಅವರ ಚಿಂತನೆ ಮತ್ತು ಸಾಧನೆಗಳಿಗೆ ತಾತ್ವಿಕತೆಯ ನೆಲಗಟ್ಟನ್ನೂ ದಾರ್ಶನಿಕತೆಯ ಸತ್ವವನ್ನೂ ಒದಗಿಸಿತು. ಈ ಎಲ್ಲ ಪ್ರಭಾವಗಳ ಪರಿಣಾಮವಾಗಿ ಅವರಲ್ಲಿ ಆದರ್ಶ ವಾಸ್ತವತೆಗಳ ಸಂಗಮವನ್ನೂ, ಚಿಂತನ ಪಾಂಡಿತ್ಯ ಕ್ರಿಯಾಶೀಲತೆಗಳ ಸಮ್ಮಿಲನವನ್ನೂ, ಧಾರ್ಮಿಕತೆ ಮತ್ತು ಕ್ರಾಂತಿ ಮನೋಧರ್ಮಗಳ ಸಮಾಗಮವನ್ನೂ ಕಾಣಬಹುದಾಗಿದೆ. ಆದರೆ ಅವರ ಯಶಸ್ಸಿಗೆ ಸ್ವಶಕ್ತಿ ಪ್ರತಿಭೆಗಳೇ ಮೂಲಕಾರಣವೆಂಬುದನ್ನು ಮರೆಯುವಂತಿಲ್ಲ.

ಅಂಬೇಡ್ಕರರು ಪ್ರಥಮವಾಗಿ ಸಮಾಜಸುಧಾರಕರು. ಸ್ವಾತಂತ್ರ್ಯ, ಸಮಾನತೆ ಮತ್ತು ಸೋದರತ್ವಗಳ ಆಧಾರದ ಮೇಲೆ ಸಮಾಜ ಸುಧಾರಣೆಯಾಗದಿದ್ದರೆ, ಅರ್ಥಾತ್ ಸಾಮಾಜಿಕ ಪ್ರಜಾಸತ್ತೆ ನೆಲೆಗೊಳ್ಳದಿದ್ದರೆ ರಾಜಕೀಯಾರ್ಥಿಕ ಸ್ವಾತಂತ್ರ್ಯಗಳು ಗಗನ ಕುಸುಮವಾಗುತ್ತವೆಂದೂ ಪ್ರಜಾಸತ್ತೆ ಕೇವಲ ನಾಟಕವಾಗುತ್ತದೆಂದೂ ಅವರು ಬಗೆದಿದ್ದರು. ಅಷ್ಟೇ ಅಲ್ಲ, ನಾಡಿನ ಸರ್ವಾಂಗೀಣ ಪ್ರಗತಿಗೆ ಸಾಮಾಜಿಕ ಕ್ರಾಂತಿ ಅನಿವಾರ್ಯವೆಂಬುದು ಅವರ ಮತ. ಮಾರ್ಟಿನ್ ಲ್ಯೂಥರನ ಧಾರ್ಮಿಕ ಕ್ರಾಂತಿ ಯೂರೋಪಿನ ಪುನರುಜ್ಜೀವನಕ್ಕೆ ವರವಾಯಿತೆಂಬುದನ್ನು ಮರೆಯುವಂತಿಲ್ಲ. ಎರಡು ಸಾವಿರ ವರ್ಷಗಳಿಂದ ಹಿಂದೂಧರ್ಮದಲ್ಲಿ ಮಹತ್ತರವಾದ ಮಾರ್ಪಾಡುಗಳಾಗಿಲ್ಲವೆಂದೂ, ಅಂದಿನ ಸ್ಮೃತಿಗಳೇ ಆಧುನಿಕ ಸಮಾಜವನ್ನು ನಿಯಂತ್ರಿಸುತ್ತಿರುವುದು ಸಮನಲ್ಲವೆಂದೂ, ಅಸಮಾನತೆಯ ಹುಸಿ ತಳಹದಿಯ ಮೇಲೆ ನಿಂತಿರುವ ಆ ಧರ್ಮ ಸರ್ವಗ್ರಾಹ್ಯಯೋಗ್ಯವಲ್ಲವೆಂದೂ, ಪ್ರಜಾಸತ್ತಾತ್ಮಕ ತತ್ತ್ವಗಳ

ಆಧಾರದ ಮೇಲೆ ಅದನ್ನು ಪರಿಷ್ಕರಿಸದಿದ್ದರೆ ಅದರ ಪತನ ಮಾತ್ರವಲ್ಲ, ಭಾರತದ ವಿನಾಶವೂ ಖಚಿತವೆಂದೂ ಅವರು ಸಾರಿಸಾರಿ ಹೇಳಿದರು. ಪುರೋಹಿತಶಾಹಿಯ ಪ್ರಾಬಲ್ಯದಿಂದಾಗಿ ಜಾತಿ ಸಮಸ್ಯೆ ಉಲ್ಬಣಗೊಂಡದ್ದಲ್ಲದೆ, ಅನ್ಯಮತಗಳ ವಿಜೃಂಭಣೆ ಮತ್ತು ರಾಜಕೀಯ ದಾಸ್ಯ ಸಾಧ್ಯವಾಯಿತೆಂಬುದು ಅವರ ವಾದ. ಅಸ್ಪೃಶ್ಯರಿಗೆ ಸಮಾಜದಲ್ಲಿ ಉಚಿತ ಸ್ಥಾನಮಾನಗಳನ್ನು ಕೊಟ್ಟು, ಅವರು ಯೋಧರರಾಗಿ ಯುದ್ಧದಲ್ಲಿ ದುಡಿಯುವಂತಿದ್ದರೆ ಪರರಾಜರ ಆಕ್ರಮಣ ದುಸ್ಸಾಧ್ಯವಾಗುತ್ತಿತ್ತೆಂದು ಅವರು ಸ್ಪಷ್ಟೀಕರಿಸಿದ್ದಾರೆ. ಶೂದ್ರರ ಪರವಾಗಿಯೂ ಈ ಮಾತು ಅನ್ವಯಿಸುತ್ತದೆ. ಆದ್ದರಿಂದ ಅಸಮಾನತೆಯನ್ನು ಬೋಧಿಸುವ ಪವಿತ್ರ ಗ್ರಂಥಗಳು ಭಸ್ಮವಾಗಬೇಕು, ಚಾತುರ್ವರ್ಣ್ಯ ಪದ್ಧತಿ ನಿರ್ಮೂಲಗೊಳ್ಳಬೇಕು, ಹಿಂದೂ ಧರ್ಮಶಾಸ್ತ್ರ ಆಧುನಿಕ ಯುಗಕ್ಕೊಪ್ಪುವಂತೆ ಪರಿಷ್ಕಾರಗೊಳ್ಳಬೇಕು ಎನ್ನುವುದೇ ಅವರ ಸಿದ್ಧಾಂತವಾಗಿತ್ತು. ಪುರಾತನ ಪ್ರತಿಮಾವಿಸರ್ಜನೆಯ ಮೂಲಕ ಸಾಮಾಜಿಕ ಕ್ರಾಂತಿಯನ್ನು ಸಂಘಟಿಸುವುದೇ ಅವರ ಜೀವನದ ಸರ್ವೋದ್ದೇಶವಾಗಿತ್ತು.

ಅವರ ಮನೋಧರ್ಮವನ್ನಾಗಲೀ ಹೃದಯ ವೇದನೆಯನ್ನಾಗಲೀ ವಿಚಾರಧಾರೆಯನ್ನಾಗಲೀ ಅರಿಯದ ಸವರ್ಣ ಹಿಂದುಗಳು ಮತ್ತು ಕಾಂಗ್ರೆಸ್ಸಿಗರು ಅವರನ್ನು ದೇಶದ್ರೋಹಿಯೆಂದು. ಜಾತ್ಯಂಧರೆಂದು. ಸ್ವಾರ್ಥಿಯೆಂದು. ಆಂಗ್ಲರ ಕೈಗೊಂಬೆಯೆಂದು ದೂರಿದ್ದುಂಟು. ಅನೌದಾರ್ಯದಿಂದ ಕೂಡಿದ ಆ ದೂರಿನಲ್ಲಿ ಲವಲೇಶವೂ ಸತ್ಯವಿಲ್ಲ. ಅವರು ಸ್ವಾರ್ಥಿಯಾಗಿದ್ದರೆ ಸಂಪೂರ್ಣವಾಗಿ ಆಂಗ್ಲ ಸರ್ಕಾರದ ಕಡೆ ವಾಲಬಹುದಿತ್ತು : ಅಧಿಕಾರ ಸಂಪತ್ತುಗಳನ್ನು ಗಳಿಸಬಹುದಿತ್ತು : ಅಥವಾ ಕಾಂಗ್ರೆಸ್ ಪಕ್ಷವನ್ನು ಸೇರಿ ನಾಯಕರಿಗೆ ಅಡಿಯಾಳಾಗಿ ಆಜೀವ ಪರ್ಯಂತ ಅಧಿಕಾರದಲ್ಲಿ ಮೆರೆಯಬಹುದಿತ್ತು. ಅಡಿಯಾಳುತನ. ಡೊಗ್ಗುಸಲಾಮು. ಸಾಷ್ಟಾಂಗ ನಮಸ್ಕಾರ ಅವರ ಜಾಯಮಾನಕ್ಕೊಗ್ಗುವಂಥವಲ್ಲ. ಅಷ್ಟೇ ಅಲ್ಲ, ಕಾಂಗ್ರೆಸ್ ಪಕ್ಷ ಸೇರಿದ್ದರೆ ಅವರು ವ್ಯಕ್ತಿತ್ವವನ್ನು ಕಳೆದುಕೊಂಡು, ಸೊನ್ನೆಯಾಗುತ್ತಿದ್ದರು. ಶಿಸ್ತಿನ ಹೆಸರಿನಲ್ಲಿ ದಲಿತ ಜನರ ಪರವಾಗಿ ಹೋರಾಡುವಂತಿರಲಿಲ್ಲ. ಹೋರಾಟ ನಡಸದೆ ಇಂದು ಅವರಿಗೆ ದೊರೆತಿರುವ ಸವಲತ್ತುಗಳು ಕೈಗೆಟಕುವಂತಿರಲಿಲ್ಲ. ಸಾವಿರಾರು ವರ್ಷಗಳಿಂದ ದಾರಿದ್ರ್ಯ ದುಃಖ ಹೊರತಾಗಿ ಬೇರೇನನ್ನೂ ಕಾಣದ ಜನತೆಯ ನಡುವೆ ಹುಟ್ಟಿದ ವ್ಯಕ್ತಿಯೊಬ್ಬರು ಅವರ ಏಳ್ಗೆಗಾಗಿ ಹೋರಾಟ

ನಡಸುವಾಗ ಅವರ ಕರ್ತವ್ಯಪರಾಯಣತೆಯನ್ನು ಮೆಚ್ಚದೆ ಅವರನ್ನು ಜಾತ್ಯಂಧರೆಂದು ಕರೆಯುವುದೇ ಮಹಾಪರಾಧವಾಗುತ್ತದೆ. ಬೇರೆ ಯಾರೂ ಅವರ ದುಃಖಭಾರವನ್ನಿಳಿಸಲು ಮುಂದೆ ಬಾರದಿದ್ದಾಗ, ಅವರ ಕರ್ತವ್ಯ ಪರಾಙ್ಮುಖತೆಯನ್ನು ಬೆರಳಿಟ್ಟು ತೋರಿಸಿದ್ದಕ್ಕಾಗಿ ಅವರಿಗೆ ಕೃತಜ್ಞರಾಗಿರ ಬೇಕಾದ್ದು ರಾಷ್ಟ್ರನಾಯಕರ ಧರ್ಮ. ಕಾಂಗ್ರೆಸ್ಸಿಗರೇ ದೇಶ ಸೇವಕರು, ಅವರು ಹೇಳಿದಂತೆ ಕುಣಿಯುವವರೇ ದೇಶಾಭಿಮಾನಿಗಳು, ಉಳಿದವರೆಲ್ಲ ದೇಶದ್ರೋಹಿ ಗಳೆಂದು ತಿಳಿಯುವ ಜನ ಮೂರ್ಖರಲ್ಲದೆ ವಿವೇಕಿಗಳಲ್ಲ.

ಅಂಬೇಡ್ಕರ್ ಪ್ರಜಾಸತ್ತೆಯಲ್ಲಿ ನಂಬಿಕೆಯುಳ್ಳ ಸಮಾಜವಾದಿ. ಸಾಮೂಹಿಕ ವ್ಯವಸಾಯ ಮತ್ತು ಕೈಗಾರಿಕೀಕರಣಗಳ ಮೂಲಕ ಭಾರತದ ದಾರಿದ್ರ್ಯ ನಿರ್ಮೂಲನ ಮತ್ತು ಆಹಾರಾಭಾವ ನಿವಾರಣೆ ಸಾಧ್ಯವೆಂಬುದು ಅವರ ಮತ. ಮೊದಲು ಭೂಮಿತಿ ಶಾಸನ ಜಾರಿಗೆ ಬರಬೇಕು. ಹೆಚ್ಚುವರಿ ಜಮೀನು ಸರ್ಕಾರದ ಆಸ್ತಿಯಾಗಬೇಕು : ಅದು ನಿರ್ಗತಿಕ ರೈತರಿಗೆ, ಪ್ರಮುಖವಾಗಿ ನಿಮ್ನ ಜನರಿಗೆ ಹಂಚಿಕೆಯಾಗಬೇಕು : ಹಂಚುವುದಕ್ಕಿಂತ ಸಾಮೂಹಿಕ ಕ್ಷೇತ್ರಗಳನ್ನು ವ್ಯವಸ್ಥೆಗೊಳಿಸಬೇಕು. ನಿರುದ್ಯೋಗಿಗಳಿಗೆ ಉದ್ಯೋಗ ಒದಗಿಸುವ ಸಲುವಾಗಿ ಕೈಗಾರಿಕೆಗಳನ್ನು ಸ್ಥಾಪಿಸಬೇಕು. ಯಂತ್ರೀ ಕರಣದ ಮೂಲಕ ಉತ್ಪತ್ತಿಯನ್ನು ಹೆಚ್ಚಿಸಿಕೊಳ್ಳಬೇಕು : ಜನರಿಗೆ ವಿರಾಮ ದೊರಕುವಂತಾಗಬೇಕು : ಆ ವಿರಾಮ ಬೌದ್ಧಿಕ ವಿಕಾಸಕ್ಕೂ ಧಾರ್ಮಿಕ ವ್ಯವಸಾಯಕ್ಕೂ ಬಳಕೆಯಾಗಬೇಕು.

ಮಾನವ ಸ್ವತಂತ್ರವಾಗಿ, ಹಸನಾಗಿ ಬದುಕಬೇಕಾದರೆ, ಅವನಲ್ಲಿಯ ಪಾಶವಿಕತೆ ತೊಲಗಬೇಕಾದರೆ ಯಂತ್ರೀಕರಣ ಮತ್ತು ಆಧುನಿಕ ನಾಗರೀಕತೆ ಗಳೆರಡೂ ಅನಿವಾರ್ಯ. ಕೃಷಿಯೊಂದೇ ನಾಡಿನ ಬಡತನವನ್ನು ನೀಗಲಾರದು. ಕೈಗಾರಿಕೆಗಳ ಸ್ಥಾಪನೆಯಿಂದ, ಆಧುನಿಕ ನಾಗರಿಕತೆಯಿಂದ ಮಾಲಿನ್ಯಗಳು ಪ್ರಾಪ್ತವಾಗುತ್ತವೆ. ಸಮಾಜದಲ್ಲಿ ಏರುಪೇರುಗಳುಂಟಾಗುತ್ತವೆಂದು ಕೈ ಕಟ್ಟಿ ಕುಳಿತುಕೊಂಡರೆ ಆರ್ಥಿಕ ಹಿಂಜರಿತ ಸಂಭವಿಸುತ್ತದೆ. ಆರ್ಥಿಕ ವಿಷಯ ಗಳನ್ನು ಕುರಿತು ಚಿಂತಿಸುವಾಗ ಜಗತ್ತಿನ ಇತರ ರಾಷ್ಟ್ರಗಳನ್ನು ಗಮನದಲ್ಲಿರಿಸಿ ಕೊಳ್ಳಬೇಕಾಗುತ್ತದೆ. ಇಂದಿನ ಪರಿಸ್ಥಿತಿಯಲ್ಲಿ ಭಾರತವೊಂದೇ ಪ್ರತ್ಯೇಕ ದ್ವೀಪವಾಗುಳಿಯಲಾರದು. ಒಂದು ರಾಷ್ಟ್ರದಲ್ಲಾದ ಸಾಮಾಜಿಕಾರ್ಥಿಕ ರಾಜ ಕೀಯ ಪರಿವರ್ತನೆ ಇತರ ರಾಷ್ಟ್ರಗಳ ಮೇಲೆಯೂ ಪ್ರಭಾವ ಬೀರುತ್ತದೆ.

ಮಾನವನ ಶ್ರೇಯಸ್ಸಿಗೆ ಹಾಗೂ ಸಮಾಜದ ಭದ್ರತೆಗೆ ಧರ್ಮ ಅತ್ಯಗತ್ಯವೆಂಬುದು ಅಂಬೇಡ್ಕರರ ಖಚಿತಾಭಿಪ್ರಾಯ. ತರುಣಜನಾಂಗದ ಧರ್ಮನಿರಸನ ಪ್ರವೃತ್ತಿಯನ್ನು ಕಂಡು ಅವರು ಮರುಗಿದ್ದುಂಟು. "ಇವರ ಧಾರ್ಮಿಕನಿರ್ಲಕ್ಷ್ಯ ನನ್ನ ಮನಸ್ಸಿಗೆ ನೋವುಂಟುಮಾಡಿದೆ. ಕೆಲವರು ಹೇಳು ವಂತೆ ಧರ್ಮ ಅಫೀಮಲ್ಲ. ನನ್ನಲ್ಲಿರುವ ಒಳ್ಳೆಯ ಗುಣಗಳಿಗೆ ಧಾರ್ಮಿಕ ಮನೋಭಾವನೆಯೇ ಕಾರಣ. ನನಗೆ ಧರ್ಮಬೇಕು. ಆದರೆ ಧರ್ಮದ ಹೆಸರಿನಲ್ಲಿ ನಡೆಯುವ ವಂಚನೆ ದ್ರೋಹಗಳು ಬೇಡ. ಧರ್ಮ ಮನುಷ್ಯನಿಗೆ ಭರವಸೆನೀಡಿ, ಕ್ರಿಯಾಶೀಲರನ್ನಾಗಿ ಮಾಡುತ್ತದೆ. ಅಸಮಾನತೆಯನ್ನು ಪುರ ಸ್ಕರಿಸುವ, ಸಾಮಾಜಿಕ ಭದ್ರತೆಗೆ ನೆರವಾಗದ ಧರ್ಮ ತ್ಯಾಜ್ಯ. ವೈಚಾರಿಕತೆ ಮತ್ತು ವೈಜ್ಞಾನಿಕ ದೃಷ್ಟಿಗಳು ಅದರ ಜೀವಾಳವಾಗಬೇಕು. ಅದು ಮತ್ತು ವಿಜ್ಞಾನ ಪರಸ್ಪರ ಪೂರಕವಾಗಬೇಕು. ಅದು ದಾರಿದ್ರ್ಯ ಭಿಕ್ಷುಕವೃತ್ತಿಗಳಿಗೆ ಪುರಸ್ಕಾರ ನೀಡಬಾರದು. ದಾಸ್ಯ ಯಾವ ರೂಪದಲ್ಲಿಯೇ ಇರಲಿ, ಅದು ಇದ್ದೆಡೆ ಧರ್ಮವಿರಲಾರದು. ಹೇಡಿತನ ಬೋಧಿಸುವಂಥದು ಧರ್ಮವಲ್ಲ. ಈ ವಿಷಯದಲ್ಲಿ ನಮಗೆ ಭಗವದ್ಗೀತೆ ಆದರ್ಶವಾಗಬೇಕು."

ಅಂಬೇಡ್ಕರರು ನಿಸ್ಸಂಗಿಗಳು, ಏಕಾಂತಪ್ರಿಯರು, ಧ್ಯಾನಲೋಲರು, ಜ್ಞಾನಭಿಕ್ಷುಗಳು ; ಅಧ್ಯಯನ, ಅಧ್ಯಾಪನ, ಚಿಂತನ ಮಂಥನ, ಲೇಖನ ಇತ್ಯಾದಿ ಋಷಿ ಸಹಜ ಕ್ರಿಯೆಗಳು ಅವರಿಗೆ ಬಹುಪ್ರಿಯ. ಅಸ್ಪೃಶ್ಯತೆಯ ಶಾಪದಿಂದಾಗಿ ಅವರು ಸವರ್ಣ ಹಿಂದೂಗಳಿಂದ ದೂರ ಸರಿಯಬೇಕಾಯಿತು. ಜ್ಞಾನ ಮೇರುವನ್ನಡರಿದ್ದರಿಂದ ಅವರ ಜನ ಯೋಜನ ದೂರ ಉಳಿಯು ವಂತಾಯಿತು. ಈ ಕಾರಣಕ್ಕಾಗಿ ಅವರನ್ನು ಜನನಾಯಕರೆಂದು ಕರೆಯುವುದು ಕಷ್ಟವಾಗುತ್ತದೆ. ಮಗನ ಮದುವೆಯ ಕಡೆಗು ಸಹ ತಿರುಗಿ ನೋಡದ ಅಪೂರ್ವ ನಿರ್ಲಿಪ್ತತೆ ಅವರದು. ಆದರೆ ದಲಿತರ ಬಗೆಗಿನ ಕಾರುಣ್ಯ ಸಹಾನು ಭೂತಿಗಳು ಅವರನ್ನು ರಾಜಕೀಯ ಕ್ಷೇತ್ರಕ್ಕೆ ಸೆಳೆಯುತ್ತವೆ. ಅವರು ಶ್ರೇಷ್ಠ ಪ್ರಾಧ್ಯಾಪಕರೂ ಅಹುದು. ಅದ್ವಿತೀಯ ಪಂಡಿತರೂ ಅಹುದು. ಅವರು ಶಿಕ್ಷಣ ಕ್ಷೇತ್ರದಲ್ಲಿದ್ದುಕೊಂಡೇ ರಚನಾತ್ಮಕ ಕಾರ್ಯಕಲಾಪಗಳ ಮೂಲಕ ಸಮಾಜಕ್ಕೆ ಅಭೂತಪೂರ್ವ ಸೇವೆ ಸಲ್ಲಿಸಬಹುದಿತ್ತು. ಆದರೆ ರಾಜಕೀಯ ಕ್ಷೇತ್ರಕ್ಕಿಳಿಯದಿದ್ದರೆ ತಾವು ನಿರೀಕ್ಷಿಸಿದ ಸಾಮಾಜಿಕ ಕ್ರಾಂತಿ ಸಾಧ್ಯವಾಗು ತ್ತಿರಲಿಲ್ಲವೆಂಬ ಅರಿವು ಅವರಿಗಿತ್ತು.

ಈಗ ನಮ್ಮ ಮುಂದಿರುವುದು ಆ ಮಹಾಪುರುಷನ ಅಸ್ಪೃಶ್ಯ ಶರೀರ ವಲ್ಲ ; ಸೂಕ್ಷ್ಮ ಶರೀರಿಯಾಗಿರುವ ದಿವ್ಯ ಚೇತನ. ಅವರ ನುಡಿ ನಮ್ಮ ಉಸಿರಾಗಿ, ಅವರ ನಡೆ ನಮ್ಮ ಬದುಕಾಗಿ, ಅವರ ಬೋಧನೆ ನಮಗೆ ದಾರಿ ದೀಪವಾಗಿ, ಅವರ ಅಭೀಪ್ಸೆ ಈಗಳಾದರೂ ಸಂಪೂರ್ಣವಾಗಿ ನೆರವೇರುವು ದಾದರೆ ರಾಷ್ಟ್ರದ ಭವಿಷ್ಯ ಉಜ್ವಲವಾಗುತ್ತದೆ. ಇಲ್ಲವಾದರೆ ಅದು ಒಡೆದ ಕನ್ನಡಿಯಾಗುತ್ತದೆ. ಅಂತಾಗದಿರಲೆಂದು ಹರಸುವಂತೆ, ನಮಗೆ ಸದ್ಬುದ್ಧಿ ಕೊಡುವಂತೆ, ನಮ್ಮ ಕೈ ಹಿಡಿದು ನಡಸುವಂತೆ, ಸೂಕ್ಷ್ಮ ರೂಪದಲ್ಲಿ ನಾಡಿಗೆ ರಕ್ಷೆಯಾಗಿರುವಂತೆ ಹಿಂದಿನ ಎಲ್ಲ ದಿವ್ಯಚೇತನಗಳನ್ನೂ ಪ್ರತಿನಿತ್ಯ ಆವಾಹಿ ಸೋಣ.

ಕವಿಋಷಿ ಸಂತರ ಆದರ್ಶದಲಿ
ಸರ್ವೋದಯವಾಗಲಿ ಸರ್ವರಲಿ

ಎಂದು ಪ್ರಾರ್ಥಿಸೋಣ.

ಮತ್ತಾ ಸುಖ ಪರಿಚ್ಚಾಗಾ
ಪಸ್ಸೆ ಚೆ ವಿಪುಲಮ್ ಸುಖಮ್
ಚಜೆ ಮತಾ ಸುಖಂಧೀರೊ
ಸಂಪಸ್ಸಂ ವಿಪುಲಮ್ ಸುಖಮ್[1]

ಏಕಾಸನಮ್ ಏಕಸೆಯ್ಯಮ್
ಏಕೊ ಚರಮತಂದಿತೊ
ಏಕೊ ದ ಮಯಂ ಅತ್ತಾನಮ್
ವನಂತೇ ರಮಿತೊ ಸಿಯಾ[2]

---

1. ಅಲ್ಪಸುಖತ್ಯಾಗದಿಂದ ಪರಮ ಸುಖ ಲಭಿಸುತ್ತದೆ. ವಿವೇಕಿಗಳು ಪರಮ ಸುಖವನ್ನು ಧ್ಯೇಯವಾಗಿಟ್ಟುಕೊಂಡು ಅಲ್ಪಸುಖವನ್ನು ತ್ಯಜಿಸಲಿ.

2. ಒಂಟಿಯಾಗಿ ಕುಳಿತವನು, ಒಂಟಿಯಾಗಿ ನಡೆದವನು, ಒಂಟಿಯಾಗಿ ಮಲಗಿ ದವನು, ಸಂಯಮವನ್ನು ಸಾಧಿಸಿದವನು ಕಾಂತಾರದ ಏಕಾಂತದಲ್ಲಿ ಆನಂದ ವನ್ನನುಭವಿಸುತ್ತಾನೆ.

ಅಂಬೇಡ್ಕರ್ ಅವರು ನಿಮ್ನಜನರ ನಾಯಕರು ಮಾತ್ರವಲ್ಲ, ಜಗತ್ತಿನ ದಲಿತಜನ ಜಾಗೃತಿಯ ಸಂಕೇತ ; ಬರಿಯ ರಾಜ್ಯ ನಾಯಕರಲ್ಲ, ಅಗ್ರಗಣ್ಯ ರಾಷ್ಟ್ರನಾಯಕರು ; ರಾಜಕೀಯ ತತ್ತ್ವಜ್ಞಾನಿ ಮಾತ್ರವಲ್ಲ ; ಸಾಮಾಜಿಕ ಕ್ರಾಂತಿಕಾರರು ; ಹೋರಾಟಗಾರರು ಮಾತ್ರವಲ್ಲ, ಮಹಾ ವಿದ್ವಾಂಸರು ; ಧರ್ಮವಿರೋಧಿಯಲ್ಲ, ಧರ್ಮೋದ್ಧಾರಕರು ; ಕ್ರಿಯಾಜ್ಞಾನಗಳ ಸಮನ್ವಯವನ್ನು ಸಾಧಿಸಿದ ಮಹಾಪುರುಷರು. ಅವರಂಥ ಹಿರಿಯ ಚೇತನಗಳ ಹಾಗೂ ಸಾಧಕರ ಜೀವನಕತೆಗಳ ಸರಮಾಲೆಯೇ ರಾಷ್ಟ್ರದ ಇತಿಹಾಸವಾಗುತ್ತದೆ. ಕಾಲ ಹಿಂದೆ ಹಿಂದಕ್ಕೆ ಸರಿದಂತೆಲ್ಲ ಸ್ವಾತಂತ್ರ್ಯಸಂಗ್ರಾಮ ಸಮಯದ ಕೋಲಾಹಲದಲ್ಲಿದ್ದ ಗಸ್ಟು ತಳಕ್ಕಿಳಿದು, ನೀರು ತಿಳಿಗೊಂಡಂತೆಲ್ಲ ಅಂಬೇಡ್ಕರರ ವ್ಯಕ್ತಿತ್ವದ ಮಹತ್ತು ಜನರಿಗರಿವಾದೀತೆಂದು ಆಶಿಸಬಹುದಾಗಿದೆ.

ಅವರ ಮಾತು ದಾರಿದೀಪವಾದಾಗ, [illegible] ಕೃತಿ ಮಾರ್ಗದರ್ಶಕವಾದಾಗ ಭಾರತ ವಿಶ್ವರಾ[illegible] ಅಗ್ರಪಂಕ್ತಿಯಲ್ಲಿ ನಿಲ್ಲುವ ಅರ್ಹತೆಯನ್ನು ಪಡೆಯಲು ಸಮರ್ಥವಾಗುತ್ತದೆ.